ಎ. ಎಸ್. ಪುಷ್ಕಿನ್



# ದುಬ್ರೋವ್ಸ್ಕಿ

ಭಾಷಾಂತರ:
ಕೆ. ಎಲ್. ಗೋಪಾಲಕೃಷ್ಣರಾವ್, ಬಿ. ಎ. (ಆನರ್ಸ್)





ಪೀಪಲ್ಸ್ ಬುಕ್ ಹೌಸ್
ಜಗನ್ಮೋಹನ ಅರಮನೆ ಎದುರು, ಮೈಸೂರು

ಪ್ರಥಮ ಕನ್ನಡ ಮುದ್ರಣ : ಡಿಸೆಂಬರ್ ೧೯೫೬

DUBROVSKY—A. S. PUSHKIN

This Kannada translation of Dubrovsky by A. S. Pushkin has been published by the kind co-operation of V/O Mezhdunarodnaya Kniga Moscow 200—U. S. S. R.



ಪ್ರಕಾಶಕರು :

ಡಿ. ಆರ್. ಕೃಷ್ಣಮೂರ್ತಿ, ಬಿ.ಎ.



ಬೆಲೆ ರೂ. ೧-೦-೦

ಮುದ್ರಕರು :

ಶ್ರೀ ಶಕ್ತಿ ಎಲೆಕ್ಟ್ರಿಕ್ ಪ್ರೆಸ್

ಕೃಷ್ಣಮೂರ್ತಿಪುರಂ, ಮೈಸೂರು

# ಮುನ್ನುಡಿ

ಸಂಸ್ಕೃತ, ಕನ್ನಡ, ಇಂಗ್ಲಿಷ್, ಫ್ರೆಂಚ್–ಯಾವ ಭಾಷೆಯೇ ಇರಲಿ, ಆ ಭಾಷೆಯ ಸಾಹಿತ್ಯವನ್ನು ಪ್ರಾಚೀನಕಾಲದಿಂದ ಈವರೆಗೆ ಅವಲೋಕನ ಮಾಡುವಾಗ ಹೆಗ್ಗುರುತುಗಳಾಗಿ ಸಿಗುವ ಉದ್ದಾಮ ಬರೆಹಗಾರರು ಕೆಲವೇ ಜನ. ಕೈ ಬೆರಳುಗಳಲ್ಲಿ ಎಣಿಸಬಹುದಾದಷ್ಟು ಸಣ್ಣ ಸಂಖ್ಯೆ ಅವರದು.

ರಷ್ಯನ್ ಸಾಹಿತ್ಯಕ್ಕೆ ಸಂಬಂಧಿಸಿ ಹೇಳುವುದಾದರೆ, ಅಂತಹ ಕೆಲವರಲ್ಲಿ ಅಗ್ರಗಣ್ಯನಾದ ಬರೆಹಗಾರ ಪುಷ್ಕಿನ್. ಅಗ್ರಗಣ್ಯನಷ್ಟೇ ಅಲ್ಲ, ರಷ್ಯನ್ ಸಾಹಿತ್ಯದ ಶಕಪುರುಷ ಆತ.

ಅಲೆಗ್ಸಾಂಡರ್ ಸೆರ್ಗೀವಿಶ್ ಪುಷ್ಕಿನ್ ಹದಿನೆಂಟನೆಯ ಶತಮಾನದ ಕೊನೆಯಲ್ಲಿ ಜನಿಸಿದ [೬ ಜೂನ್, ೧೭೯೯]. ಎಳೆಯನಾದ ಪುಷ್ಕಿನ್‌ಗೆ ಫ್ರೆಂಚ್ ಭಾಷೆಯಲ್ಲಿ ಶಿಕ್ಷಣ ದೊರೆಯಿತು. ಇಂಗ್ಲಿಷರ, ಫ್ರೆಂಚರ, ಅನುಕರಣೆಯೇ ಆಗಿನ ರಷ್ಯಾದಲ್ಲಿ ರೂಢಿಯಲ್ಲಿದ್ದ ಫ್ಯಾಶನ್. ಶ್ರೀಮಂತರ ಕುಟುಂಬದಲ್ಲಿ ಹುಟ್ಟಿ, ಮನೆಯೊಳಗೇ ಪಾಠಪ್ರವಚನಗಳಿಗೆ ಕಿವಿಗೊಡುತ್ತಿದ್ದ ಪುಷ್ಕಿನ್‌ಗೆ, ಬಾಹ್ಯಲೋಕದ ದರ್ಶನ ದೊರೆತುದು ಪುಸ್ತಕಗಳ ಮೂಲಕ. ಎಂಟನೆಯ ವಯಸ್ಸಿನಲ್ಲಿ ಆರಂಭವಾದ ಆತನ ಪುಸ್ತಕಪ್ರೇಮ ಅದಮ್ಯವಾಗಿತ್ತು. ಹನ್ನೊಂದನೆಯ ವಯಸ್ಸಿನಲ್ಲಿ ಫ್ರೆಂಚ್ ಸಾಹಿತ್ಯವನ್ನು ಕುರಿತು ಅದ್ಭುತ ಜ್ಞಾನವನ್ನು ಆತ ಪ್ರದರ್ಶಿಸಿದ. ಒಂಭತ್ತರವನಾಗಿದ್ದಾಗಲೇ ಫ್ರೆಂಚ್ ಭಾಷೆಯಲ್ಲಿ ಬರೆಯತೊಡಗಿದ. ಸಾಹಿತ್ಯರಚನೆಯ ಒತ್ತಡ ಬಲವಾದೊಡನೆಯೇ, ಒಲವು ಮಾತೃ ಭಾಷೆಯ ಕಡೆಗೆ ತಿರುಗಿತು. ಆತನ ಮೊದಲ ಕವಿತೆ ೧೮೧೪ರಲ್ಲಿ ಪ್ರಕಟವಾಯಿತು.

ಬಾಲಕ ಪುಷ್ಕಿನ್ನನ ಮೇಲೆ, ತನ್ನ ಅದ್ಭುತ ರಮ್ಯ ಕಥನ ಕಲೆಯಿಂದ ಎಂದೆಂದಿಗೂ ಅಳಿಯದಂತಹ ಪ್ರಭಾವವನ್ನು ಬೀರಿದಾಕೆ, ಆತನ ವೃದ್ಧೆ ದಾದಿ ಆರಿನ ರೋದಿಯೊನೋವ್ನಾ. ಆಕೆ, ರಷ್ಯದ ಜನಸಮುದಾಯಕ್ಕೂ ಪುಷ್ಕಿನ್‌ಗೂ ನಡುವೆ ಸಂಬಂಧವೇರ್ಪಡಿಸಿದ ಸ್ನೇಹಜೀವಿ.

ವಿಶ್ವವಿದ್ಯಾನಿಲಯದ ಶಿಕ್ಷಣ ಮುಗಿಸಿ ಪುಷ್ಕಿನ್, ಸರಕಾರದ ವಿದೇಶ ಶಾಖೆಯಲ್ಲಿ ದುಡಿದ. ೧೮೨೦ ರಲ್ಲಿ ಪ್ರಕಟವಾದ ಆತನ ಕಥನಕವನಗಳ

ಸಂಕಲನ, ರಷ್ಯದ ಬರೆಹಗಾರರ ಮೊದಲ ಪಂಕ್ತಿಯಲ್ಲಿ ಅವನಿಗೆ ಸ್ಥಾನವನ್ನು ದೊರಕಿಸಿಕೊಟ್ಟಿತು. ಪುಷ್ಕಿನ್ ತೋರಿದುದು, ಆಗಿನ ಸಮಾಜವ್ಯವಸ್ಥೆಗೆ ಹೊಂದಿಕೊಳ್ಳಲಾರದ ಮನೋಪ್ರವೃತ್ತಿಯನ್ನು. ಆತನ 'ಸ್ವಾತಂತ್ರ್ಯಗೀತೆ' ಮತ್ತಿತರ ಕವಿತೆಗಳನ್ನು, ಆಗ ಅಚ್ಚುಹಾಕುವುದು ಸಾಧ್ಯವಿರಲಿಲ್ಲ. ಅವುಗಳ ಹಸ್ತಪ್ರತಿಯೇ ಅಧಿಕಾರಿಗಳ ಕಣ್ಣು ತಪ್ಪಿಸಿ ಪ್ರಸಾರಗೊಂಡಿತು. ಸೈಬೀರಿಯಾಕ್ಕೆ ಗಡೀಪಾರಾಗುವುದು ಸ್ವಲ್ಪದರಲ್ಲೇ ತಪ್ಪಿದರೂ ಸರಕಾರದ ಆಜ್ಞೆಯಂತೆ ಆತ ದಕ್ಷಿಣ ರಷ್ಯಾಕ್ಕೆ ಹೊರಟು ಹೋಗಬೇಕಾಯಿತು. ಅನಂತರ ಊರಿಂದ ಊರಿಗೆ ಅಲೆದಾಟ, ಸ್ವಚ್ಛಂದ ಆರಾಜಕ ಜೀವನ, ಕ್ರಾಂತಿಕಾರಿಗಳೊಡನೆ ಸಂಬಂಧ—ಇವು ಪುಷ್ಕಿನ್ನನ ದಿನ ನಿತ್ಯದ ಚಟುವಟಿಕೆಗಳಾದುವು. ಸರಕಾರ, ಕೆಲಸದಿಂದ ಆತನನ್ನು ವಜಾ ಮಾಡಿತು. ಸ್ಥಾನಬದ್ಧಗೊಳಿಸಿತು. ಪೋಲೀಸರ ಕಾವಲಿರಿಸಿತು.

ಅಂತಹ ಪರಿಸ್ಥಿತಿಯಲ್ಲಿ ಸೃಷ್ಟಿಯಾಯಿತು ಆತನ ಅಪ್ರತಿಮ ಪ್ರೇಮ ಕಾವ್ಯವಾದ 'ಯೂಜಿನ್ ಒನಿಜಿನ್.'

ರಾಷ್ಟ್ರೀಯ ಕವಿಯೆಂದು, ಓದುಗ ವಿಮರ್ಶಕರಿಬ್ಬರ ಮನ್ನಣೆಗೂ ಪಾತ್ರನಾದ ಪುಷ್ಕಿನ್, ಗದ್ಯದ ಕ್ಷೇತ್ರದಲ್ಲೂ ಅದ್ಭುತ ಕೃತಿಗಳನ್ನು ರಚಿಸಿದ. ಆತನ ಸಾಹಿತ್ಯ ಸೃಷ್ಟಿಯ ಫಲವಾಗಿ, ರಷ್ಯನ್ ಭಾಷೆ ಸಮೃದ್ಧವಾಯಿತು. ಆತನ ಮೋಹಕ ಶೈಲಿಯಿಂದ, ಪದಲಾಲಿತ್ಯದಿಂದ, ಭಾಷೆಯ ಸೊಗಸು ಅಪೂರ್ವ ಹಂತವನ್ನೇರಿತು. 'ಇಸ್ಪೀಟು ರಾಣಿ,' 'ದಳವಾಯಿಯ ಮಗಳು,' 'ದುಬ್ರೋವ್‌ಸ್ಕಿ,' 'ಬೋರಿಸ್ ಗೊಡುನೋವ್' 'ಬೆಲ್ಕಿನ್ನನ ಕಥೆಗಳು'—ಇವೆಲ್ಲಾ ರಷ್ಯದ ರಾಷ್ಟ್ರೀಯ ಸಾಹಿತ್ಯದ ಅಮೂಲ್ಯ ಕೃತಿಗಳು. ತಮ್ಮ ಭಾಷೆಯ ಕ್ಷೇತ್ರವನ್ನೂ ದಾಟಿ, ವಿಶ್ವಸಾಹಿತ್ಯದ ಮುಕುಟದಲ್ಲಿ ಈಗ ರಾರಾಜಿಸುತ್ತಿರುವ ರತ್ನಗಳು.

ಮೂವತ್ತೆಂಟನೆಯ ವಯಸ್ಸಿನಲ್ಲಿ [೮ ಫೆಬ್ರವರಿ, ೧೮೩೭] ಪುಷ್ಕಿನ್ನನ ಅವಸಾನವಾಯಿತು. ಹೆಂಡತಿಯ ಸಂಬಂಧಿಕನೊಬ್ಬನಿಂದ ಅವಮಾನಿತನಾದ ಪುಷ್ಕಿನ್, ಆ ಮನುಷ್ಯನೊಡನೆ ಆತ್ಮಗೌರವದ ರಕ್ಷಣೆಗೋಸ್ಕರ ಕಾದಾಡಿ ಗುಂಡಿನೇಟು ತಿಂದು ಮಡಿದ. ಅದ್ಭುತವಾದ ಪ್ರತಿಭೆಯ ಚಂದ್ರ ಹುಣ್ಣಿಮೆ ಸಮೀಪಿಸುವುದಕ್ಕೆ ಮುಂಚೆಯೇ, ಆ ಜೀವನ ಕೊನೆಗಂಡಿತು

ಹೀಗಿದ್ದರೂ, ಆ ಅವಧಿಯಲ್ಲಿ ಆತ ರಚಿಸಿದ ಕೃತಿಗಳು ಮಾತ್ರ ಅಮರ ವಾದುವು.

*    *    *    *

'ದುಬ್ರೋವ್‌ಸ್ಕಿ', ಪುಷ್ಕಿನ್ನನ ಉತ್ತಮಕೃತಿಗಳಲ್ಲೊಂದು. ಆತನ ಇತರ ಕೃತಿಗಳಂತೆ ಇದು ಕೂಡಾ ವಾಸ್ತವವಾದಿ ಪರಂಪರೆಯನ್ನೆ ಅನುಸರಿಸಿದೆ. ಇದರ ಉತ್ತರಾರ್ಧವನ್ನು ಬರೆಯುವುದಕ್ಕೆ ಮುಂಚೆಯೇ ಪುಷ್ಕಿನ್ ತೀರಿಕೊಂಡರೂ ಪೂರ್ವಾರ್ಧದ ಈ ಕಥೆಯೇ ಓದುಗನಿಗೆ ಸಾಕಷ್ಟು ತೃಪ್ತಿ ನೀಡಲು ಸಮರ್ಥವಾಗಿದೆ. ಪುಷ್ಕಿನ್ನನ ಈ ಕಿರುಕಾದಂಬರಿ, ಹತ್ತೊಂಭತ್ತನೆಯ ಶತಮಾನದ ರಷ್ಯದ ಕಲಾತ್ಮಕ ಪ್ರತ್ಯುತ್ಪಾದನೆ. ತಂದೆಯ ಸಾವಿಗೆ ಕಾರಣನಾದ ಶ್ರೀಮಂತ ಭೂಮಾಲೀಕನ ಮೇಲೆ ಸೇಡುತೀರಿಸಿಕೊಳ್ಳಲು ಪ್ರತಿಜ್ಞಾಬದ್ಧನಾಗಿ ಕಾಡು ಸೇರುವ ಯುವಕ ದುಬ್ರೋವ್‌ಸ್ಕಿ, ಆ ಶ್ರೀಮಂತನ ಮಗಳಲ್ಲೇ ಅನುರಕ್ತನಾಗುವುದು ಕಥೆ; ಆ ಕಥೆಗೆ ಹಿನ್ನೆಲೆಯಾಗಿ ಬಂದಿರುವುದು ಆಗಿನ ಗ್ರಾಮಾಂತರ ಜೀವನದ ಚಿತ್ರಣ. ಇಲ್ಲಿ ಬರುವ ಭೂಮಾಲಿಕ, ಆತನ ಸೇವೆಗೆ ಸದಾಸಿದ್ಧರಾಗಿರುವ ನ್ಯಾಯಾಧೀಶ, –ಫೌಜುದಾರ, ಹೊರಟುಹೋಗುವ ಸ್ವಾತಂತ್ರ್ಯವಿಲ್ಲದೆ ಒಡೆಯನಿಗೆ ಗುಲಾಮರಾಗಿಯೆ ಬದುಕುವ ರೈತರು–ಇವರೆಲ್ಲ, ಬದುಕನ್ನು ಪ್ರತಿಬಿಂಬಿಸುವ ಶಿಲ್ಪ ಕೃತಿಗಳು. ಮರಿಯಾ ಕಿರಿಲೋವ್ನಾ, ಸೌಂದರ್ಯದ, ಪ್ರೇಮದ, ಸಾತ್ವಿಕತೆಯ, ಪ್ರತಿಮೂರ್ತಿಯಾದ ಹೆಣ್ಣು ಜೀವ. ಇತರ ಪಾತ್ರಗಳೂ ಅಷ್ಟೆ. ಎಷ್ಟೇ ಚಿಕ್ಕವಿದ್ದರೂ ಕೆಲವೇ ಪದಗಳನ್ನು ಬಳಸಿದ್ದರೂ ಹೃಷ್ಟಪುಷ್ಟವಾಗಿ ಸ್ಮರಣೀಯವಾಗಿವೆ. ಈಯೆಲ್ಲ ಕಾರಣಗಳಿಂದ ಇದು ಬರಡು ಗದ್ಯವಾಗದೆ, ಸುಂದರ ಕಾವ್ಯದಂತಿರುವ ಹೃದಯಸ್ಪರ್ಶಿಯಾದ ಕಾದಂಬರಿಯಾಗಿದೆ.

ಮೂಲಕೃತಿರಚನೆಗಿಂತಲೂ ಕಷ್ಟತರವಾದದ್ದು ಭಾಷಾಂತರಕಾರ್ಯ. ಒಂದು ಕೃತಿಯನ್ನು ಮೆಚ್ಚಿ, ತನ್ಮಯವಾಗಿ ಇನ್ನೊಂದು ಭಾಷೆಯಲ್ಲಿ ಅದನ್ನು ಒಡಮೂಡಿಸುವುದು ಸಣ್ಣ ಕೆಲಸವಲ್ಲವೇ ಅಲ್ಲ. ಭಾಷಾಂತರವೂ ಒಂದು ಕಲೆ. ಎರಡು ಭಾಷೆಗಳ ಪರಿಜ್ಞಾನವಿದ್ದ ಮಾತ್ರಕ್ಕೆ ಒಳ್ಳೆಯ ಭಾಷಾಂತರ ಸಾಧ್ಯವಾಗದು. ಇಲ್ಲಿ, ಭಾಷೆಯ ಪರಿಜ್ಞಾನ ಮಾತ್ರವಲ್ಲ, ಸಾಹಿತ್ಯದ ಬಗೆಗೆ ಅಪಾರ ಶ್ರದ್ಧೆಯೂ ಇರುವ ಗೋಪಾಲಕೃಷ್ಣರಾಯರು ಭಾಷಾಂತರ ಕಾರ್ಯವನ್ನು ಮಾಡಿದ್ದಾರೆ. ಮೂಲಕೃತಿಯನ್ನು ನೇರವಾಗಿಯೇ

ಇನ್ನೊಂದು ಭಾಷೆಗೆ ತರ್ಜುಮೆಮಾಡುವುದು ಸರಿಯಾದ ದಾರಿ. ಆದರೆ, ರಷ್ಯನ್, ಚೀಣಿ, ಫ್ರೆಂಚ್ ಮತ್ತಿತರ ಕೆಲ ಭಾಷೆಗಳಿಗೆ ಸಂಬಂಧಿಸಿ, ಅಂತಹ ಭಾಷಾಂತರ ನಮ್ಮ ಪಾಲಿಗೆ ಈಗ ದುಸ್ಸಾಧ್ಯವಾಗಿರುವ ಕೆಲಸ. ಏನಿದ್ದರೂ ಆ ಸಾಹಿತ್ಯಕೃತಿಗಳ ಇಂಗ್ಲಿಷ್ ಭಾಷಾಂತರವನ್ನೇ ಮೂಲವಾಗಿ ಪರಿಗಣಿಸಬೇಕಾದ ಪರಿಸ್ಥಿತಿ ನಮ್ಮದು. ಈ ಕಾರಣದಿಂದ, ಮೂಲಕೃತಿಯ ಶೈಲಿ–ಭಾಷೆಗಳಿಗೆ ಕನ್ನಡ ಭಾಷಾಂತರದಲ್ಲಿ ಸ್ವಲ್ಪಮಟ್ಟಿಗಾದರೂ ಧಕ್ಕೆ ತಗಲುವುದು ಅನಿವಾರ್ಯ. ಹೀಗಿದ್ದರೂ ಪ್ರಶಂಸಾರ್ಹವಾದ ರೀತಿಯಲ್ಲಿ ಗೋಪಾಲಕೃಷ್ಣರಾಯರು ಭಾಷಾಂತರ ಕಾರ್ಯವನ್ನು ನೆರವೇರಿಸಿದ್ದಾರೆ.

ವಿವಿಧ ಭಾಷೆಗಳ ಒಳ್ಳೆಯ ಸಾಹಿತ್ಯ ಕೃತಿಗಳೆಲ್ಲ ಕನ್ನಡದಲ್ಲಿ ಪ್ರಕಟವಾಗುವುದು ಅತ್ಯಗತ್ಯ. ಇಂತಹ ಪ್ರಕಟಣೆ, ನಮ್ಮ ಸಾಹಿತ್ಯದ ಬೆಳವಣಿಗೆಗೆ ಸಹಾಯಕವಾಗುವುದು. ವಿಶ್ವಸಾಹಿತ್ಯ ದರ್ಶನದಿಂದ ಓದುಗರ ದೃಷ್ಟಿ ವಿಸ್ತಾರವಾಗುವುದು ; ಅವರ ರಸಾನುಭವ ಹೊಸ ಹಂತವನ್ನೇರುವುದು.

ಪುಷ್ಕಿನ್ನರ ಒಳ್ಳೆಯ ಕೃತಿಯಾದ ‘ ದುಬ್ರೋವ್‌ಸ್ಕಿ,’ ಕನ್ನಡ ಓದುಗರ ಮೆಚ್ಚುಗೆಗೆ ಪಾತ್ರವಾಗುವುದೆಂಬ ನಂಬಿಕೆ ನನಗಿದೆ.

೨೫–೧೨–೧೯೫೬
ಮೈಸೂರು

**ನಿರಂಜನ**

# ಅರಿಕೆ

ವಿಶ್ವವಿಖ್ಯಾತ ರಷ್ಯನ್ ಕವಿ–ಕಥೆಗಾರ ಪುಷ್ಕಿನ್‌ರ ಕಿರು ಕಾದಂಬರಿಯೊಂದರ ಈ ಕನ್ನಡ ಭಾಷಾಂತರಕ್ಕೆ, ಮೂಲಕೃತಿಯ ಇಂಗ್ಲಿಷ್ ಅನುವಾದವೇ ಆಧಾರ. ಇದು ಇಂಗ್ಲಿಷ್ ಅನುವಾದಕ್ಕೆ ಆದಷ್ಟು ಸಮೀಪವರ್ತಿಯಾಗಿರುವಂತೆ ಮಾಡಲು ನನ್ನ ಕೈಲಾದಷ್ಟು ಪ್ರಯತ್ನಪಟ್ಟಿದ್ದೇನೆ. ಭಾಷೆಯ ಬಳಕೆಯಲ್ಲಾಗಲೀ ಅಭಿವ್ಯಕ್ತಿಯಲ್ಲಾಗಲೀ ಸಂಪೂರ್ಣ ತೃಪ್ತಿ ಕೊಡಲು ಅಸಮರ್ಥನಾಗಿದ್ದರೂ, ಮೂಲಕೃತಿಗೆ ಅಪಚಾರವೆಸಗದಂತೆ ಕಥೆಯನ್ನೂ ಕಥಾಪ್ರಸಂಗಗಳ ಸಂಯೋಜನೆ ನಿರೂಪಣೆಗಳಲ್ಲಿ ಪುಷ್ಕಿನ್‌ರು ತೋರಿರುವ ಅದ್ಭುತ ಕಲಾಪ್ರೌಢಿಮೆಯನ್ನೂ ಸಹೃದಯ ಓದುಗರಿಗೆ ಈ ಕೃತಿಯ ಮೂಲಕ ಪರಿಚಯ ಮಾಡಿಸಿಕೊಟ್ಟಿದ್ದರೆ, ಅಷ್ಟಕ್ಕೇ ನನ್ನ ಶ್ರಮ ಸಾರ್ಥಕವೆಂದು ನಾನು ಭಾವಿಸುತ್ತೇನೆ.

ನಾನು ಈ ಭಾಷಾಂತರವನ್ನು ಸಿದ್ಧಗೊಳಿಸಿರುವುದು, ನನ್ನ ಆತ್ಮೀಯ ಗೆಳೆಯರೂ ಪ್ರಕಾಶಕರೂ ಆದ ಶ್ರೀ ಡಿ. ಆರ್. ಕೃಷ್ಣಮೂರ್ತಿಯವರ ಬೆಂಬಲದಿಂದ ಉತ್ತೇಜಿತನಾಗಿ. ಅವರೇ ಇದನ್ನೀಗ ಪ್ರಕಟಿಸುತ್ತಿದ್ದಾರೆ. ಇದಕ್ಕಾಗಿ ನನ್ನ ಹೃತ್ಪೂರ್ವಕ ವಂದನೆಗಳು.

ಕನ್ನಡದಲ್ಲಿ ನಾನು ಬರೆಯ ತೊಡಗಿದ ಕಳೆದ ಒಂದೆರಡು ವರ್ಷಗಳಿಂದಲೂ ನನ್ನ ಬರೆವಣಿಗೆಯ ಬಗೆಗೆ ಆಸಕ್ತಿ ತೋರಿರುವ ಶ್ರೀ ನಿರಂಜನರು ಈ ಕೃತಿಗೆ ಮುನ್ನುಡಿ ಬರೆದಿದ್ದಾರೆ. ಅವರಿಗೆ ನಾನು ಋಣಿ.

ನನ್ನ ವಿದ್ಯಾಗುರು ಶ್ರೀ ಬಾಲಸುಬ್ರಮಣ್ಯಂ ಅವರು ತುಂಬು ವಿಶ್ವಾಸದಿಂದ ಹಸ್ತಪ್ರತಿಯನ್ನು ಓದಿ, ತಿದ್ದಿ, ಸೂಕ್ತ ಸಲಹೆಗಳನ್ನಿತ್ತು ನನ್ನ ಬಗೆಗೆ ಅಪಾರ ಮಮತೆಯನ್ನು ತೋರಿದ್ದಾರೆ. ಅವರಿಗೆ ನನ್ನ ಗೌರವಪೂರ್ವಕ ಕೃತಜ್ಞತೆಗಳು.

ಮುದ್ರಣ ಕಾರ್ಯವನ್ನು ಅಂದವಾಗಿ ನೆರವೇರಿಸಿರುವ ಶ್ರೀ ಶಕ್ತಿ ಎಲೆಕ್ಟ್ರಿಕ್ ಪ್ರೆಸ್‌ನವರಿಗೆ ನನ್ನ ನೆನಕೆಗಳು.

೨೬–೧೨–೧೯೫೬
ಇಂಟರ್‌ಮೀಡಿಯೆಟ್ ಕಾಲೇಜು
ಚಾಮರಾಜನಗರ

**ಕೆ. ಎಲ್. ಗೋಪಾಲಕೃಷ್ಣರಾವ್**

# ಭಾಗ ಒಂದು

## ೧

ಈಗ್ಗೆ ಕೆಲವು ವರ್ಷಗಳ ಕೆಳಗೆ, ಕಿರಿಲ್ಲಾ ಪೆಟ್ರೋವಿಷ್ ಟ್ರಾಯಿಕ್ಯುರೋವ್ ಎಂಬ, ರಷ್ಯನ್ ಹಳೆಯ ಸಂಪ್ರದಾಯಕ್ಕೆ ಸೇರಿದ ಆಗರ್ಭ ಶ್ರೀಮಂತನೊಬ್ಬನಿದ್ದ. ಆಸ್ತಿ, ವಂಶ ಮತ್ತು ಸಂಬಂಧಗಳಿಂದ ಆತ ಆ ಪ್ರದೇಶದಲ್ಲೆಲ್ಲಾ ಪ್ರತಿಷ್ಠಿತ ವ್ಯಕ್ತಿ ಎನಿಸಿಕೊಂಡಿದ್ದ. ಸುತ್ತಮುತ್ತಲಿನ ಜನರೆಲ್ಲಾ ಅವನ ಚಪಲಗಳನ್ನೆಲ್ಲಾ ಈಡೇರಿಸಿಕೊಡಲು ಹಾತೊರೆಯುತ್ತಿದ್ದರು. ಆ ಜಿಲ್ಲೆಯ ಅಧಿಕಾರಿಗಳಂತೂ ಅವನ ಹೆಸರು ಕೇಳಿದರೆ ಸಾಕು ಥರಥರನೆ ನಡುಗುತ್ತಿದ್ದರು. ಹೀಗೆ ಎಲ್ಲರಿಂದಲೂ ತನಗೆ ಸಲ್ಲುತ್ತಿದ್ದ ಗೌರವ–ಮರ್ಯಾದೆಗಳು, ತನ್ನ ಆಜನ್ಮಸಿದ್ಧ ಹಕ್ಕೆಂದೇ ಆತ ಭಾವಿಸಿದ್ದ. ತನ್ನ ಮಹಲಿನಲ್ಲಿ ಆಗಾಗ್ಗೆ ಭಾರಿ ಔತಣಕೂಟಗಳನ್ನೇರ್ಪಡಿಸುತ್ತಿದ್ದ. ಯಾವಾಗಲೂ ಅವನ ಮನೆ, ಅತಿಥಿಗಳಿಂದ ತುಂಬಿರುತ್ತಿತ್ತು. ಆ ಅತಿಥಿಗಳೂ ಅವನ ಸಕಲ ಅಭೀಷ್ಟಗಳನ್ನು ನೆರವೇರಿಸಿಕೊಡುತ್ತಾ, ಅವನ ಶ್ರೀಮಂತಿಕೆಯ ಸೊಕ್ಕಿನ ಆಡಂಬರಗಳಿಗೆ, ಉತ್ತೇಜನ ಕೊಡುತ್ತಿದ್ದರು.

ಆತನ ಅಧೀನದಲ್ಲಿದ್ದ ಗ್ರಾಮದ ಹೆಸರು ಪೋಕ್ರೋವ್‌ಸ್ಕಾಯಿ ಎಂದು. ಆ ಹಳ್ಳಿಯಲ್ಲಿ ಯಾರಿಗೂ ಅವನ ಆಮಂತ್ರಣವನ್ನು ನಿರಾಕರಿಸುವ ಎದೆಗಾರಿಕೆ ಇರಲಿಲ್ಲ. ಆಹ್ವಾನಿತ ದಿನಗಳಲ್ಲಿ ಆತನ ಮನೆಯಲ್ಲಿ ಹಾಜರಿದ್ದು ಗೌರವ ಸಲ್ಲಿಸಲೇ ಬೇಕಾಗಿದ್ದಿತು. ಅವನ ಸಾಂಸಾರಿಕ ವಹಿವಾಟುಗಳಲ್ಲಿ ಅಸಂಸ್ಕೃತನೊಬ್ಬನಲ್ಲಿ ಸಹಜವಾಗಿ ಕಾಣಬರುವ ಎಲ್ಲ ವಿಧವಾದ ದೋಷಗಳೂ ಕಂಡು ಬರುತ್ತಿದ್ದುವು. ಹೀಗೆ ಎಲ್ಲರಿಂದಲೂ ಉತ್ತೇಜನ ಪಡೆದು, ಮೊದಲಿನಿಂದಲೂ ಅಂಕೆ–ಆತಂಕಗಳಿಲ್ಲದೆ ಬೆಳೆದ ಅವನು, ತನ್ನ ಅಪ್ರಬುದ್ಧ ಮನಸ್ಸು ಪ್ರೇರೇಪಿಸಿದಂತೆಲ್ಲಾ ಕುಣಿಯುತ್ತಾ, ಸಹಜವಾಗಿ ಬೆಳೆದು ಬಂದ ದುಷ್ಟಟಗಳಿಗೆ ಗುಲಾಮನಾಗಿ ಸ್ವೇಚ್ಛೆಯಿಂದ ವಿಹರಿಸುತ್ತಿದ್ದನು. ಪ್ರತಿದಿನವೂ ರಾತ್ರಿ ವೇಳೆಯಲ್ಲಿ ಹೊಟ್ಟೆ ಬಿರಿಯುವಂತೆ ತಿಂದು ತೇಗಿ, ಅಮಲೇರುವಂತೆ ಮದ್ಯಪಾನ ಮಾಡುತ್ತಿದ್ದನು. ಇದರಿಂದಾಗಿ, ದೃಢಕಾಯನಾಗಿದ್ದರೂ ಅವನು ಮೂರು–ನಾಲ್ಕು ದಿನಗಳಿಗೊಮ್ಮೆ ಅಜೀರ್ಣ, ಹೊಟ್ಟೆ ನೋವುಗಳಿಂದ ನರಳುತ್ತಿದ್ದನು.

ಅವನ ವಿಸ್ತಾರವಾದ ಮನೆಯ ಒಂದು ಭಾಗದಲ್ಲಿ, ಹದಿನಾರು ಜನ ಹರೆಯದ ಹೆಣ್ಣಾಳುಗಳು ವಾಸಿಸುತ್ತಿದ್ದರು. ಸ್ತ್ರೀಯರಿಗೆ ತಕ್ಕುದಾದ ಕಸೂತಿ ಹಾಕುವುದೇ, ಅವರ ವೃತ್ತಿಯಾಗಿದ್ದಿತು. ಮನೆಯ ಈ ಪಾರ್ಶ್ವದ ಕಿಟಕಿಗಳೆಲ್ಲಾ, ಮರದ ದಬ್ಬೆಗಳಿಂದ ಭದ್ರಪಡಿಸಲ್ಪಟ್ಟಿದ್ದುವು. ಕಿರಿಲ್ಲಾ ಪೆಟ್ರೋವಿಷ್, ಬಾಗಿಲುಗಳಿಗೆ ಸದಾ ಬೀಗ ಹಾಕಿ, ಕೈ-ಗೊಂಚಲನ್ನು ತನ್ನ ಬಳಿಯಲ್ಲೇ ಇಟ್ಟುಕೊಳ್ಳುತ್ತಿದ್ದನು. ನಿಯಮಿತ ವೇಳೆಗಳಲ್ಲಿ ಕೆಲವು ತಾಸು ಉದ್ಯಾನದಲ್ಲಿ ವಿಹರಿಸಲು ಈ ಹರೆಯದ ಸೆರೆಯಾಳುಗಳಿಗೆ ಅವಕಾಶ ವಿದ್ದಿತು. ಆಗಲೂ ಇಬ್ಬರು ವಯಸ್ಸಾದ ಸೇವಕಿಯರ ಮೇಲುಸ್ತುವಾರಿ ಇದ್ದೇ ಇದ್ದಿತು. ಆಗಾಗ್ಗೆ ಕಿರಿಲ್ಲಾ ಪೆಟ್ರೋವಿಷ್, ಈ ಹೆಣ್ಣಾಳುಗಳಲ್ಲಿ ವಯಸ್ಸು ಹೆಚ್ಚಾದ ಕೆಲವರಿಗೆ ಮದುವೆಮಾಡಿ ಕಳುಹಿಸಿಕೊಟ್ಟು, ಅವರ ಬದಲಿಗೆ ಬೇರೆ ಚಿಕ್ಕ ವಯಸ್ಸಿನ ಕೆಲಸಗಾರ್ತಿಯರನ್ನು ನೇಮಿಸಿ ಕೊಳ್ಳುತ್ತಿದ್ದನು.

ಅವನು ಸೇವಕಿಯರ ಮತ್ತು ರೈತರ ಮೇಲೆ ಅತಿ ಕ್ರೌರ್ಯದಿಂದ ದಬ್ಬಾಳಿಕೆ ನಡಸುತ್ತಿದ್ದನು. ಆದರೂ ಅವರು ಅವನಿಗೆ ಅತ್ಯಂತ ನಿಷ್ಠೆ ಯಿಂದ ಸೇವೆ ಸಲ್ಲಿಸುತ್ತಿದ್ದರು. ತಮ್ಮ ಯಜಮಾನನ ಶ್ರೀಮಂತಿಕೆ ಮತ್ತು ಖ್ಯಾತಿಗಳನ್ನು ಬಹು ಹೆಮ್ಮೆಯಿಂದ ಹೊಗಳುತ್ತಿದ್ದರು. ಅವನಿಂದ ರಕ್ಷಣೆ ಸಿಗುವುದೆಂಬ ಭರವಸೆಯಿಂದ, ಅವರು ನಿರ್ಭಯವಾಗಿ ನೆರೆಹೊರೆ ಯವರ ಮೇಲೆಲ್ಲಾ ಕೈಮಾಡಲೂ ಹೇಸುತ್ತಿರಲಿಲ್ಲ.

ಕಿರಿಲ್ಲಾ ಪೆಟ್ರೋವಿಷ್‌ನ ಜೀವನದ ಪ್ರಮುಖ ಹವ್ಯಾಸಗಳೆಂದರೆ— ತನ್ನ ವಿಶಾಲವಾದ ಜಮೀನಿನ ಸುತ್ತುಮುತ್ತಲಿನ ಅರಣ್ಯ ಪ್ರದೇಶಗಳಲ್ಲಿ ಬೇಟೆಯಾಡುವುದು; ವಿಧವಿಧವಾದ ಭಕ್ಷ್ಯ-ಭೋಜ್ಯಗಳನ್ನು ಮಾಡಿಸಿ ಪುಷ್ಕಳವಾಗಿ ಊಟ ಮಾಡುವುದು; ಅವನ ಆಮಂತ್ರಣವನ್ನು ಅಂಗೀಕರಿಸಿ ಬಂದ ಅಪರಿಚಿತ ಅತಿಥಿಗಳನ್ನು ಗೇಲಿ ಮಾಡುತ್ತಾ ಅವಹೇಳನ ಮಾಡು ವುದು: ಅಪರಿಚಿತರೇನು, ಚಿರಪರಿಚಿತ ವಿಶ್ವಾಸೀ ಸ್ನೇಹಿತರೂ ಅವನ ಕಟು ವಿಡಂಬನೆಗಳಿಗೆ ಹೊರತಾಗಿರಲಿಲ್ಲ. ಆದರೆ ಒಬ್ಬರ ಬಗ್ಗೆ ಮಾತ್ರ ಅವನು ವಿನಾಯಿತಿ ತೋರಿಸುತ್ತಿದ್ದ: ಆಂದ್ರಿ ಗಾವ್ರಿಲೋವಿಷ್ ದುಬ್ರೋವ್ ಸ್ಕಿಯ ವಿಷಯದಲ್ಲಿ ಮಾತ್ರ ಅವನು ಅಸಡ್ಡೆಯಿಂದ ಮಾತನಾಡುತ್ತಿರಲಿಲ್ಲ. ಈ ದುಬ್ರೋವ್‌ಸ್ಕಿ, ಒಬ್ಬ ನಿವೃತ್ತ ಸೈನ್ಯಾಧಿಕಾರಿ. ಕಿರಿಲ್ಲಾ ಪೆಟ್ರೋ

ವಿಷ್‌ನ ಹತ್ತಿರದ ನೆರೆಯುವನಾಗಿದ್ದ. ಎಪ್ಪತ್ತು ಮಂದಿ ಜೀತಗಾರರ ದಣಿ. ಸಾಮಾನ್ಯವಾಗಿ, ಕಿರಿಲ್ಲಾ ಪೆಟ್ರೋವಿಷ್ ತನಗಿಂತಲೂ ಉನ್ನತ ದರ್ಜೆಯವರೊಂದಿಗೂ ದರ್ಪದಿಂದ ವರ್ತಿಸುತ್ತಿದ್ದನು. ಆದರೂ ಸಾಮಾನ್ಯ ವ್ಯಕ್ತಿಯಾಗಿದ್ದ ದುಬ್ರೋವ್‌ಸ್ಕಿಯನ್ನು ಮಾತ್ರ, ಗೌರವದಿಂದ ಕಾಣುತ್ತಿದ್ದನು. ಹಿಂದೆ ಸೈನ್ಯದಲ್ಲಿ ಅವರಿಬ್ಬರೂ ಸಂಗಡಿಗರಾಗಿದ್ದರು. ದುಬ್ರೋವ್‌ಸ್ಕಿಯ ನಿರ್ದಾಕ್ಷಿಣ್ಯ ಮನೋಭಾವ, ತುಸು ಮುಂಗೋಪ—ಇವು ಪೆಟ್ರೋವಿಷ್‌ಗೆ ಚೆನ್ನಾಗಿ ತಿಳಿದಿದ್ದುವು. ಸೈನ್ಯದಲ್ಲಿ ಜೊತೆಯಾಗಿದ್ದವರು, ಪರಿಸ್ಥಿತಿಯ ಪ್ರಭಾವದಿಂದ ಬಹಳ ಕಾಲದವರೆಗೆ ಬೇರೆಯಾಗಬೇಕಾಯಿತು. ದುಬ್ರೋವ್‌ಸ್ಕಿ, ಯಾವುದೋ ಗೊಂದಲದಲ್ಲಿ ಸಿಕ್ಕಿಕೊಂಡು ಸೈನ್ಯದ ಕೆಲಸಕ್ಕೆ ರಾಜೀನಾಮೆಯಿತ್ತು, ತನ್ನ ಪಾಲಿನ ಆಸ್ತಿಯಾಗಿ ಉಳಿದುಕೊಂಡಿದ್ದ ಹಳ್ಳಿಗೆ ಬಂದು ನೆಲಸಿದ. ಕಿರಿಲ್ಲಾ ಪೆಟ್ರೋವಿಷ್ ಗೆಳೆಯನ ರಾಜೀನಾಮೆಯ ಸುದ್ದಿ ತಿಳಿದು, ಆತನ ಪರವಾಗಿ ವಾದಿಸಿ ಹಕ್ಕನ್ನು ದೊರಕಿಸಿಕೊಡುವುದಾಗಿ ಮುಂದೆ ಬಂದ. ಆದರೆ ದುಬ್ರೋವ್‌ಸ್ಕಿ ಮಿತ್ರನ ಔದಾರ್ಯಕ್ಕೆ ಕೃತಜ್ಞತೆ ಸೂಚಿಸಿ, ತಾನು ಬಡತನದಲ್ಲಿಯಾದರೂ ಸರಿಯೆ ಪರರ ಹಂಗಿನಲ್ಲಿರದೆ ಸ್ವತಂತ್ರವಾಗಿ ಬಾಳುವೆನೆಂದು ತಿಳಿಸಿದನು. ಹಲವು ವರ್ಷಗಳನಂತರ ಪೆಟ್ರೋವಿಷ್ ಕೂಡ ಸೈನ್ಯದ ಮುಖ್ಯಾಧಿಕಾರಿಯಾಗಿ ನಿವೃತ್ತನಾಗಿ, ದುಬ್ರೋವ್‌ಸ್ಕಿಯ ಆಸ್ತಿಗೆ ಹೊಂದಿಕೊಂಡಂತೇ ಇದ್ದ ತನ್ನ ಭಾರಿ ಜಹಗೀರಿ ಗ್ರಾಮಕ್ಕೆ ಬಂದು ನೆಲಸಿದನು. ಪುನರ್ಮಿಲನದಿಂದ ಗೆಳೆಯರಿಬ್ಬರಿಗೂ ಅಮಿತಾನಂದವಾಯಿತು. ಅಂದಿನಿಂದ ಅವರಿಬ್ಬರೂ ಭೇಟಿ ಮಾಡದ ದಿನವೇ ಇರಲಿಲ್ಲ. ಸಾಮಾನ್ಯವಾಗಿ ಯಾರ ಮನೆಗೂ ಭೇಟಿಕೊಡದ ಕಿರಿಲ್ಲಾ ಪೆಟ್ರೋವಿಷ್, ತನ್ನ ನೆಚ್ಚಿನ ಸ್ನೇಹಿತನ ಬಡ ಕುಟೀರಕ್ಕೆ ತಪ್ಪದೆ ಹೋಗಿಬರುತ್ತಿದ್ದ. ಇಬ್ಬರಿಗೂ ಸಮ ವಯಸ್ಸು. ಇಬ್ಬರೂ ಸಮಾಜದ ಒಂದೇ ವರ್ಗಕ್ಕೆ ಸೇರಿದ್ದರು ಮತ್ತು ಹೆಚ್ಚುಕಡಮೆ ಒಂದೇ ರೀತಿಯಲ್ಲೇ ಬೆಳೆದುಬಂದಿದ್ದರು. ಅವರ ಅಭಿರುಚಿ, ಮನೋಧರ್ಮಗಳಲ್ಲೂ ಸಾಮ್ಯ ಕಂಡು ಬರುತ್ತಿತ್ತು. ಒಂದು ವಿಧದಲ್ಲಿ ಅವರ ಅದೃಷ್ಟಗಳೂ ಒಂದೇ ತೆರನಾಗಿದ್ದುವು: ಇಬ್ಬರೂ ಪ್ರೇಮ-ವಿವಾಹ ಮಾಡಿಕೊಂಡಿದ್ದರು. ಮದುವೆಯಾದ ಸ್ವಲ್ಪದರಲ್ಲೇ ಇಬ್ಬರಿಗೂ ಪತ್ನಿವಿಯೋಗವಾಯಿತು. ಇಬ್ಬರಿಗೂ ಒಬ್ಬೊಬ್ಬ ಮಕ್ಕಳಿದ್ದರು—ದುಬ್ರೋವ್‌ಸ್ಕಿಯ

ಮಗ ಪೀಟರ್ಸ್‌ಬರ್ಗ್‌ನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ; ಪೆಟ್ರೋವಿಷ್‌ನ ಮಗಳು ತಂದೆಯ ಜೊತೆಯಲ್ಲೇ ವಾಸಿಸುತ್ತಿದ್ದಳು. ಎಷ್ಟೋ ಸಾರಿ ಪೆಟ್ರೋವಿಷ್ ದುಬ್ರೋವ್‌ಸ್ಕಿಗೆ ಹೇಳುತ್ತಿದ್ದ :

"ಇಲ್ಲಿ ನೋಡು, ದುಬ್ರೋವ್‌ಸ್ಕಿ. ನಿನ್ನ ಕುಮಾರ ವೊಲೋದ್ಯ ಹೀಗೆಯೇ ಪ್ರಗತಿ ಪಥದಲ್ಲಿ ಮುಂದುವರೆದಲ್ಲಿ, ನನ್ನ ಮಗಳು ಮಾಷಾಳನ್ನು ಅವನಿಗೇ ಮದುವೆ ಮಾಡಿಕೊಡುತ್ತೇನೆ—ಅವನು ಎಷ್ಟೇ ಕಡು-ಬಡವ ನಾಗಿದ್ದರೂ ಪರವಾಗಿಲ್ಲ."

ದುಬ್ರೋವ್‌ಸ್ಕಿ ಅಸಮ್ಮತಿ ಸೂಚಿಸಿ ತಲೆ ಆಡಿಸುತ್ತಾ ಹೇಳುತ್ತಿದ್ದ : "ಬೇಡಪ್ಪ, ಪೆಟ್ರೋವಿಷ್. ನನ್ನ ಮಗ ವೊಲೋದ್ಯನಿಗೂ, ನಿನ್ನ ಮಗಳು ಮರಯ್ಯಾ ಕಿರಲ್ಲೋವ್ಯಾಳಿಗೂ ಎಲ್ಲಿಯ ಸಾಟಿ? ಅವನಂತಹ ಬಡ ಸಂಭಾವಿತನು, ತುಂಬಾ ಮುದ್ದಿಸಿ ಬೆಳೆಸಿದ ಶ್ರೀಮಂತ ಸ್ತ್ರೀಯ ಸೇವಕನಾಗುವುದಕ್ಕಿಂತ, ಯಾರಾದರೂ ಬಡವರ ಮನೆಯ ಸದ್ಗೃಹಿಣಿಯ ಕೈಹಿಡಿದು, ತನ್ನ ಮನೆಗೆ ತಾನು ಯಜಮಾನನಾಗುವುದೇ ಒಳಿತು."

ಪ್ರತಿಯೊಬ್ಬರಿಗೂ ಇದೇ ಅಸೂಯೆ, ಆಶ್ಚರ್ಯ—ಗರ್ವಿಷ್ಠನಾದ ಪೆಟ್ರೋವಿಷ್‌ಗೂ ಅವನ ನೆರೆಯವನಾದ ಬಡ ದುಬ್ರೋವ್‌ಸ್ಕಿಗೂ ಮಧ್ಯೆ ಆ ಹೊಂದಾಣಿಕೆ, ಆ ಸಾಮರಸ್ಯ ಹೇಗೆ ಬೆಳೆದುಕೊಂಡು ಬಂದಿದೆ! ಬಡವ ನಾದರೂ ದುಬ್ರೋವ್‌ಸ್ಕಿಯ ದಿಟ್ಟತನವನ್ನು ಕಂಡು ಎಲ್ಲರೂ ವಿಸ್ಮಯ ಪಡುತ್ತಿದ್ದರು. ಭೋಜನ ಸಮಯದಲ್ಲಿ ಯಾವುದಾದರೂ ವಿಷಯಕ್ಕೆ ಸಂಬಂಧಿಸಿ ಚರ್ಚೆ ನಡೆದಾಗ, ಯಜಮಾನ ಪೆಟ್ರೋವಿಷ್‌ನ ಅಭಿಪ್ರಾಯ ವೇನೇ ಇದ್ದರೂ ಯಾವುದನ್ನೂ ಲೆಕ್ಕಿಸದೆ, ತನ್ನ ಸ್ವಂತ ಅಭಿಪ್ರಾಯ ವನ್ನು ನಿರ್ಭಯದಿಂದ ಮುಂದಿಡುತ್ತಿದ್ದನು. ಇದರಿಂದ ಉತ್ತೇಜಿತರಾದ ಇನ್ನು ಕೆಲವು ಮಂದಿ, ದುಬ್ರೋವ್‌ಸ್ಕಿಯಂತೆಯೇ, ತಾವೂ ತಮ್ಮ ಸ್ವಂತ ಅಭಿಪ್ರಾಯ ಹೇಳಲು ಪ್ರಯತ್ನಪಡುತ್ತಿದ್ದರು. ಆದರೆ ಪೆಟ್ರೋವಿಷ್ ಅವರ ಮೇಲೆರಗಿ ಉಸಿರೆತ್ತದಂತೆ ಮಾಡಿಬಿಡುತ್ತಿದ್ದ. ಸಾಧಾರಣವಾಗಿ ಎಲ್ಲರಿಗೂ ಅನ್ವಯಿಸುತ್ತಿದ್ದ ಆಜ್ಞೆ–ನಿಬಂಧನೆಗಳಾವುವೂ ದುಬ್ರೋವ್‌ಸ್ಕಿಗೆ ಅನ್ವಯಿ ಸುತ್ತಿರಲಿಲ್ಲ.

ಆದರೆ ಯಾವುದೋ ಒಂದು ಆಕಸ್ಮಿಕ ಘಟನೆ ಜರಗಿ ಪರಿಸ್ಥಿತಿ ಸಂಪೂರ್ಣವಾಗಿ ಬದಲಾಯಿತು.

ಶರದೃತುವಿನ ಆದಿಭಾಗದಲ್ಲೊಮ್ಮೆ ಕಿರಿಲ್ಲಾ ಪೆಟ್ರೋವಿಷ್ ಷಿಕಾರಿ ಮಾಡಹೊರಡಲು ಸಿದ್ಧತೆ ನಡಸಿದ. ಹಿಂದಿನ ರಾತ್ರಿಯೇ, ಎಲ್ಲ ಬೇಟೆಗಾರರೂ ಕುದುರೆಯ ಚಾಕರರೂ ಬೆಳಗಿನ ಜಾವದ ಹೊತ್ತಿಗೇ ಅಣಿಯಾಗಿರಬೇಕೆಂದು ಆಜ್ಞೆಹೊರಡಿಸಿದ. ಒಂದು ಡೇರೆ ಮತ್ತು ಅಡಿಗೆ ಸಾಮಾನುಗಳನ್ನೆಲ್ಲಾ ಮುಂಚಿತವಾಗಿಯೇ ಬೇಟೆಯಾಡುವ ಸ್ಥಳಕ್ಕೆ ಕಳುಹಿಸಿದ. ಹೀಗೆ ಮಾರನೆಯ ದಿನದ ಬೇಟೆಗೆ ಸರ್ವಸಿದ್ಧತೆಗಳೂ ಆದ ಮೇಲೆ, ಆ ಸಂಜೆ ಕಿರಿಲ್ಲಾ ಪೆಟ್ರೋವಿಷ್, ಆಹ್ವಾನಿತರನ್ನೆಲ್ಲಾ ಕರೆದುಕೊಂಡು ಬೇಟೆನಾಯಿಗಳ ಪೋಷಣಾ ಸ್ಥಳಕ್ಕೆ ಹೋದ. ಎಲ್ಲ ವಿಧವಾದ ಪೋಷಣೆ—ಸೌಕರ್ಯಗಳನ್ನೂ ಅನುಭವಿಸುತ್ತಿದ್ದ, ಐನೂರಕ್ಕೂ ಮಿಕ್ಕ ಆ ಬೇಟೆನಾಯಿಗಳು ಒಡೆಯನನ್ನು ಕಂಡಕೂಡಲೇ ಮೂಕ ಭಾಷೆಯಲ್ಲಿ ತಮ್ಮ ಅಪರಿಮಿತ ಆನಂದವನ್ನು ವ್ಯಕ್ತಪಡಿಸಿದುವು. ಖಾಯಿಲೆಗೊಳಗಾದ ನಾಯಿಗಳನ್ನು ಉಪಚರಿಸಲು, ಶಸ್ತ್ರವೈದ್ಯ ಕುಶಲಿ ತಿಮೋಷ್ಕನ ಮೇಲ್ವಿಚಾರಣೆಯಲ್ಲಿ ಒಂದು ದೊಡ್ಡ ಚಿಕಿತ್ಸಾಲಯವೇ ತೆರೆಯಲ್ಪಟ್ಟದ್ದಿತು. ಮಹಲಿನ ಇನ್ನೊಂದು ಪಾರ್ಶ್ವ, ಉಚ್ಚಜಾತಿಯ ಹೆಣ್ಣುನಾಯಿಗಳಿಗೆ ಮೀಸಲಾಗಿದ್ದಿತು. ಅಲ್ಲಿ ಅವುಗಳು ಮರಿಗಳನ್ನು ಹಾಕಿ ಬೆಳೆಸಲು ಬೇಕಾದ ಎಲ್ಲ ಸೌಲಭ್ಯಗಳನ್ನೂ ಒದಗಿಸಲಾಗಿತ್ತು. ಕಿರಿಲ್ಲಾ ಪೆಟ್ರೋವಿಷ್‌ಗೆ ಶುನಕ ಸಂಪತ್ತು--ಸಂಸಾರ, ಬಹು ಹೆಮ್ಮೆಯ ವಿಷಯವಾಗಿದ್ದಿತು. ಅತಿಥಿಗಳೆಲ್ಲರ ಮುಂದೆ ಅದನ್ನು ಹೊಗಳುವ ಯಾವ ಸದವಕಾಶವನ್ನೂ ಅವನು ಕಳೆದುಕೊಳ್ಳುತ್ತಿರಲಿಲ್ಲ. ಸಾಧಾರಣವಾಗಿ ಅವನ ಮನೆಗೆ ಹೋಗುತ್ತಿದ್ದವರಲ್ಲಿ ಪ್ರತಿಯೊಬ್ಬರೂ, ಕೊನೆಯ ಪಕ್ಷ ಇಪ್ಪತ್ತು ಬಾರಿಯಾದರೂ ಈ 'ಶ್ವಾನ ಮಂದಿರ'ವನ್ನು ನೋಡಿರಲಿಕ್ಕೆ ಸಾಕು! ಎಂದಿನಂತೆ ಈ ಬಾರಿಯೂ ಅತಿಥಿಗಳಿಂದಲೂ ತಿಮೋಷ್ಕ ಮತ್ತಿತರ ಮುಖ್ಯಾಧಿಕಾರಿಗಳಿಂದಲೂ ಒಡಗೂಡಿ, ಮಂದಿರದ ಪರಿಶೀಲನೆ ನಡಸಲು ಪೆಟ್ರೋವಿಷ್ ಹೊರಟ. ಆಗಾಗ್ಗೆ ಅಲ್ಲಿ-ಇಲ್ಲಿ ನಿಂತು, ರೋಗ ತಗಲಿದ್ದ ನಾಯಿಗಳ ಬಗ್ಗೆ ವಿಚಾರಿಸುತ್ತಾ, ಕೆಲಸಗಾರರ ಬೇಜವಾಬ್ದಾರಿಯ ಬಗ್ಗೆ ಸಿಟ್ಟುದೋರುತ್ತಾ, ತನ್ನ ಪ್ರೀತಿಯ ನಾಯಿಗಳನ್ನು ಹಿಡಿದು ತನ್ನ ಕಡೆಗೆ ಹೆಸರು ಕರೆಯುತ್ತಾ ಮುಂದುವರಿಯುತ್ತಿದ್ದ. ಅತಿಥಿಗಳೆಲ್ಲರೂ ಪೆಟ್ರೋವಿಷ್‌ನ ಈ ಅದ್ಭುತ ಶ್ವಾನ ಮಂದಿರವನ್ನು ಮುಕ್ತಕಂಠದಿಂದ ಹೊಗಳಿದರು. ಹಾಗೆ ಹೊಗಳುವುದು,

ತಮ್ಮ ಪವಿತ್ರ ಕರ್ತವ್ಯವೆಂದೇ ಅವರ ಮನವರಿಕೆಯಾಗಿತ್ತು. ಆದರೆ ದುಬ್ರೋವ್‌ಸ್ಕಿ ಮಾತ್ರ ಹುಬ್ಬುಗಂಟಿಕ್ಕಿಕೊಂಡು ಮೌನದಿಂದಿದ್ದ. ಬೇಟೆ ಯಾಡುವುದು ಅವನಿಗೂ ಪ್ರಿಯವಾದ ಹವ್ಯಾಸವಾಗಿತ್ತು. ಅವನೂ, ತನ್ನ ಯೋಗ್ಯತೆಗೆ ತಕ್ಕಂತೆ ಕೆಲವು ಬೇಟೆ ನಾಯಿಗಳೊಂದಿಗೆ ಚಿಕ್ಕ ಸಿಬ್ಬಂದಿ ಯನ್ನಿಟ್ಟುಕೊಂಡಿದ್ದ. ಪೆಟ್ರೋವಿಷ್‌ನ ಭಾರಿ ವ್ಯವಸ್ಥೆ ಕಂಡು ಅವನಲ್ಲಿ ಸ್ವಲ್ಪ ಅಸೂಯೆ ಇದ್ದೇ ಇದ್ದಿತು.

"ಏಕಣ್ಣ ಇಷ್ಟು ಮಂಕಾಗಿ, ಮೌನದಿಂದಿದ್ದೀಯೇ? ನನ್ನ ನಾಯಿ ಪಡೆಯ ವ್ಯವಸ್ಥೆ ನಿನಗೆ ಹಿಡಿಸಲಿಲ್ಲವೇ?"–ಪೆಟ್ರೋವಿಷ್ ಕೇಳಿದ.

"ಓಹೋ, ನಿನ್ನ ಶ್ವಾನ ಮಂದಿರ ಅತ್ಯುತ್ತಮವಾದುದು! ಮೊದ ಲನೆಯ ದರ್ಜೆಯದು! ಆದರೆ ನಿನ್ನ ಸೇವಕರು, ಈ ನಾಯಿಗಳಂತಾದರೂ ಜೀವನ ನಡಸುತ್ತಿದ್ದಾರೆಯೇ ಎಂಬುವೇ ನನಗೆ ಸಂಶಯ," ಎಂದು ದುಬ್ರೋವ್‌ಸ್ಕಿ ವ್ಯಂಗ್ಯವಾಗಿ ಉತ್ತರಿಸಿದ.

ಈ ಮಾತುಗಳನ್ನು ಕೇಳಿ ನಾಯಿಗಳ ಚಾರಕನೊಬ್ಬನಿಗೆ ಕೋಪ ಬಂತು.

"ದೇವರ ದಯ ಮತ್ತು ನಮ್ಮ ಒಡೆಯರ ಅನುಗ್ರಹದಿಂದಾಗಿ ನಮಗೆ ಯಾವ ವಿಧವಾದ ಕೊರತೆಯೂ ಇಲ್ಲ, ರಾಯರೇ. ಊರಿನ ಶ್ರೀಮಂತರೆಷ್ಟೋ ಮಂದಿ, ಅವಕಾಶ ದೊರೆತರೆ, ತಮ್ಮ ಆಸ್ತಿ–ಪಾಸ್ತಿಗಳನ್ನು ತೊರೆದು, ಈ ಶ್ವಾನಮಂದಿರದಲ್ಲಿ ಸೇವಕರಾಗಲು ಸಂತೋಷದಿಂದ ಮುಂದೆ ಬರುತ್ತಾರೆ ಅನ್ನೋ ಸಂದೇಹವೇ ಇಲ್ಲ. ಅವರ ಮನೆಗಳಿಗಿಂತ ಇಲ್ಲಿ ಉತ್ತಮವಾದ ಆಹಾರ, ವಸತಿ ಸೌಕರ್ಯಗಳು ದೊರಕುತ್ತವೆ," ಎಂದು ಆ ನೌಕರ ತನ್ನ ಯಜಮಾನನ ಪರವಾಗಿ ಪ್ರತ್ಯುತ್ತರವಿತ್ತ.

ಕಿರಿಲ್ಲಾ ಪೆಟ್ರೋವಿಷ್ ನೌಕರನ ಬುದ್ಧಿವಂತಿಕೆಯ ವ್ಯಂಗ್ಯೋಕ್ತಿ ಯನ್ನು ಮೆಚ್ಚಿಕೊಂಡು ಗಹಗಹಿಸಿ ನಕ್ಕ. ಅತಿಥಿಗಳೆಲ್ಲರೂ ಅವನನ್ನನು ಸರಿಸಿ ನಕ್ಕರು; ನೌಕರನ ಅಪಹಾಸ್ಯದ ಮಾತುಗಳು ತಮಗೂ ಅನ್ವಯ ವಾಗುತ್ತದೆಂದು ತಿಳಿದೂ ನಕ್ಕರು. ದುಬ್ರೋವ್‌ಸ್ಕಿಯ ಮುಖ ಬಿಳಿಚಿ ಕೊಂಡಿತು. ಆತ ಮರುಮಾತನಾಡದೆ ಕುಳಿತ.

ಆ ಹೊತ್ತಿಗೆ, ಅದೇ ತಾನೆ ಹುಟ್ಟಿದ ಕೆಲವು ನಾಯಿ ಮರಿಗಳನ್ನು ಬುಟ್ಟಿಯಲ್ಲಿ ತುಂಬಿಕೊಂಡು, ನೌಕರನೊಬ್ಬ ಪೆಟ್ರೋವಿಷ್‌ನ ಮುಂದೆ

ತಂದಿಟ್ಟ. ಪೆಟ್ರೋವಿಷ್ ಅವನ್ನೆಲ್ಲಾ ಪರಿಶೀಲಿಸಿ, ಅವುಗಳಲ್ಲಿ ಎರಡು ಮರಿಗಳನ್ನು ಮಾತ್ರ ಆರಿಸಿ ಉಳಿಸಿಕೊಂಡು, ಉಳಿದುವನ್ನೆಲ್ಲಾ ನದಿಯಲ್ಲಿ ಮುಳುಗಿಸುವಂತೆ ಆಜ್ಞೆಯಿತ್ತ. ಹೀಗೆ ಪೆಟ್ರೋವಿಷ್ ನಾಯಿಗಳ ಪರಿಶೀಲನೆಯಲ್ಲಿ ಮಗ್ನನಾಗಿದ್ದಾಗ, ದುಬ್ರೋವ್‌ಸ್ಕಿ ಯಾರಿಗೂ ಕಾಣದಂತೆ ಹೊರಹೊರಟ.

ಪರಿಶೀಲನಾ ಕಾರ್ಯ ಮುಗಿದನಂತರ, ಅತಿಥಿಗಳೊಂದಿಗೆ ಮನೆಗೆ ಹಿಂದಿರುಗಿ ರಾತ್ರಿಯೂಟಕ್ಕೆ ಕುಳಿತಾಗ ಪೆಟ್ರೋವಿಷ್‌ಗೆ ತಿಳಿಯಿತು—ದುಬ್ರೋವ್‌ಸ್ಕಿ ತಮ್ಮ ಮಧ್ಯೆ ಇಲ್ಲದಿರುವುದು. ಎಲ್ಲಿ ಹೋದನೆಂದು ವಿಚಾರಿಸಲು, ಆತ ತನ್ನ ಮನೆಗೆ ಹೊರಟು ಹೋದನೆಂದು ಸೇವಕರು ತಿಳಿಸಿದರು. ಷಿಕಾರಿ ಮಾಡುವುದರಲ್ಲಿ ನಿಸ್ಸೀಮನೆನಿಸಿದ್ದ ದುಬ್ರೋವ್‌ಸ್ಕಿಯನ್ನು ಬಿಟ್ಟು ಪೆಟ್ರೋವಿಷ್ ಎಂದೂ ಬೇಟೆಗೆ ಹೊರಟಿರಲಿಲ್ಲ. ಆದ್ದರಿಂದ, ಕೂಡಲೇ ಶೀಘ್ರನಾಗಿ ಹೋಗಿ ದುಬ್ರೋವ್‌ಸ್ಕಿಯನ್ನು ದಾರಿಯಲ್ಲೇ ಸಂಧಿಸಿ, ತಪ್ಪದೆ ಹಿಂದಕ್ಕೆ ಕರೆತರಬೇಕೆಂದು ಆಜ್ಞೆಯಿತ್ತು ಸೇವಕನೊಬ್ಬನನ್ನು ಓಡಿಸಿದ. ಅವರಿನ್ನೂ ಊಟ ಮಾಡುತ್ತಿದ್ದಾಗಲೇ ಆ ಸೇವಕ ಹಿಂದಿರುಗಿ ಬಂದು, ತಾನೆಷ್ಟು ರೀತಿಯಲ್ಲಿ ಪ್ರಾರ್ಥಿಸಿಕೊಂಡರೂ ದುಬ್ರೋವ್‌ಸ್ಕಿ ಹಿಂದಿರುಗಲಿಚ್ಛಿಸಲಿಲ್ಲವೆಂದು ತಿಳಿಸಿದ. ಮದ್ಯಪಾನದಿಂದ ಮತ್ತನಾಗಿ ಕೆಂಪೇರಿದ ಕಣ್ಣುಗಳಿಂದ ಕೂಡಿದ್ದ ಪೆಟ್ರೋವಿಷ್ ಕೋಪಾವಿಷ್ಟನಾಗಿ ಆ ಸೇವಕನನ್ನು ಪುನಃ ಅಟ್ಟಿದ. ದುಬ್ರೋವ್‌ಸ್ಕಿ ಆ ಕೂಡಲೇ ಹಿಂದಿರುಗಿ ತನ್ನ ಮನೆಯಲ್ಲಿ ಅಂದು ರಾತ್ರಿ ತಂಗದಿದ್ದಲ್ಲಿ ಇನ್ನು ಎಂದೆಂದಿಗೂ ಇವನನ್ನು ಕ್ಷಮಿಸುವುದಿಲ್ಲವೆಂದು, ತನ್ನ ತೀರ್ಮಾನವನ್ನು ದುಬ್ರೋವ್‌ಸ್ಕಿಗೆ ತಿಳಿಸುವಂತೆ ಹೇಳಿಕಳುಹಿಸಿದ. ಸೇವಕ ಮತ್ತೊಮ್ಮೆ ಧಾವಿಸಿದ. ಪೆಟ್ರೋವಿಷ್ ಊಟವನ್ನು ಅಲ್ಲಿಗೆ ಮುಗಿಸಿ, ಅತಿಥಿಗಳನ್ನೆಲ್ಲಾ ಕಳುಹಿಸಿ, ಮಲಗಿಬಿಟ್ಟ.

ಮಾರನೆಯ ಬೆಳಗ್ಗೆ ಎದ್ದ ತಕ್ಷಣ ಆತ ಕೇಳಿದ ಪ್ರಶ್ನೆ—'ದುಬ್ರೋವ್‌ಸ್ಕಿ ಬಂದಿದ್ದಾನೆಯೆ?' ಅವನ ಪ್ರಶ್ನೆಗೆ ಸಿಕ್ಕ ಉತ್ತರ, ತ್ರಿಕೋಣಾಕೃತಿಯಲ್ಲಿ ಮಡಚಿದ್ದ ಒಂದು ಸಣ್ಣ ಪತ್ರ. ಅದನ್ನು ಕಾರಕೂನನ ಕೈಗಿತ್ತು ಗಟ್ಟಿಯಾಗಿ ಓದಲು ಹೇಳಿದ. ಕಾಗದದ ಒಕ್ಕಣೆ ಈ ರೀತಿ ಇತ್ತು :

ಕಾರುಣ್ಯ ಪ್ರಭುವೆ,

ನನ್ನ ಬಗ್ಗೆ ಅಣಕುಮಾತನಾಡಿದ ನಿಮ್ಮ ಶ್ವಾನಮಂದಿರದ

ನೌಕರನನ್ನು, ಕ್ಷಮೆ ಯಾಚಿಸಲು, ನನ್ನ ಬಳಿಗೆ ಕಳಿಸತಕ್ಕದ್ದು. ಅಲ್ಲಿಯವರೆಗೆ, ನಾನು ನಿಮ್ಮ ಮನೆಗೆ ಬರಲಿಚ್ಛಿಸುವುದಿಲ್ಲ. ಅಷ್ಟೇ ಅಲ್ಲದೆ, ಅವನನ್ನು ಕ್ಷಮಿಸುವುದನ್ನು, ಅಥವಾ ಶಿಕ್ಷಿಸುವುದನ್ನು ನನ್ನ ಇಷ್ಟಕ್ಕೆ ಬಿಡತಕ್ಕದ್ದು. ನೀವೇ ನನ್ನನ್ನು ಗೇಲಿಮಾಡಿದರೂ ನಾನು ಸಹಿಸೆ. ಹಾಗಿರುವಲ್ಲಿ ನಿಮ್ಮ ಯಾವನೋ ಸೇವಕನೊಬ್ಬ ನನ್ನನ್ನು ಗೇಲಿಮಾಡುವುದಕ್ಕೆ ಅವಕಾಶವೀಯಲಾರೆ. ನಾನೇನು ಕೋಡಂಗಿ ಕೆಟ್ಟುಹೋಗಲಿಲ್ಲ. ನಾನು ಹೆಸರುವಾಸಿಯಾದ ಕುಲೀನ ಮನೆತನಕ್ಕೆ ಸೇರಿದವನು. ಆತ್ಮ ಗೌರವಕ್ಕೆ ಎಂದೆಂದಿಗೂ ಚ್ಯುತಿ ಬರಬಾರದು.

ಎಂದು, ನಿಮ್ಮ ವಿನಮ್ರ ಸೇವಕ,

ಆಂದ್ರಿ ದುಬ್ರೋವ್‌ಸ್ಕಿ.

ಗಡಸು ಭಾಷೆಯಲ್ಲಿ ಬರೆದ ಈ ಕಾಗದ, ಆಧುನಿಕ ಶಿಷ್ಟಾಚಾರದ ಪ್ರಕಾರ, ಕುಸಂಸ್ಕೃತಿಯ ಕುರುಹು ಎನ್ನಬಹುದೇನೋ! ಆದರೆ ಕಾಗದದ ಶೈಲಿ, ಪದಪ್ರಯೋಗ, ಪೆಟ್ರೋವಿಚ್‌ನನ್ನು ಅಷ್ಟಾಗಿ ಕೆಣಕಲಿಲ್ಲ. ಅದು ಒಳಗೊಂಡಿದ್ದ ವಿಷಯ ಅವನ ಕೋಪವನ್ನು ಉದ್ರೇಕಗೊಳಿಸಿತು.

ಕಾಗದ ಓದಿ ಮುಗಿದುದೇ ತಡ, ಒಮ್ಮೆಲೆ ಹಾಸಿಗೆಯಿಂದ ಕೆಳಕ್ಕೆ ಜಿಗಿದು ರೋಷಾವಿಷ್ಟನಾಗಿ ಬರಿಕಾಲಿನಲ್ಲಿಯೇ ಸರಿದಾಡುತ್ತಾ,—"ಏನು ಏನಂತೆ? ನಾನು, ನನ್ನ ಜವಾನನನ್ನು ಇವನ ಬಳಿಗೆ ಕ್ಷಮೆ ಯಾಚಿಸಲು ಕಳುಹಬೇಕಂತೇನು? ಮತ್ತೆ ಶಿಕ್ಷೆ ಮಾಡುವುದು ಅಥವಾ ಕ್ಷಮಿಸುವುದು, ಅವನ ಇಷ್ಟ! ಏನೆಂದು ತಿಳಿದಿದ್ದಾನೆ, ಅವನು? ಯಾರೊಡನೆ ವ್ಯವಹರಿಸುತ್ತಾನೆಂಬುದರ ಅರಿವಿದೆಯೆ ಅವನಿಗೆ? ಇರಲಿ, ಅವನಿಗೆ ಒಂದು ಕೈ ತೋರಿಸುತ್ತೇನೆ....ಅವನು ಅನುಭವಿಸಿ ತೀರಲೇಬೇಕು. ಪೆಟ್ರೋವಿಚ್‌ನೊಂದಿಗೆ ವಿರೋಧ ಕಟ್ಟಿಕೊಳ್ಳುವುದೆಂದರೆ ಏನೆಂಬುದನ್ನು ಅವನಿಗೆ ಕಲಿಸೇ ತೀರುತ್ತೇನೆ" ಎಂದು ಕೂಗಾಡಿದ.

ಹೀಗೆ ಸೇಡು ತೀರಿಸಿಕೊಳ್ಳುವ ನಿರ್ಧಾರ ಮಾಡಿದ ಮೇಲೆ ಪೆಟ್ರೋವಿಚ್, ಎಂದಿನಂತೆಯೇ ವೈಭವ ಮತ್ತು ಸಡಗರಗಳಿಂದ ಬೇಟೆಗೆ ತೆರಳಿದ. ಆದರೆ ಬೇಟೆ ಫಲಪ್ರದವಾಗಲಿಲ್ಲ. ಇಡೀ ದಿನವೆಲ್ಲ ಹುಡುಕಿದರೂ, ಒಂದೇ ಒಂದು ಜಿಂಕೆಯ ವಿನಾ ಬೇರಾವ ಮೃಗವೂ ಕಣ್ಣಿಗೆ ಬೀಳಲಿಲ್ಲ. ಆ ಜಿಂಕೆಯೂ ಗುರಿತಪ್ಪಿಸಿಕೊಂಡು ಪಾರಾಗಿ ಹೋಯಿತು. ಬೇಟೆಯನಂತರದ

ವನಭೋಜನವೂ ಸಮರ್ಪಕವಾಗಿ ನಡೆಯಲಿಲ್ಲ. ಪೆಟ್ರೋವಿಷ್‌ಗೆ ಯಾವೊಂದು ಅಡಿಗೆಯೂ ರುಚಿಸದಾಯಿತು. ಕೋಪದ ಭರದಲ್ಲಿ ಅಡಿಗೆಯವನನ್ನು ಥಳಿಸಿದ; ಅತಿಥಿಗಳನ್ನು ವಿನಾಕಾರಣ ದೂರಿ ಅವಮಾನ ಮಾಡಿದ. ಕೊನೆಗೆ ತನ್ನ ಸಮಸ್ತ ಬೇಟೆಗಾರ ಪಡೆಯನ್ನೂ ಕರೆದುಕೊಂಡು, ಬೇಕೆಂದೇ ದುಬ್ರೋವ್‌ಸ್ಕಿಯ ಜಮೀನಿನ ಮೂಲಕವೇ ಹಿಂದಿರುಗಿದ.

ದಿನಗಳುರುಳಿದುವು. ಇವರಿಬ್ಬರ ಮಧ್ಯೆ ಹತ್ತಿದ ಹಗೆತನ ಹರಿಯಲೇ ಇಲ್ಲ. ದುಬ್ರೋವ್‌ಸ್ಕಿ, ಹಟಹಿಡಿದು, ಪೆಟ್ರೋವಿಷ್‌ನ ಮನೆಗೆ ಪುನಃ ಒಮ್ಮೆಯೂ ಹೋಗಲಿಲ್ಲ. ಪೆಟ್ರೋವಿಷ್‌ನ ಮನಸ್ಸೂ ತುಂಬ ವ್ಯಗ್ರವಾಯಿತು. ಆತನ ಬಗ್ಗೆ ತನ್ನಲ್ಲಿದ್ದ ರೊಚ್ಚನ್ನು ಬಹಿರಂಗವಾಗಿಯೇ ವ್ಯಕ್ತಪಡಿಸತೊಡಗಿದ. ಆತನನ್ನು ನಿಂದಿಸಿ, ಹಳಿದು ಮಾತನಾಡಿದ. ಇದನ್ನು, ಇಂತಹ ಜಗಳಗಳಲ್ಲಿ ಅತ್ಯಾಸಕ್ತಿ ತೋರಿಸುತ್ತಿದ್ದ ಊರಿನ ಜನರು ನಾನಾ ರೀತಿಯಲ್ಲಿ ಬಣ್ಣ ಕಟ್ಟಿ ದುಬ್ರೋವ್‌ಸ್ಕಿಗೆ ವರದಿ ಮಾಡುತ್ತಿದ್ದರು.

ಅಷ್ಟರಲ್ಲೇ ಮತ್ತೊಂದು ಹೊಸ ಘಟನೆ ಜರಗಿ, ಅವರಿಬ್ಬರ ಮಧ್ಯೆ ಸ್ನೇಹ ಬಾಂಧವ್ಯ ಇನ್ನು ಎಂದೆಂದಿಗೂ ಸಾಧ್ಯವಾಗದಂತೆ ಮಾಡಿಬಿಟ್ಟಿತು.

ದುಬ್ರೋವ್‌ಸ್ಕಿ ಒಮ್ಮೆ ಗಾಡಿಯಲ್ಲಿ ಕುಳಿತು ತನ್ನ ಜಮೀನಿನ ಸುತ್ತ ಪರಿಶೀಲನೆ ನಡಸುತ್ತಿದ್ದ. ಹಾಗೆಯೇ ಒಂದು ಭಾಗದಲ್ಲಿದ್ದ ಬರ್ಚ್ ಮರಗಳ ತೋಪಿನತ್ತ ಬಂದಾಗ, ಯಾರೋ ಕೊಡಲಿಯಿಂದ ಮರಗಳನ್ನು ಕಡಿಯುತ್ತಿದ್ದ ಸದ್ದು ಕೇಳಿಬಂತು. ಅದಾದ ಸ್ವಲ್ಪ ಹೊತ್ತಿನ ಮೇಲೆ ದೊಡ್ಡ ಮರವೊಂದು ಉರುಳಿಬೀಳುವ ಕಟಕಟ ಶಬ್ದವೂ ಕೇಳಿಸಿತು. ಕೂಡಲೇ ಆ ತೋಪಿನ ಬಳಿಗೆ ಗಾಡಿ ಹೊಡೆಯುವಂತೆ ಸಾರಥಿಗೆ ಹೇಳಿದ. ಅಲ್ಲಿ ಹೋಗಿ ನೋಡಿದರೆ, ಪೆಟ್ರೋವಿಷ್‌ನ ಕಡೆಯ ಪ್ರೋಕ್ರೋವ್‌ಸ್ಕಾಯಿ ಗ್ರಾಮಸ್ಥರು ಕೆಲವರು ದುಬ್ರೋವ್‌ಸ್ಕಿಗೆ ಸೇರಿದ ಮರಗಳನ್ನು ಕಡಿದು ದಿಮ್ಮಿಗಳನ್ನು ನಿರಾತಂಕವಾಗಿ ಸಾಗಿಸುತ್ತಿದ್ದರು! ದುಬ್ರೋವ್‌ಸ್ಕಿಯನ್ನು ಕಂಡ ತಕ್ಷಣ ಅವರೆಲ್ಲಾ ಚೆಲ್ಲಾಪಿಲ್ಲಿಯಾಗಿ ಓಡಿಹೋದರು. ದುಬ್ರೋವ್‌ಸ್ಕಿ, ತನ್ನ ಸಾರಥಿಯ ಸಹಾಯದಿಂದ, ಓಡಿಹೋಗುತ್ತಿದ್ದವರಲ್ಲಿ ಇಬ್ಬರನ್ನು ಸೆರೆಹಿಡಿದು, ಹೆಡೆಮುರಿ ಕಟ್ಟಿಸಿ, ಮನೆಗೆ ಸಾಗಿಸಿಕೊಂಡು ಹೋದ. ಹಾಗೆಯೇ ಪೆಟ್ರೋವಿಷ್‌ಗೆ ಸೇರಿದ ಮೂರು ಕುದುರೆಗಳನ್ನು ವಶಪಡಿಸಿಕೊಂಡ. ದುಬ್ರೋವ್‌ಸ್ಕಿಗೆ, ಈ ಅತ್ಯಾಚಾರ ಕಂಡು ಸಹಿಸಲಾರದಷ್ಟು

ಕೋಪ ಬಂತು. ಪೆಟ್ರೋವಿಷ್‌ನ ಸೇವಕರು ಇಂತಹ ದುಷ್ಕೃತ್ಯಗಳಿಗೆ ಹೆಸರುವಾಸಿಯಾಗಿದ್ದರೂ, ಹಿಂದೆಂದೂ ದುಬ್ರೋವ್‌ಸ್ಕಿಯ ಜಮೀನಿನಲ್ಲಿ ಧಾಂದಲೆ ನಡಸಿರಲಿಲ್ಲ. ಅವರಿಗೆ ತಿಳಿದಿತ್ತು, ದುಬ್ರೋವ್‌ಸ್ಕಿ ತಮ್ಮ ಯಜಮಾನನ ಮಿತ್ರನೆಂದು. ಈಗ ತಮಿಬ್ಬರ ಮಧ್ಯೆ ಉಂಟಾದ ವಿರಸ ದಿಂದ ಉತ್ತೇಜಿತರಾಗಿ ಅವರು ಈ ದುಷ್ಕೃತ್ಯಕ್ಕೆ ತೊಡಗಿರುವರೆಂಬುದು, ದುಬ್ರೋವ್‌ಸ್ಕಿಗೆ ಮನದಟ್ಟಾಯಿತು. ಆದ್ದರಿಂದ, ರೂಢಿಯಲ್ಲಿದ್ದ ಹೋರಾ ಟದ ನೀತಿ–ನಿಯಮಗಳಾವುವನ್ನೂ ಲೆಕ್ಕಿಸದೆ, ಸೆರೆಸಿಕ್ಕ ಆ ಸೇವಕರಿಗೆ ಅವರು ಕತ್ತರಿಸಿ ಹಾಕಿದ ಮರದ ತುಂಡುಗಳಿಂದಲೇ ಬೆತ್ತಮಾಡಿಸಿ ಆದರ ರುಚಿ ತೋರಿಸಿದ. ವಶಪಡಿಸಿಕೊಂಡ ಕುದುರೆಗಳನ್ನು, ತನ್ನ ಸ್ವಂತ ಕುದುರೆಗಳೇ ಎಂಬಂತೆ ದುಡಿಮೆಗೆ ಹಾಕಿದ.

ಈ ಸಂಗತಿ ಅಂದೇ ಪೆಟ್ರೋವಿಷ್‌ನ ಕಿವಿಗೆ ಮುಟ್ಟಿತು. ವಿಪರೀತ ಖತಿಗೊಂಡು ತನ್ನನ್ನು ತಾನೇ ಮರೆಯುವಂತಾಯಿತು, ಆತನಿಗೆ. ಆ ಕೂಡಲೇ ತನ್ನ ಜೀತದಾಳುಗಳನ್ನೆಲ್ಲಾ ಸೇರಿಸಿಕೊಂಡು ದುಬ್ರೋವ್‌ಸ್ಕಿಯ ಆಸ್ತಿ–ಪಾಸ್ತಿಗಳನ್ನೆಲ್ಲಾ ಲೂಟಿಮಾಡಿ, ಮಾಡಿ, ಮನೆ–ಮಾರುಗಳನ್ನು ನೆಲಸಮ ಮಾಡಿ, ಅವುಗಳ ಮಾಲೀಕ ದುಬ್ರೋವ್‌ಸ್ಕಿಯನ್ನು ತನ್ನ ಮನೆ ಯಲ್ಲಿ ಕೈದಿಯಾಗಿರುವಂತೆ ಮಾಡೋಣವೇ, ಎಂದು ಆವೇಶದ ಭರದಲ್ಲಿ ಪೆಟ್ರೋವಿಷ್ ಮೊದಲು ಯೋಚಿಸಿದ. ಹಾಗೆ ಮಾಡುವುದಲ್ಲಿ ತಪ್ಪೇನೂ ಇಲ್ಲವೆಂದೂ ಅವನು ಭಾವಿಸಿದ. ಆದರೆ ಕೂಡಲೇ ತೀರ್ಮಾನವನ್ನು ಬದಲಿ ಸಿದ. ಅವನ ಮನಸ್ಸು ಬೇರೆ ರೀತಿಯಲ್ಲಿ ಸೇಡು ತೀರಿಸಿಕೊಳ್ಳುವ ಯೋಚನೆ ಮಾಡಿತು.

ಯೋಚನಾ ಮಗ್ನನಾಗಿ ಹಜಾರದಲ್ಲಿ ಅತ್ತಿಂದಿತ್ತ ಹೆಜ್ಜೆ ತುಳಿ ಯುತ್ತಾ, ಹಾಗೆಯೇ ಕಿಟಕಿಯಿಂದ ಆಚೆಯ ಕಡೆಗೆ ಆತ ನೋಡಿದ. ಅಷ್ಟು ಹೊತ್ತಿಗೆ ಸರಿಯಾಗಿ ಮನೆಯ ಮುಂದೆ ಗಾಡಿಯೊಂದು ಬಂದು ನಿಂತಿತು. ನಿಲುವಂಗಿಯನ್ನು ತೊಟ್ಟು, ಚೂಪಾದ ಚರ್ಮದ ಶಿಖರವಿದ್ದ ಟೋಪಿಯನ್ನು ಧರಿಸಿದ್ದ ಚಿಕ್ಕ ಮನುಷ್ಯನೊಬ್ಬ, ಗಾಡಿಯಿಂದಿಳಿದು ಪಾರುಪತ್ತೆಗಾರನ ಕೊಠಡಿಯ ಕಡೆಗೆ ಹೋಗುತ್ತಿದ್ದುದನ್ನು ನೋಡಿದ. ಆತ ನ್ಯಾಯಾಧೀಶ ಶಬಾಷ್ಕಿನ್ ಎಂದು ಗುರುತು ಸಿಕ್ಕಿತು. ಆತನಿಗೆ ಹೇಳಿ ಕಳುಹಿಸಿದ. ಸ್ವಲ್ಪ ಹೊತ್ತಿನ ಮೇಲೆ ಶಬಾಷ್ಕಿನ್ ಅತ್ಯಂತ ಭಯ–ಭಕ್ತಿಗಳಿಂದ ಬಾಗಿ

ನಮಸ್ಕರಿಸುತ್ತಾ, ಪೆಟ್ರೋವಿಚ್‌ನ ಆಜ್ಞೆಯನ್ನೇ ಎದುರು ನೋಡುತ್ತಾ, ಬಂದು ನಿಂತ.

“ಬಾಪ್ಪ. ಒಳ್ಳೆಯದಾಗಲಿ ನಿನಗೆ. ನಿನ್ನ ಹೆಸರು....ಮರೆತೇ ಹೋಯಿತಲ್ಲ....ಹೋಗಲಿ....ಏನು ಈ ಕಡೆ ಬಂದಿದ್ದೀಯಲ್ಲಾ ?”

“ಹೀಗೇ ನಗರಕ್ಕೆ ಹೊರಟಿದ್ದೆ ಮಹಾಸ್ವಾಮಿ. ತಮ್ಮಿಂದ ಹುಕುಮು ಏನಾದರೂ ಇರುತ್ತದೇನೋ ಎಂದು ತಿಳಿಯಲು, ತಮ್ಮ ಪಾರುಪತ್ತೆಗಾರನ ಬಳಿಗೆ ಹೋಗುತ್ತಿದ್ದೆ, ಸ್ವಾಮಿ.”

“ಸರಿಯಾದ ಹೊತ್ತಿಗೆ ಬಂದಿದ್ದೀಯಪ್ಪ....ನಿನ್ನ ಹೆಸರು?.... ಪುನಃ ಮರೆತೇ ಹೋಯಿತು.....ಸರಿ. ನಿನ್ನಿಂದ ಸ್ವಲ್ಪ ಕೆಲಸವಾಗಬೇಕಾಗಿದೆ ಯಪ್ಪ. ವೋಡ್ಕಾ ಕುಡಿ. ನಾನು ಹೇಳುವುದನ್ನು ಗಮನವಿಟ್ಟು ಕೇಳು.”

ಇಂತಹ ಆತ್ಮೀಯ ಸ್ವಾಗತವನ್ನು ಕಂಡು ಆ ನ್ಯಾಯಾಧೀಶ ತಬ್ಬಿಬ್ಬಾದ. ವೋಡ್ಕಾ ಕುಡಿಯದೆ, ಹಾಗೇ ಬದಿಗಿಟ್ಟು, ಪೆಟ್ರೋವಿಚ್ ಹೇಳುವುದನ್ನೇ ಲಕ್ಷ್ಯವಿಟ್ಟು ಕೇಳ ತೊಡಗಿದ.

“ನನ್ನ ನೆರೆಯವನೊಬ್ಬನಿದ್ದಾನಪ್ಪ. ಅವನೊಬ್ಬ ಮಾನಗೆಟ್ಟವನು. ಸಣ್ಣ ಒಂದು ಜಮೀನು ಇಟ್ಟುಕೊಂಡಿದ್ದಾನೆ. ಅದನ್ನು ಅವನಿಂದ ಕಸಿದು ಕೊಂಡುಬಿಡೋಣ ಅಂತಿದೀನಿ. ಏನು ಹೇಳ್ತೀಯ ಅದಕ್ಕೆ?”

“ಅದಕ್ಕೆ ಸಂಬಂಧಿಸಿದ ಕಾಗದ ಪತ್ರಗಳೇನಾದರೂ ಇದ್ದರೆ, ಮಹಾಸ್ವಾಮಿ....ಅಥವಾ....”

“ಇಲ್ಲಪ್ಪ. ಕಾಗದ-ಪತ್ರಗಳೇನೂ ಇಲ್ಲ. ಅಷ್ಟರ ಮೇಲೆ ಕೋರ್ಟಿನ ಆಜ್ಞೆಯ ಗೊಡವೆ ನಮಗೇಕೆ? ನಾನು ಹೇಳೋದು ಏನೆಂದರೆ ಕೋರ್ಟು-ಕಛೇರಿಗಳ ಮೂಲಕ ಹೋಗದೆ, ಹಾಗೇ ಅವನ ಆಸ್ತಿಯನ್ನು ವಶಪಡಿಸಿಕೊಳ್ಳಬೇಕು....ಓ, ತಾಳು, ಒಂದ್ನಿಮಿಷ....ಈಗ ಜ್ಞಾಪಕಕ್ಕೆ ಬರ್‍ತಾ ಇದೆ.—ಈ ಜಮೀನು ಹಿಂದೆ ನಮಗೇ ಸೇರಿದ್ದಿತು. ಸ್ಪಿಟ್ಸಿನ್ ಎಂಬವನಿಂದ ಕೊಂಡದ್ದು. ಆಮೇಲೆ ಅದನ್ನು ದುಬ್ರೋವ್‌ಸ್ಕಿಯ ತಂದೆಗೆ ಮಾರಲಾಯಿತು.—ಇಷ್ಟು ಗೊತ್ತು. ಈ ಮಾಹಿತಿಯಿಂದ ಏನಾದರೂ ಮಾಡೋದಕ್ಕಾಗೋದಿಲ್ವೆ ?”

“ಅದು ಹೇಗಾದೀತು ಮಹಾಸ್ವಾಮಿ? ಮಾರಾಟವಾದದ್ದು ಬಹುಶಃ ಕಾನೂನು ಬದ್ಧವಾಗಿಯೇ ಆಗಿರಬೇಕು.”

"ನೋಡಪ್ಪ. ಯೋಚನೆ ಮಾಡಿನೋಡು. ಏನಾದರೂ ಒಂದು ಮಾರ್ಗವನ್ನು ಕಂಡುಹಿಡಿ."

"ಹೇಗಾದರೂ ಮಾಡಿ ಮಹಾಸ್ವಾಮಿಗಳು ಆತನಿಂದ ಮಾರಾಟದ ಕಾಗದ ಪತ್ರಗಳನ್ನು ಪಡೆದುಕೊಂಡು ಬಿಟ್ಟರೆ....ಆಮೇಲೆ, ಏಕೆ, ಬಹು ಸುಲಭವಾಗಿ....."

"ಅದು ಸರಿ. ಅರ್ಥವಾಯ್ತು....ಹಾಳಾದ್ದು, ಆ ಕಾಗದ–ಪತ್ರಗಳೆಲ್ಲಾ ಹಿಂದೆ ಯಾವಾಗಲೋ ಬೆಂಕಿಬಿದ್ದಾಗ ಸುಟ್ಟುಹೋದುವಲ್ಲಾ!"

"ಏನಂದಿರಿ ಸ್ವಾಮಿ! ಕಾಗದ–ಪತ್ರಗಳು ಸುಟ್ಟುಹೋದುವೇ? ಅನುಕೂಲವೇ ಆಯಿತು, ಬಿಡಿ! ನಾವು ಕಾನೂನಿಗನುಸರಿಸಿಯೇ ಎಲ್ಲ ಏರ್ಪಾಟುಗಳನ್ನೂ ಮಾಡಬಹುದು. ನಿಮ್ಮ ಮನಸ್ಸಿಗೆ ಸಂಪೂರ್ಣವಾಗಿ ತೃಪ್ತಿಯಾಗುವಂತೆ ಎಲ್ಲವನ್ನೂ ಮಾಡಬಹುದು. ಸಂಶಯವೇ ಇಲ್ಲ."

"ಹಾಗಂತೀಯೇನು? ಸರಿ, ಈಗ ನೋಡಪ್ಪ, ಎಲ್ಲ ನಿನಗೇ ಬಿಟ್ಟಿದ್ದೇನೆ. ನೋಡೋಣ ನಿನ್ನ ಉತ್ಸಾಹ–ಆಸಕ್ತಿ ಎಷ್ಟಿದೆ ಅಂತ. ನಿನ್ನ ಶ್ರಮಕ್ಕೆ ಪ್ರತಿಫಲ ನನ್ನಿಂದ ದೊರಕೇ ದೊರಕುತ್ತೆ. ಖಾತ್ರಿಯಾಗಿರು."

ಶಬಾಷ್ಕಿನ್ ನಮ್ರತೆಯಿಂದ ಬಾಗಿ ನೆಲ ಮುಟ್ಟಿ ನಮಸ್ಕರಿಸುತ್ತಾ ಹೊರಟು ಹೋದ. ಅಂದಿನಿಂದಲೇ ತನ್ನ ಯೋಜನೆಯನ್ನು ಕಾರ್ಯಗತಗೊಳಿಸಲು ಸನ್ನಾಹ ನಡಸಿದ. ಅದರ ಫಲವಾಗಿಯೇ, ಸರಿಯಾಗಿ ಎರಡು ವಾರಗಳನಂತರ, ದುಬ್ರೋವ್‌ಸ್ಕಿಗೆ ನಗರದ ನ್ಯಾಯಾಧೀಶನಿಂದ ವಿಜ್ಞಾಪನಾ ಪತ್ರವೊಂದು ಬಂದಿತು. ಅದರಲ್ಲಿ, ದುಬ್ರೋವ್‌ಸ್ಕಿ ತನ್ನ ಅಧೀನದಲ್ಲಿಟ್ಟುಕೊಂಡಿರುವ ಜಮೀನ್ದಾರಿ–ಹಳ್ಳಿಯ ಆಸ್ತಿಪಾಸ್ತಿಗಳ ಮೇಲಿನ ತನ್ನ ಹಕ್ಕನ್ನು ದೃಢಪಡಿಸುವ, ತೃಪ್ತಿಕರವಾದ ಸಾಧನ–ಸಾಕ್ಷಿಗಳನ್ನು ಸಮಯ ವಿಳಂಬ ಮಾಡದೆ ಒದಗಿಸಬೇಕೆಂದು ಕೇಳಲಾಗಿತ್ತು.

ದುಬ್ರೋವ್‌ಸ್ಕಿ, ಈ ಅನಿರೀಕ್ಷಿತ ವಿಚಾರಣೆಯನ್ನು ಕಂಡು ದಿಗ್ಭ್ರಾಂತನಾದ. ಅಂದೇ ಒರಟು–ಒರಟಾಗಿಯೇ ಏನೋ, ಒಂದು ಉತ್ತರವನ್ನು ಕಳುಹಿಸಿದ. ಆ ಕಿಸ್ತೆನೆವ್‌ಕಾ ಹಳ್ಳಿ ಮತ್ತು ಮನೆ–ಮಟ್ಟುಗಳು ತಂದೆ ತೀರಿದನಂತರ ತನ್ನ ವಶಕ್ಕೆ ಬಂದುವೆಂದೂ, ಅದರ ಮೇಲೆ ತನಗೆ ವಂಶಪಾರಂಪರ್ಯವಾಗಿ ಸಂದ ಹಕ್ಕಿದೆಯೆಂದೂ, ಪೆಟ್ರೋವಿಚ್‌ಗೂ ಇದಕ್ಕೂ ಯಾವ ಬಾದರಾಯಣ ಸಂಬಂಧವೂ ಇಲ್ಲವೆಂದೂ, ಹೊರಗಿನವರು ಯಾರಾ

ದರೂ ಈ ಜಮೀನ್ದಾರಿಯ ಮೇಲೆ ತಮ್ಮ ಹಕ್ಕು ಸಾಧಿಸ ಹೊರಟರೆ, ಅದು ಮಾನಹಾನಿಕರವಾದಂತಾಗುವುದಲ್ಲದೆ, ವಂಚನೆ ಮಾಡಿದಂತಾಗುವುದೆಂದೂ, ಒತ್ತಿ ತಿಳಿಸಿದ, ತನ್ನ ಉತ್ತರದಲ್ಲಿ.

ಈ ರೀತಿಯ ಉತ್ತರವನ್ನು ಕಂಡು ಶಬಾಷ್ಕಿನ್‌ಗೆ ಬಹು ಸಂತೋಷವಾಯಿತು. ಇದರಿಂದ, ದುಬ್ರೋವ್‌ಸ್ಕಿ ವ್ಯವಹಾರಜ್ಞನಲ್ಲವೆಂದೂ, ಅವನಂತಹ ಮುಂಗೋಪಿಯನ್ನು ಎಂತಹ ಎಡವಟ್ಟಿನ ಪರಿಸ್ಥಿತಿಗಾದರೂ ಸಿಕ್ಕಿ ಬೀಳುವಂತೆ ಮಾಡುವುದು ಬಹು ಸುಲಭವೆಂದೂ, ಅವನಿಗೆ ಅರಿವಾಯಿತು.

ದುಬ್ರೋವ್‌ಸ್ಕಿ, ಮನಸ್ಸು ಸಮಾಧಾನ ಸ್ಥಿತಿಗೆ ಬಂದನಂತರ ಆ ವಿಚಾರಣೆಯ ಪತ್ರವನ್ನು ಮತ್ತೊಮ್ಮೆ ಓದಿದ. ಅದರಲ್ಲಿನ ಪ್ರಶ್ನೆಗಳಿಗೆ ಸೂಕ್ತ ಉತ್ತರ ಕೊಡಬೇಕೆನಿಸಿತು. ಅಂತೆಯೇ ಸೂಕ್ಷ್ಮದಲ್ಲಿಯೇ ನಯವಾಗಿ ಮತ್ತೊಂದು ಕಾಗದ ಬರೆದ. ಅದೂ ಅಷ್ಟೇನು ತೃಪ್ತಿಕರವಾಗಿರಲಿಲ್ಲ.

ಈ ವ್ಯವಹಾರ ಹೀಗೆಯೇ ಮುಂದುವರೆಯಿತು. ತನ್ನ ಹಕ್ಕು ಸುಭದ್ರವೆಂದು ದೃಢವಾಗಿ ನಂಬಿದ್ದ ದುಬ್ರೋವ್‌ಸ್ಕಿ, ಅದನ್ನು ಅಷ್ಟಾಗಿ ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ. ಅದಕ್ಕೆಲ್ಲಾ ಹಣವನ್ನು ಪೋಲು ಮಾಡುವುದರಲ್ಲಿ ಅವನಿಗೆ ನಂಬಿಕೆಯಿರಲಿಲ್ಲ. ಅಲ್ಲದೆ ಕೋರ್ಟು-ಕಛೇರಿಗಳ ಗುಮಾಸ್ತರು, ಅಧಿಕಾರಿಗಳು, ಎಲ್ಲರೂ ಲಂಚಗುಳಿಗಳೆಂದು ಅವನಿಗೆ ತಿಳಿದಿತ್ತು. ಅವರ ಬಗ್ಗೆ ಅವನಿಗೆ ತುಂಬ ತಾತ್ಸಾರವಿದ್ದಿತು. ಆದರೆ, ಅವರ ಪ್ರಭಾವದಿಂದಲೇ ತನ್ನ ಮಾನಹಾನಿಯಾಗಬಹುದಾದ ಪ್ರಸಂಗ ಒದಗಿ ಬರಬಹುದೆಂದು ಅವನಿಗೆ ಅನಿಸಲೇ ಇಲ್ಲ. ಪೆಟ್ರೋವಿಷ್ ಕೂಡ ಈ ವ್ಯವಹಾರವನ್ನು ಪ್ರಾರಂಭಿಸಿದ್ದಷ್ಟೋ ಅಷ್ಟೆ. ಆಮೇಲೆ ಹೆಚ್ಚು ಆಸಕ್ತಿ ವಹಿಸಲಿಲ್ಲ. ಅವನ ಪರವಾಗಿ ಕೆಲಸಮಾಡಲು ಶಬಾಷ್ಕಿನ್ ಇದ್ದನಲ್ಲಾ! ನ್ಯಾಯಾಧೀಶರುಗಳನ್ನು ಬೆದರಿಸುವುದು, ಅವರ ಕೈಬೆಚ್ಚಗೆ ಮಾಡಿ ಒಳಗೆ ಹಾಕಿಕೊಳ್ಳುವುದು, ಶಾಸನ, ನಿಯಮವನ್ನು ತನ್ನ ಅನುಕೂಲಕ್ಕನುಸರಿಸಿ ವ್ಯಾಖ್ಯಾನಮಾಡುವುದು—ಇವುಗಳಲ್ಲಿ ಆತ ತೊಡಗಿದ್ದ.

ಫೆಬ್ರವರಿ ೯, ೧೮—ರಂದು ದುಬ್ರೋವ್‌ಸ್ಕಿಗೆ ಕೋರ್ಟಿನಿಂದ ನಗರ ಸಭೆಯ ಮೂಲಕ ಕರೆ ಬಂದಿತು. ಆತ ಕೂಡಲೇ ನ್ಯಾಯಾಲಯದಲ್ಲಿ ಹಾಜರಾಗಬೇಕೆಂದೂ ಆತನಿಗೂ ಪೆಟ್ರೋವಿಷ್‌ಗೂ ಮಧ್ಯೆ ನಡೆಯುತ್ತಿದ್ದ ವಿವಾದದ ಬಗ್ಗೆ ನ್ಯಾಯಾಧೀಶನ ತೀರ್ಮಾನ ತಿಳಿಸಲಾಗುವುದೆಂದೂ, ಆತ

ತನ್ನ ಸಮ್ಮತಿಯನ್ನೋ ಅಥವಾ ಅಸಮ್ಮತಿಯನ್ನೋ ಸೂಚಿಸಿ ಪ್ರಕಟಣೆಗೆ ತನ್ನ ಸಹಿ ಹಾಕಬೇಕೆಂದೂ ಆ ಆಹ್ವಾನ ಪತ್ರದಲ್ಲಿ ಸೂಚಿಸಲಾಗಿತ್ತು. ದುಬ್ರೋವ್‌ಸ್ಕಿ ಅದೇ ದಿನವೇ ನಗರಕ್ಕೆ ಹೊರಟ. ಪೆಟ್ರೋವಿಷ್ ಸಹ ಅದೇ ದಿನ ಹೊರಟು, ದುಬ್ರೋವ್‌ಸ್ಕಿಯನ್ನು ಹಿಂದೆ ಹಾಕಿ ತಾನೇ ಮೊದಲು ನಗರವನ್ನು ಸೇರಿದ. ದಾರಿಯಲ್ಲಿ ಅವರಿಬ್ಬರ ದೃಷ್ಟಿ ಸಂಧಿಸಿದಾಗ ಬಿರುಗಣ್ಣಿನ ದರ್ಪದ ನೋಟಗಳ ವಿನಿಮಯವಾಯಿತು. ಪೆಟ್ರೋವಿಷ್‌ನ ಮುಖದ ಮೇಲೆ ದುಷ್ಟ ಮಂದಹಾಸ ಇದ್ದುದನ್ನು ದುಬ್ರೋವ್‌ಸ್ಕಿ ನೋಡದಿರಲಿಲ್ಲ.

## ೨

ನಗರದಲ್ಲಿ ಅಂದು ದುಬ್ರೋವ್‌ಸ್ಕಿ ತನ್ನ ವ್ಯಾಪಾರಸ್ಥ ಗೆಳೆಯನೊಬ್ಬನ ಮನೆಯಲ್ಲಿ ಇಳಿದುಕೊಂಡಿದ್ದು ಮಾರನೆಯ ಬೆಳಗ್ಗೆ ಜಿಲ್ಲಾ ನ್ಯಾಯಾಧೀಶನ ಮುಂದೆ ಹಾಜರಾದ. ಯಾರೂ ಆತನಿಗೆ ಮರ್ಯಾದೆ ಸಲ್ಲಿಸಲಿಲ್ಲ. ಅದೇ ಸ್ವಲ್ಪ ಹೊತ್ತಾದಮೇಲೆ ಕಿರಿಲ್ಲಾ ಪೆಟ್ರೋವಿಷ್ ಬಂದಾಗ ಗುಮಾಸ್ತರುಗಳೆಲ್ಲಾ ಲೆಕ್ಕಣಿಕೆಗಳನ್ನು ತಮ್ಮ ಕಿವಿಗಳ ಹಿಂದೆ ಸಿಕ್ಕಿಸುತ್ತಾ ಎದ್ದು ನಿಂತರು. ವಕೀಲರು ಮತ್ತಿತರ ನ್ಯಾಯಾಲಯದ ಅಧಿಕಾರಿಗಳು ತಮ್ಮ ದಾಸ್ಯ ಸ್ವಭಾವವನ್ನು ತೋರ್ಪಡಿಸುತ್ತಾ ಆತನನ್ನು ಸ್ವಾಗತಿಸಿದರು. ಅವನ ಅಂತಸ್ತು, ವಯಸ್ಸು ಮತ್ತು ಸ್ಥೂಲಕಾಯಕ್ಕೆ ಮಾನ್ಯತೆ ಕೊಡುವಂತೆ ಒಂದು ಆರಾಮ ಕುರ್ಚಿಯನ್ನು ಆತನಿಗಾಗಿ ಸಿದ್ಧಪಡಿಸಿದರು. ಅವನು ತನಗಾಗಿ ಸಿದ್ಧಪಡಿಸಿದ ಸ್ಥಳದಲ್ಲಿ, ತೆರೆದ ಬಾಗಿಲಿನ ಬಳಿಯೇ, ಸುಖಾಸೀನನಾದ. ಆದರೆ ದುಬ್ರೋವ್‌ಸ್ಕಿ ಮಾತ್ರ ಪಕ್ಕದ ಗೋಡೆಗೆ ಒರಗಿಕೊಂಡು ನಿಂತಿದ್ದ. ಸಭೆಯಲ್ಲಿ ನಿಶ್ಶಬ್ದ ಆವರಿಸಿತು. ನ್ಯಾಯಾಲಯದ ಕಾರ್ಯದರ್ಶಿ, ಗಂಭೀರವಾಣಿಯಲ್ಲಿ, ತೀರ್ಮಾನವನ್ನು ಓದತೊಡಗಿದ.

ಆಗಿನ ಕಾಲದಲ್ಲಿ, ರಷ್ಯದಲ್ಲಿ, ಯಾವ ವಿಧವಾದ ವಿವಾದಕ್ಕೂ ಆಸ್ಪದವಿಲ್ಲದೆ ಸಂಪೂರ್ಣವಾದ ಹಕ್ಕು ಪಡೆದಿದ್ದರೂ, ಯಾವುದಾದರೂ ಆಸ್ತಿಯ ಮಾಲೀಕನಿಂದ ಹಕ್ಕುಗಳನ್ನು 'ನ್ಯಾಯ' ವಾಗಿಯೇ ಹೇಳಿ ಕಸಿದುಕೊಳ್ಳುತ್ತಿದ್ದರೆಂಬುದಕ್ಕೆ ನ್ಯಾಯಾಧೀಶನ ಅಂದಿನ ತೀರ್ಮಾನ ಒಳ್ಳೆಯ ನಿದರ್ಶನವಾಗಿದ್ದಿತು.

ಆ ತೀರ್ಮಾನಕ್ಕೆ ಅಲ್ಲಿ ನೆರೆದಿದ್ದವರೆಲ್ಲ ಸಹಿಹಾಕಿದರು.

ಓದುಮುಗಿದ ಮೇಲೆ ಕಾರ್ಯದರ್ಶಿ ತನ್ನ ಸ್ಥಳದಲ್ಲಿ ಕುಳಿತ. ಅನಂತರ ನ್ಯಾಯಾಧೀಶ ಎದ್ದು ನಿಂತು, ಬಾಗಿ, ಅತ್ಯಂತ ವಿನಯದಿಂದ ಕಾಗದ ಪತ್ರಗಳನ್ನು ಪೆಟ್ರೋವಿಷ್‌ನ ಮುಂದಿಡುತ್ತಾ, ಅವಕ್ಕೆ ಸಹಿಹಾಕುವಂತೆ ಅರಿಕೆ-ಮಾಡಿಕೊಂಡ. ಪೆಟ್ರೋವಿಷ್ ಆತನ ಕೈಯಿಂದ ಲೇಖನಿಯನ್ನು ತೆಗೆದುಕೊಂಡು, ತೀರ್ಮಾನದ ಬಗ್ಗೆ ತನ್ನ ಸಂಪೂರ್ಣ ತೃಪ್ತಿಯನ್ನು ವ್ಯಕ್ತಪಡಿಸುತ್ತಾ ಸಹಿಹಾಕಿದ.

ಈಗ ದುಬ್ರೋವ್‌ಸ್ಕಿಯ ಸರದಿ ಬಂತು. ಕಾರ್ಯದರ್ಶಿ ತೀರ್ಮಾನದ ಪ್ರತಿಯನ್ನು ಆತನ ಮುಂದೊಡ್ಡಿದ. ದುಬ್ರೋವ್‌ಸ್ಕಿ ತಲೆತಗ್ಗಿಸಿಕೊಂಡು ಚಲಿಸದೆ ನಿಂತುಬಿಟ್ಟಿದ್ದ.

ಕಾರ್ಯದರ್ಶಿ ಮತ್ತೊಮ್ಮೆ ಸಹಿಹಾಕಲು ಹೇಳಿದ. "ಸಂಪೂರ್ಣ ಒಪ್ಪಿಗೆಯಿದ್ದಲ್ಲಿ ಸಹಿಹಾಕಿ. ಇಲ್ಲದಿದ್ದಲ್ಲಿ ನಿಮಗೆ ತೃಪ್ತಿಯಾಗಲಿಲ್ಲವೆಂದು ಹೇಳಿ, ನಿಯಮಿತ ಅವಧಿಯಲ್ಲಿ, ಮೇಲಿನ ಕೋರ್ಟಿಗೆ ಅಪೀಲು ಹೋಗಲು ನಿಮಗೆ ಸರ್ವ ಸ್ವಾತಂತ್ರ್ಯವಿದೆ" ಎಂದು ಆಶ್ವಾಸನೆ ಇತ್ತ.

ದುಬ್ರೋವ್‌ಸ್ಕಿ ಮೌನದಿಂದಿದ್ದ........ಸ್ವಲ್ಪ ಹೊತ್ತಾದ ಮೇಲೆ ಒಮ್ಮೆಗೇ ತಲೆ ಎತ್ತಿದ. ಆತನ ಮೈ ಆವೇಶಭರದಿಂದ ಕಂಪಿಸುತ್ತಿತ್ತು. ಕಣ್ಣುಗಳು ಕೆಂಡಕಾರುತ್ತಿದ್ದುವು. ನೆಲವನ್ನು ಪಾದದಿಂದ ಮೆಟ್ಟಿ ಹೂಂಕರಿಸುತ್ತಾ, ಮುಂದೆ ನಿಂತಿದ್ದ ಕಾರ್ಯದರ್ಶಿಯನ್ನು ಪಕ್ಕಕ್ಕೆ ತಳ್ಳಿದ. ಆತ ಹತೋಟಿ ತಪ್ಪಿ ಉರುಳಿಬಿಟ್ಟ. ಅನಂತರ ದುಬ್ರೋವ್‌ಸ್ಕಿ ಪಕ್ಕದಲ್ಲೇ ಇದ್ದ ಮಸಿಕುಡಿಕೆಯನ್ನು ತೆಗೆದುಕೊಂಡು ನ್ಯಾಯಾಧೀಶನತ್ತ ಎಸೆದ. ಈ ಹುಚ್ಚು ವರ್ತನೆಯನ್ನು ಕಂಡು ಎಲ್ಲರೂ ಭಯಭ್ರಾಂತರಾದರು.

"ಅಯ್ಯೋ, ಇದೇನಿದು? ಇದೆಂತಹ ಅತ್ಯಾಚಾರ! ದೈವಮಂದಿರವನ್ನು ಅಪವಿತ್ರಗೊಳಿಸುತ್ತಿದ್ದಾರಲ್ಲ! ಎಂತಹ ಕಾಲ ಬಂತು! ಕೆಟ್ಟ ಪೀಳಿಗೆಯವರೇ, ತೊಲಗಿ, ನಾಶವಾಗಿ ಹೋಗಿ!" ಎಂದು ದುಬ್ರೋವ್‌ಸ್ಕಿ ಕೂಗಿಕೊಂಡ. ಅನಂತರ ಕಿರಿಲ್ಲಾ ಪೆಟ್ರೋವಿಷ್‌ನತ್ತ ತಿರುಗಿ, "ಪವಿತ್ರವಾದ ದೇವರಗುಡಿಗೆ, ಅನಾಗರಿಕ ಬೇಟೆಗಾರರು ತಮ್ಮ ಕುನ್ನಿಗಳನ್ನು ತರೋದನ್ನು ಯಾರಾದರೂ ಕೇಳಿದ್ದಾರೆಯೆ, ಮಹಾಸ್ವಾಮಿ? ಇಲ್ಲಿ ಎತ್ತ ನೋಡಿದರತ್ತ

ಕುನ್ನಿಗಳೇ ಕಾಣುತ್ತವಲ್ಲ!....ಇರಲಿ, ಇವರಿಗೆಲ್ಲ ಸರಿಯಾದ ಪಾಠ ಕಲಿಸ ಬೇಕು...." ಎಂದು ಉನ್ಮತ್ತನಾಗಿ ರೇಗಾಡಿದ.

ಈ ಕೋಲಾಹಲವನ್ನು ಕೇಳಿ, ಪಹರೆಯವನು ಒಳಕ್ಕೆ ಓಡಿ ಬಂದು, ದುಬ್ರೋವ್‌ಸ್ಕಿಯನ್ನು, ಆತನ ಪ್ರತಿಭಟನೆಯನ್ನೂ ಲೆಕ್ಕಿಸದೆ, ಕಷ್ಟಪಟ್ಟು ಬಂಧಿಸಿದ. ಅನಂತರ ಹಾಗೇ ಆತನನ್ನು ಹೊರಕ್ಕೆ ಸಾಗಿಸಿಕೊಂಡು ಹೋಗಿ ಆತನ ಬಂಡಿಯಲ್ಲಿ ಕುಳ್ಳಿರಿಸಿದ. ಅದಾದ ಮೇಲೆ ಪೆಟ್ರೋವಿಷ್‌ನೂ ಸಹ ಕೋರ್ಟಿನ ಜನರೆಲ್ಲರೊಡಗೂಡಿ ಹೊರಬಿದ್ದ. ಹೀಗೆ ದುಬ್ರೋವ್‌ಸ್ಕಿಗೆ ಅಕಸ್ಮಾತ್ತಾಗಿ ಬುದ್ಧಿ ಭ್ರಮಣೆಯಾದುದನ್ನು ಕಂಡು, ಪೆಟ್ರೋವಿಷ್‌ನ ಮನಸ್ಸು ತಳಮಳಗೊಂಡಿತು. ಈ ಹಗರಣ ಇಷ್ಟೊಂದು ಕೆಡುಕನ್ನು ಮಾಡ ಬಹುದೆಂದು ಆತ ಬಗೆದಿರಲಿಲ್ಲ. ಈ ಕಹಿ ಪ್ರಸಂಗ ಆತನ ಗೆಲುವಿನ ಸಂತೋಷಕ್ಕೆ ವಿಷ ಬೆರಸಿಬಿಟ್ಟಿತು.

ತಮ್ಮ ಕಾರ್ಯತತ್ಪರತೆಗೆ, ಸೇವೆಗೆ, ಪ್ರತಿಫಲಾಕಾಂಕ್ಷಿಗಳಾಗಿ ಕಾದು ನಿಂತಿದ್ದ ನ್ಯಾಯಾಧಿಪತಿ ಮತ್ತು ವಕೀಲರುಗಳು ನಿರಾಶರಾಗಬೇಕಾಯಿತು. ವ್ಯಗ್ರಗೊಂಡ ಮನಸ್ಸಿನ ಪೆಟ್ರೋವಿಷ್ ಅವರೊಡನೆ ಒಂದು ಸ್ನೇಹಪೂರಿತ ಮಾತನ್ನೂ ಆಡದೆ, ಅಂದೇ ತನ್ನ ಗ್ರಾಮಕ್ಕೆ ಹೊರಟುಬಿಟ್ಟ.

ದುಬ್ರೋವ್‌ಸ್ಕಿ ಆ ಹೊತ್ತಿಗೆ, ಆಸ್ಪತ್ರೆಯಲ್ಲಿ ಪ್ರಜ್ಞಾಶೂನ್ಯನಾಗಿ ಮಲಗಿದ್ದ. ಅದೃಷ್ಟವಶಾತ್ ಆ ಜಿಲ್ಲೆಯ ವೈದ್ಯಾಧಿಕಾರಿ, ಕೇವಲ ಅಳಲೆ ಕಾಯಿ ಪಂಡಿತನಾಗಿರಲಿಲ್ಲ. ಜಿಗಣೆಗಳ ಸಹಾಯದಿಂದ ದುಬ್ರೋವ್‌ಸ್ಕಿಯ ದೇಹದಿಂದ ಸ್ವಲ್ಪ ರಕ್ತವನ್ನು ಹೊರತೆಗೆದ. ಇದರಿಂದಾಗಿ ಸಾಯಂಕಾಲದ ಹೊತ್ತಿಗೆ ರೋಗಿಗೆ ಸ್ವಲ್ಪ ಸಮಾಧಾನವಾದಂತಾಗಿ ಪ್ರಜ್ಞೆ ಬಂತು. ಮಾರ ನೆಯ ದಿನ ಆತನನ್ನು ಅವನ ಹಳ್ಳಿ ಕಿಸ್ತೆನೆವ್‌ಕಾಗೆ ಸಾಗಿಸಲಾಯಿತು. ಆದರೆ ಅವರ ಮಾಲಿಕತ್ವ ಮಾತ್ರ ಆತನ ಕೈತಪ್ಪಿ ಹೋಗಿತ್ತು.

೩

ಕಾಲ ಸವೆಯಿತು. ಆದರೆ ದುರ್ಬಲ ದುಬ್ರೋವ್‌ಸ್ಕಿಯ ದೇಹ ಸ್ಥಿತಿ ಸುಧಾರಿಸುವ ಲಕ್ಷಣಗಳೇ ಕಂಡು ಬರಲಿಲ್ಲ. ನಿಜ, ಹಿಂದಿನಂತೆ ಸ್ಮೃತಿವಿಭ್ರಮಣೆ, ಆವೇಶ–ಉನ್ಮಾದಗಳೇನೋ ಪುನಃ ಕಾಣಿಸಿಕೊಳ್ಳಲಿಲ್ಲ.

ಆದರೂ ದೇಹಬಲ ಕುಂದಿ, ಇಂದ್ರಿಯ ಶಕ್ತಿ ಕ್ಷಯಿಸತೊಡಗಿತು. ಆತ ಹಿಂದೆ ಮಾಡುತ್ತಿದ್ದ ಕೆಲಸ–ಕಾರ್ಯಗಳನ್ನೆಲ್ಲಾ ತೊರೆದುಬಿಟ್ಟ. ತಾನಾಯಿತು, ತನ್ನ ಕೋಣೆಯಾಯಿತು. ಯಾವಾಗಲೂ ಎಲ್ಲೋ ನೋಡುತ್ತಾ ದಿನಗಟ್ಟಲೆ ಕುಳಿತುಬಿಡುತ್ತಿದ್ದ. ಆತನ ಮನೆಯಲ್ಲಿ ಯೆಗೊರೋವ್ನಾ ಎಂಬ ಸಹೃದಯಳಾದ ವೃದ್ಧೆಯಾದ ದಾದಿಯೊಬ್ಬಳಿದ್ದಳು. ಮಗನ ಶುಶ್ರೂಷೆಗೆಂದು ಈಕೆಯನ್ನು ದುಬ್ರೋವ್‌ಸ್ಕಿ ಹಿಂದೆ ಗೊತ್ತುಮಾಡಿಕೊಂಡಿದ್ದ. ಮಗನ ಪೋಷಣೆ ಮಾಡಿದ ಆಕೆ, ತಂದೆಯ ಪೋಷಣೆಯಲ್ಲಿ ನಿರತಳಾದಳು. ಆತನನ್ನು ಮಗುವಿನಂತೆ, ವಾತ್ಸಲ್ಯದಿಂದ ಉಪಚರಿಸಿದಳು. ಊಟ, ನಿದ್ರೆಯ ಹೊತ್ತು ಬಂದಾಗ ಸರಿಯಾಗಿ ಆತನನ್ನು ಎಬ್ಬಿಸುತ್ತಿದ್ದಳು. ಉಣಬಡಿಸಿ, ಹಾಸಿಗೆ ಹಾಸಿಕೊಟ್ಟು ಆರೈಕೆ ಮಾಡುತ್ತಿದ್ದಳು. ದುಬ್ರೋವ್‌ಸ್ಕಿಯೂ ಆಕೆ ಹೇಳಿದಂತೆ ಕೇಳುತ್ತಿದ್ದ. ಆಕೆಯ ವಿನಾ ಬೇರಾವೊಂದಿಗೂ ಆತ ಮಾತು ಕೂಡ ಆಡುತ್ತಿರಲಿಲ್ಲ. ತನ್ನ ಆವಶ್ಯಕತೆಗಳ ಬಗ್ಗೆ ಯೋಚನೆ ಮಾಡುವಷ್ಟು, ವ್ಯವಹಾರ ನಡೆಸುವಷ್ಟು ಚೈತನ್ಯ ಆತನಿಗಿರಲಿಲ್ಲ. ಮಗನಾದರೋ ಪೀಟರ್ಸ್‌ಬರ್ಗ್‌ನಲ್ಲಿದ್ದ ಸೈನ್ಯದ ರಕ್ಷಣಾ ದಳದಲ್ಲಿ ಅಧಿಕಾರಿಯಾಗಿದ್ದ. ಯೆಗೊರೋವ್ನಾಳೇ ಯೋಚನೆಮಾಡಿ, ಆತನಿಗೆ ಹೇಳಿಕಳುಹಿಸಬೇಕೆಂದು ನಿರ್ಧರಿಸಿದಳು. ಲೆಕ್ಕದ ಪುಸ್ತಕದಿಂದ ಒಂದು ಹಾಳೆಯನ್ನು ಹರಿದುಕೊಂಡು ಅಡಿಗೆಯವನಾದ ಹ್ಯಾರಿಟನ್ ಬಳಿ ಹೋದಳು. ಆ ಹಳ್ಳಿಯ ಕೆಲಸಗಾರ ವರ್ಗದಲ್ಲಿ ಅವನೊಬ್ಬನಿಗೆ ಮಾತ್ರ ಓದು–ಬರಹ ಬರುತ್ತಿದ್ದಿತು. ಕಾಗದವನ್ನು ಹೇಳಿ ಬರೆಯಿಸಿ ಯೆಗೊರೋವ್ನಾ, ಅಂದೇ ನಗರದ ಅಂಚೆ ಕಚೇರಿಗೆ ಕಳುಹಿಸಿಕೊಟ್ಟಳು.

ಈಗ ನಮ್ಮ ಕಥಾನಕದ ನಿಜವಾದ ನಾಯಕನನ್ನು ಓದುಗರಿಗೆ ಪರಿಚಯ ಮಾಡಿಕೊಡುವ ಸಮಯ ಒದಗಿದೆ.

ವ್ಲಾಡಿಮಿರ್ ದುಬ್ರೋವ್‌ಸ್ಕಿ, ಸೈನ್ಯದ ರಕ್ಷಣಾದಳದ ಶಾಲೆಯಲ್ಲಿ ತರಬೇತು ಹೊಂದಿ, ಉತ್ತೀರ್ಣನಾಗಿ, ದಳದ ಉಪನಾಯಕನಾಗಿ ಆರಿಸಲ್ಪಟ್ಟಿದ್ದ. ಓದುತ್ತಿದ್ದಾಗ, ಅವನ ತಂದೆ, ಮಗನನ್ನು ಯಾವ ವಿಷಯದಲ್ಲೂ ಎಳ್ಳಷ್ಟೂ ಕೊರತೆಯಿಲ್ಲದಂತೆ ನೋಡಿಕೊಳ್ಳುತ್ತಿದ್ದ. ಅವನಿಗೆ ಆವಶ್ಯಕವಾಗಿದ್ದುದಕ್ಕಿಂತ ಹೆಚ್ಚಾಗಿಯೇ ಹಣ ಕಳುಹಿಸಿಕೊಡುತ್ತಿದ್ದ. ಹುಡುಗ ಸ್ವಭಾವತಃ ಅತ್ಯಾಸೆಯ, ದುಂದುಗಾರಿಕೆಯ ಚಟದವನಾಗಿದ್ದ. ಸರಿ,

ತಂದೆ ಕಳುಹುತ್ತಿದ್ದ ಹೆಚ್ಚು ಹಣ, ಅವನ ಸ್ವಭಾವಕ್ಕೆ ಪ್ರೋತ್ಸಾಹವಿತ್ತಿತು. ಮನಸ್ವಿಯಾಗಿ ಹಣವನ್ನು ಪೋಲು ಮಾಡಿದ. ತನ್ನ ಮನಸ್ಸಿನಲ್ಲಿ ಉದ್ಭವಿಸಿದ ಎಲ್ಲ ವಿಧವಾದ ಅಭಿಲಾಷೆಗಳನ್ನೂ ತೃಪ್ತಿಪಡಿಸಿದ. ಭವಿಷ್ಯದ ಬಗ್ಗೆ ಸ್ವಲ್ಪವೂ ಯೋಚಿಸದೆ, ಮದ್ಯಪಾನ, ಜೂಜಾಟಗಳಲ್ಲಿ ನಿರತನಾದ, ಎಲ್ಲೆಲ್ಲೂ ಸಾಲ ಎತ್ತಲು ಮೊದಲುಮಾಡಿದ. ಸಾಮಾನ್ಯವಾಗಿ ಎಲ್ಲ ಹಣ ಕಳೆದುಕೊಂಡ ಯುವಕರೂ ಕನಸು ಕಾಣುವಂತೆ, ತನಗೆ ಸ್ವಲ್ಪದರಲ್ಲೇ ಶ್ರೀಮಂತ ಮನೆತನದ ಹೆಣ್ಣು ಸಿಗುವುದು, ಅನಂತರ ಎಲ್ಲವೂ ಸರಿಹೋಗುವುದು—ಎಂಬ ಭರವಸೆಯ ಮೇಲೆ ಅವನು ಇಷ್ಟೆಲ್ಲ ಕಾರುಬಾರು ನಡಸುತ್ತಿದ್ದ.

ಒಂದು ದಿನ ಸಂಜೆ ವ್ಲಾಡಿಮಿರ್ ದುಬ್ರೋವ್‌ಸ್ಕಿ, ಕೆಲವು ಗೆಳೆಯ ಅಧಿಕಾರಗಳನ್ನು ಸೇರಿಸಿಕೊಂಡು ತನ್ನ ಕೊಠಡಿಯಲ್ಲಿ ಮೋಜುಮಾಡುತ್ತಿದ್ದ. ಆ ಅಧಿಕಾರಿಗಳು ಸುಖಾಸನಗಳಲ್ಲಿ ಒರಗಿಕೊಂಡು, ಮದ್ಯಪಾನ ಮಾಡುತ್ತಾ 'ಹುಕ್ಕ' ಸೇದುತ್ತಿದ್ದರು. ಆಗ, ವ್ಲಾಡಿಮಿರ್‌ನ ಸೇವಕ ಗ್ರೀಷಾ, ಆತನ ಕೈಗೆ ಕಾಗದವೊಂದನ್ನು ಕೊಟ್ಟ. ಲಕ್ಕೋಟೆಯ ಮೇಲಿನ ಹಸ್ತಾಕ್ಷರ, ಮುದ್ರೆಗಳನ್ನು ನೋಡಿ, ವ್ಲಾಡಿಮಿರ್ ಒಂದು ಕ್ಷಣ ಬೆಚ್ಚಿಬಿದ್ದ.

ಬೇಗ ಲಕ್ಕೋಟೆಯನ್ನು ಒಡೆದು ಪತ್ರ ಓದಿದ:

ನಮ್ಮ ಪ್ರಭು ವ್ಲಾಡಿಮಿರ್‌ರವರಲ್ಲಿ, ನಾನು, ತಮ್ಮ ಚಿಕ್ಕಂದಿನ ದಾದಿ, ತಮ್ಮ ತಂದೆಯವರ ಆರೋಗ್ಯದ ಬಗ್ಗೆ ನಾಲ್ಕು ಮಾತುಗಳನ್ನು ಬರೆಯಲು ಧೈರ್ಯಮಾಡಿದ್ದೇನೆ. ಅವರ ಶರೀರ ಪ್ರಕೃತಿ ತೀರಾ ಹದಗೆಟ್ಟಿದೆ. ಕೆಲವೊಮ್ಮೆ ಹುಚ್ಚರಂತೆ ಸಿಕ್ಕಾಪಟ್ಟೆ ಚೀರಾಡುತ್ತಾರೆ. ಮತ್ತೆ ಕೆಲವು ಸಾರಿ ಎಳೆಯ ಮಗುವಿನಂತೆ ಮುಗ್ಧರಾಗಿ ಇಡೀ ದಿನ ಕುಳಿತುಬಿಡುತ್ತಾರೆ. ಆದರೇನು, ಮನುಷ್ಯನ ಅಳಿವು, ಉಳಿವುಗಳನ್ನು ದಯಾಮಯನಾದ ದೇವರು ತಾನೆ ತೀರ್ಮಾನಿಸುವುದು? ಬನ್ನಿ, ನಮ್ಮ ಭಾಗ್ಯದೇವತೆಯೇ, ಗಿಡುಗನಂತೆ ಶೀಘ್ರವಾಗಿ ಬನ್ನಿ. ನಿಮಗಾಗಿ ನಗರಕ್ಕೆ ಕುದುರೆಗಳನ್ನು ಕಳುಹಿಸುತ್ತೇವೆ. ಈ ಮಧ್ಯೆ ಈಚೆಗೆ ಎಲ್ಲರೂ ಒಂದು ಹೊಸ ಮಾತು ಆಡುತ್ತಿದ್ದಾರೆ. ನಮ್ಮನ್ನೆಲ್ಲಾ ಇನ್ನು ಮುಂದೆ ಕಿರಿಲ್ಲಾ ಪೆಟ್ರೋವಿಷ್‌ನ ವಶಕ್ಕೆ ಒಪ್ಪಿಸಬೇಕೆಂದು ಕೋರ್ಟಿನಲ್ಲಿ ತೀರ್ಮಾನವಾಗಿದೆಯಂತೆ. ನಾವೆಲ್ಲ ಅವನ ಅಧೀನವೆಂದು ಎಲ್ಲರೂ ಆಡಿಕೊಳ್ಳುತ್ತಿದ್ದಾರೆ. ಅದು ಹೇಗೆ ಸಾಧ್ಯ ಒಡೆಯ? ನಾವು ಎಂದೆಂದಿಗೂ ನಿಮ್ಮ

ಸೇವಕರೇ. ಅದೇ ನಮ್ಮ ಅಭೀಷ್ಟ. ನೀವು ಹೇಗಿದ್ದರೂ ಪೀಟರ್ಸ್ ಬರ್ಗ್‌ನಲ್ಲಿದ್ದೀರಿ. ನೀವು ಮನಸ್ಸು ಮಾಡಿದಲ್ಲಿ ಜಾರ್ ದೊರೆಯೊಂದಿಗೆ ಈ ಬಗ್ಗೆ ಮಾತನಾಡಬಹುದು. ನಮಗೆಲ್ಲ ಅನ್ಯಾಯವಾಗುವುದಕ್ಕೆ ಜಾರ್ ದೊರೆ ಖಂಡಿತವಾಗಿಯೂ ಅನುಮತಿ ಈಯಲಾರರು.

ಎಂದು,
ತಮ್ಮ ವಿಶ್ವಾಸಿ ಸೇವಕಿ ಮತ್ತು ದಾದಿ,
ಒರಿನಾ ಯೆಗೊರೋವ್ನಾ ಬುಸ್ರೀವ

ಮರೆತದ್ದು—

ತಮ್ಮ ಬಳಿ ಸೇವೆಸಲ್ಲಿಸುತ್ತಿರುವ ನನ್ನ ಮಗ ಗ್ರೀಷಾಗೆ ತಾಯಿಯ ಆಶೀರ್ವಾದಗಳನ್ನು ತಿಳಿಸುವುದು. ಅವನು ನಿಮ್ಮ ಸೇವೆಯನ್ನು ತೃಪ್ತಿಕರವಾಗಿ ಮಾಡುತ್ತಿದ್ದಾನೆಯೆ? ಕಳೆದ ಒಂದು ವಾರದಿಂದ ಈ ಪ್ರದೇಶಗಳಲ್ಲಿ ಮಳೆ ಜಾಸ್ತಿಯಾಗಿ ಹುಯ್ಯುತ್ತಿದೆ. ನಮ್ಮ ಮನೆಯ ಕುರಿಕಾಯುವ ರೋದ್ಯಾ, ಸೈಂಟ್ ನಿಕೊಲಸ್ ದಿನದಂದು ತೀರಿಕೊಂಡ.

ಹರುಕು-ಮುರುಕು ಭಾಷೆಯಲ್ಲಿ ಓರೆ-ಕೋರೆಯಾಗಿ ಬರೆದಿದ್ದ ಆ ಪತ್ರವನ್ನು ಅರ್ಥಮಾಡಿಕೊಳ್ಳಲು, ವ್ಲಾಡಿಮಿರ್ ದುಬ್ರೋವ್‌ಸ್ಕಿ, ನಾಲ್ಕೈದು ಬಾರಿ ಶ್ರಮಪಟ್ಟು ಓದಬೇಕಾಯಿತು. ಒಂದೊಂದು ಸಾಲು ಓದಿದಾಗಲೂ ಆತನಿಗೆ ವಿಪರೀತ ಚಿತ್ತಕ್ಷೋಭೆಯಾಗತೊಡಗಿತು. ಅವನು ಇನ್ನೂ ಚಿಕ್ಕ ಮಗುವಾಗಿದ್ದಾಗಲೇ ತಾಯಿ ತೀರಿಹೋಗಿದ್ದಳು. ಎಂಟನೆಯ ವಯಸ್ಸಿನ ಹೊತ್ತಿಗಾಗಲೇ ಪೀಟರ್ಸ್‌ಬರ್ಗ್‌ಗೆ ಬಂದುಬಿಟ್ಟಿದ್ದ. ಹೀಗಾಗಿ ಅವನಿಗೆ ತಂದೆಯ ಸ್ವಭಾವದ ಪರಿಚಯ ಸ್ವಲ್ಪವೂ ಆಗಿರಲಿಲ್ಲ. ಆದರೂ ತಂದೆಯ ಬಗ್ಗೆ ಆತನಲ್ಲಿ ಏನೋ ಒಂದು ರೀತಿಯ ಭಾವುಕ ಮಮತೆ ಬೆಳೆದುಬಿಟ್ಟಿತ್ತು. ಒಬ್ಬೊಂಟಿಗನಾಗಿ ವಾಸಿಸುತ್ತಿದ್ದ ಅವನಿಗೆ ಸಾಂಸಾರಿಕ ಜೀವನದ ಪ್ರಶಾಂತ ಸುಖ-ಸೌಲಭ್ಯಗಳ ಅನುಭವವಿರಲಿಲ್ಲ. ಆದರೆ ಆ ಕೊರತೆಯೇ ಅವನನ್ನು ಮನೆಯ ವಿಷಯದಲ್ಲಿ ಹೆಚ್ಚು ಗೌರವ-ಶ್ರದ್ಧೆ ಇಟ್ಟುಕೊಳ್ಳುವಂತೆ ಪ್ರೇರೇಪಿಸಿದ್ದಿತು.

ತಾಯಿಯಂತೂ ಇಲ್ಲ. ಇನ್ನು ತಂದೆಯೂ ತನ್ನ ಕೈಬಿಟ್ಟು

ಹೋದಲ್ಲಿ! ತಾನು ಅನಾಥನಾಗುವೆನೆಂಬ ಯೋಚನೆ ಹೊಳೆದು ಆತನ ಮನಸ್ಸು ಪರಿತಪಿಸತೊಡಗಿತು. ಹಾಗೆಯೇ, ಕಾಗದ ಓದಿ, ರೋಗಿಷ್ಟ ತಂದೆಯ ಚಿಂತಾಜನಕ ಪರಿಸ್ಥಿತಿಯನ್ನು ನೆನೆದು, ಆತ ಭಯವಿಹ್ವಲನಾದ. ಎಲ್ಲ ರಿಂದಲೂ ಪರಿತ್ಯಜಿಸಲ್ಪಟ್ಟು, ಒಂಟಿಯಾಗಿ, ಯಾವುದೋ ಹಳ್ಳಿಯಲ್ಲಿ, ಏನೂ ಅರಿಯದ ವೃದ್ಧೆ ಹೆಂಗಸು ಮತ್ತು ಸೇವಕರ ಕೃಪೆಗೊಳಗಾಗಿ, ಏನೋ ಒಂದು ದೊಡ್ಡ ವಿಪತ್ತಿನಿಂದ ಸಂಕಟಪಡುತ್ತಾ ದಿನದಿನಕ್ಕೆ ಕೃಶ ನಾಗಿ ಹೋಗುತ್ತಿರಬಹುದೆಂದು ತನ್ನ ತಂದೆಯ ವಿಷಯದಲ್ಲಿ ಕಲ್ಪನೆ ಮಾಡಿ ಕೊಂಡ. 'ಅಯ್ಯೋ, ತಂದೆಯ ವಿಷಯದಲ್ಲಿ ಇಷ್ಟೊಂದು ಔದಾಸೀನ್ಯ ತೋರಿ ನಾನೆಂತಹ ಅಪರಾಧವೆಸಗಿದ್ದೇನಲ್ಲ' ಎಂದು ತನ್ನನ್ನು ತಾನೇ ಹಳಿದುಕೊಂಡ. ಅನೇಕ ದಿನಗಳಿಂದ ತಂದೆಯಿಂದ ಕಾಗದವೇ ಬಂದಿರಲಿಲ್ಲ. ತಾನಾದರೂ ಆತನ ಯೋಗಕ್ಷೇಮ ವಿಚಾರಿಸಿ ಕಾಗದ ಬರೆಯಬಾರದಾ ಗಿತ್ತೆ? ಬೇಟೆಯಾಡುವುದರಲ್ಲಿಯೇ, ಜಮೀನಿನ ಮೇಲ್ವಿಚಾರಣೆಯಲ್ಲಿಯೇ ಮಗ್ನನಾಗಿರಬಹುದೆಂದು ತಿಳಿದು ಆತನೂ ಸುಮ್ಮನಿದ್ದುಬಿಟ್ಟಿದ್ದ.

ಈಗ ಕೂಡಲೇ ತಂದೆಯ ಬಳಿಗೆ ಹೋಗಬೇಕೆಂದು ನಿರ್ಧರಿಸಿದ. ತಂದೆಯ ದೇಹಸ್ಥಿತಿ ತೀರ ಕೆಟ್ಟಿದ್ದಲ್ಲಿ, ಕೆಲಸಕ್ಕೆ ರಾಜೀನಾಮೆ ಕೊಟ್ಟಾ ದರೂ ಸರಿಯೆ, ಹಳ್ಳಿಯಲ್ಲಿಯೇ ಉಳಿದುಕೊಂಡು ಪಿತೃಶುಶ್ರೂಷೆ ಮಾಡ ಬೇಕೆಂದು ತೀರ್ಮಾನಿಸಿದ. ಅವನ ಮನಸ್ಸಿನ ದುಗುಡವನ್ನು ಕಂಡು ಅವನ ಗೆಳೆಯರು ಹೊರಟುಹೋದರು. ಈಗ ಒಂಟಿಯಾದ ವ್ಲಾಡಿಮಿರ್, ರಜಕ್ಕೆ ಅರ್ಜಿಯನ್ನು ಬರೆದು, ಪೈಪು ಹೊತ್ತಿಸಿ ಸೇದುತ್ತಾ, ಗಾಢವಾದ ಆಲೋಚನೆಯಲ್ಲಿ ಮುಳುಗಿದ.

ಅಂದೇ ರಜಾ ಚೀಟಿಯನ್ನು ಮೇಲಧಿಕಾರಿಗಳಿಗೆ ತಲುಪಿಸಿ, ರಜ ಪಡೆದು, ಮೂರುದಿನಗಳನಂತರ ಹಳ್ಳಿಯ ಕಡೆ ಪ್ರಯಾಣ ಬೆಳೆಸಿದ.

ಸ್ವಲ್ಪ ಹೊತ್ತು ಪ್ರಯಾಣಮಾಡಿದ ಬಳಿಕ, ಗಾಡಿಯ ಕುದುರೆ ಗಳನ್ನು ಬದಲಿಸುವ ನಿಲ್ದಾಣ ಹತ್ತಿರವಾಯಿತು. ಅಲ್ಲಿ ಕುದುರೆಗಳನ್ನು ಬದಲಿಸಿಕೊಂಡು, ದಿಕ್ಕು ತಿರುಗಿಸಿ, ತನ್ನ ಹಳ್ಳಿಯ ಕಡೆ ಹೋಗಬೇಕಾಗಿತ್ತು. ಅವನ ಮನಸ್ಸನ್ನೆಲ್ಲಾ ಯಾವುದೋ ಅವ್ಯಕ್ತ ಭಯ ಆವರಿಸಿತ್ತು. ಊರಿಗೆ ತಲುಪಿದಾಗ ಜೀವಂತ ತಂದೆಯನ್ನು ಕಾಣುವೆನೇ ಎಂಬ ಶಂಕೆ ಅವನನ್ನು ಬಾಧಿಸುತ್ತಿತ್ತು. ಊರು ಸೇರಿದರೂ ಯಾವ ಸಂತೋಷಕ್ಕಾಗಿ? ಆ ದೂರದ

ಹಳ್ಳಿಯಲ್ಲಿ ಅವನಿಗಾಗಿ ಕಾದಿದ್ದುದು, ಒಂಟಿತನ, ದಾರಿದ್ರ್ಯ, ಆಸ್ತಿಗೆ ಸಂಬಂಧಿಸಿದ ತಂಟೆ ತಕರಾರುಗಳು—ಇವೇ ಆಗಿದ್ದುವು. ಆಸ್ತಿಗೆ ಸಂಬಂಧಿಸಿದ ಯೋಚನೆಗಳನ್ನು ಹಿಂದೆ ಅವನು ಒಮ್ಮೆಯಾದರೂ ತಲೆಗೆ ಹಚ್ಚಿಕೊಂಡಿರಲಿಲ್ಲ. ಈಗ ಎಲ್ಲ ಸಂಕಟಗಳೂ ಒಮ್ಮೆಯೇ ಮೇಲೆರಗಿ ಬಂದಂತಾಯಿತು. ಹೀಗೆ ಮುಂದೇನಾಗಬಹುದೆಂಬುದನ್ನೆಲ್ಲಾ ಊಹೆ ಮಾಡುತ್ತಾ, ಅವನ ಮನಸ್ಸು ಉದ್ವಿಗ್ನಗೊಂಡಿತು. ನಿಲ್ದಾಣ ಸಿಕ್ಕಿದ ಕೂಡಲೇ, ಅಧಿಕಾರಿಯ ಬಳಿಸಾರಿ, ತನ್ನ ಹಳ್ಳಿಗೆ ಕುದುರೆಗಳಿಗಾಗಿ ವಿಚಾರಿಸಿದ. ಆತನು ಹೋಗಬೇಕಾದ ಹಳ್ಳಿಯ ಹೆಸರು ಕೇಳಿದ ಕೂಡಲೇ, ಕುದುರೆಗಳು ನಾಲ್ಕುದಿನಗಳ ಹಿಂದೆಯೇ ಬಂದು ಕಾಯುತ್ತಿವೆಯೆಂದು ಅಧಿಕಾರಿ ತಿಳಿಸಿದ. ಅದೇ ಹೊತ್ತಿಗೆ, ವ್ಲಾಡಿಮಿರ್‌ನ ಮನೆಯ ವೃದ್ಧ ಸಾರಥಿ ಆಂತಾನ್ ಕಾಣಿಸಿಕೊಂಡ. ಹಿಂದೆ, ವ್ಲಾಡಿಮಿರ್ ಮನೆಯಲ್ಲಿದ್ದಾಗ, ಆಂತಾನ್ ಅವನನ್ನು ಕುದುರೆಯ ಲಾಯಕ್ಕೆ ಆಗಾಗ್ಗೆ ಕರೆದೊಯ್ಯುತ್ತಿದ್ದ; ಅವನ ಚಿಕ್ಕ ಕುದುರೆಗೆ ಮಾಲೀಸುಮಾಡಿ, ಅದನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದ. ವ್ಲಾಡಿಮಿರ್‌ನನ್ನು ಕಂಡ ಕೂಡಲೇ ಆಂತಾನ್ ಕಣ್ಣೀರು ಸುರಿಸುತ್ತಾ, ಬಾಗಿ ನಮಸ್ಕರಿಸಿದ. ತಂದೆ ಇನ್ನೂ ಜೀವಂತರಾಗಿದ್ದಾರೆಂಬ ಸುದ್ದಿಯನ್ನು ಅರುಹಿದ. ಅನಂತರ ಕೂಡಲೇ ಹೋಗಿ ಕುದುರೆಗಳನ್ನು ಗಾಡಿಗೆ ಹೂಡಿ ಪ್ರಯಾಣಕ್ಕೆ ಸಿದ್ಧಪಡಿಸಿದ. ವ್ಲಾಡಿಮಿರ್‌ನೂ, ಉಪಾಹಾರವನ್ನೂ ಸಹ ಸ್ವೀಕರಿಸದೆ, ತ್ವರಿತವಾಗಿ ಹೊರಟೇಬಿಟ್ಟ. ಆಂತಾನ್ ಗಾಡಿಯನ್ನು ಹಳ್ಳಿಯ ಕಡೆಗೆ ತಿರುಗಿಸಿ, ಬಿರುಸಿನಿಂದ ಓಡಿಸಿದ. ದಾರಿ ಸಾಗುತ್ತಿದ್ದ ಹಾಗೇ ಅವರಿಬ್ಬರ ಮಧ್ಯೆ ಮಾತುಕತೆಯೂ ಸಾಗಿತು.

"ನಮ್ಮ ತಂದೆ ಮತ್ತು ಪೆಟ್ರೋವಿಚ್ ಮಧ್ಯೆ ಯಾವುದೋ ಕೋರ್ಟು ವಿವಾದವಾಯಿತಂತಲ್ಲ, ಯಾವುದು ಆ ವ್ಯಾಜ್ಯ, ಆಂತಾನ್?"

"ದೇವರಿಗೇ ಗೊತ್ತು, ವ್ಲಾಡಿಮಿರ್–ಸ್ವಾಮಿ. ಅದೇನೋ ಎಲ್ಲರೂ ಹೇಳುತ್ತಾರೆ—ನಮ್ಮ ದೊಡ್ಡ ಯಜಮಾನರಿಗೂ, ಪೆಟ್ರೋವಿಚ್‌ಗೂ ಮಧ್ಯೆ ಜಗಳವಾಯಿತಂತೆ. ಪೆಟ್ರೋವಿಚ್ ಯಜಮಾನರನ್ನು ಕೋರ್ಟಿಗೆ ಎಳೆದನಂತೆ. ನ್ಯಾಯಾಧೀಶನಿಗಿಂತ ಪೆಟ್ರೋವಿಚ್‌ನೇ ಹೆಚ್ಚು ಪ್ರಭಾವಶಾಲಿಯಾಗಿರುವಾಗ, ಕೋರ್ಟು ಏನು ತೀರ್ಮಾನ ಕೊಡಬಹುದು ಅನ್ನೋದು ನಿಮಗೆ ತಿಳಿದೇ ಇದೆ........ನಾವು, ಜೀತದಾರರು, ಯಜಮಾನರು ಮಾಡಿ

ದ್ದನ್ನು ಟೀಕಿಸುವುದು ಸರಿಯಲ್ಲ. ಆದರೂ, ನನಗೆ ಅನಿಸುತ್ತೆ, ನಮ್ಮ ಒಡೆಯರು ಪೆಟ್ರೋವಿಷ್‌ನೊಂದಿಗೆ ಮನಸ್ತಾಪ ಕಟ್ಟಿಕೊಳ್ಳಬಾರದಾಗಿತ್ತು ಅಂತ. ಉಹೂಂ, ಹಾಗೆ ಮಾಡಬಾರದಾಗಿತ್ತು ನನ್ನೊಡೆಯು, ಹಾಗೆ ಮಾಡಬಾರದಾಗಿತ್ತು. ತೊಗಲಿನ ಚಾಟಿಗೂ ಉಕ್ಕಿನ ಕೊಡಲಿಗೂ ಸಾಟಿಯೇ ಹೇಳಿ?"

"ಓಹೋ, ಹಾಗೇನು? ಹಾಗಾದರೆ, ಕಿರಿಲ್ಲಾ ಪೆಟ್ರೋವಿಷ್ ಇಲ್ಲೆಲ್ಲಾ ತನ್ನಿಷ್ಟದಂತೆ ವರ್ತಿಸುತ್ತಿದ್ದಾನೆ, ಅನ್ನು."

"ಹೌದು ಒಡೆಯ. ಎಲ್ಲವೂ ಅವನದೇ ದರ್ಬಾರು. ನ್ಯಾಯಾಧೀಶರುಗಳು ಕೂಡ ಆತನ ವಿರುದ್ಧ ತಮ್ಮ ಕಿರುಬೆರಳನ್ನೂ ಎತ್ತಲಾರರೆಂದು ಎಲ್ಲರೂ ಹೇಳುತ್ತಾರೆ. ಫೌಜುದಾರನಂತೂ ನಾಯಿಗಿಂತ ಕೀಳಾಗಿ ಯಾವಾಗಲೂ ಅವನ ಹಿಂದೆಯೇ ಅಲೆಯುತ್ತಿರುತ್ತಾನೆ. ನಗರದ ಗಣ್ಯ ವ್ಯಕ್ತಿಗಳೆಲ್ಲ ಗೌರವ ತೋರಿಸಲು ಅವನ ಮನೆಗೆ ಬರುತ್ತಾರೆ. ಸ್ವಾಭಾವಿಕವೇ. ಹೇಳೋದಿಲ್ವೆ—ನೀರಿನ ಬಾನಿ ಇದ್ದಕಡೆ ಹಂದಿಗಳೂ ಸಾಧಾರಣವಾಗಿ ಇದ್ದೇ ಇರುತ್ತವೆ, ಅಂತ."

"ಅವನು ನಮ್ಮ ಆಸ್ತಿಯನ್ನೆಲ್ಲಾ ಕಸಿದುಕೊಂಡಿದಾನೆ ಅಂತ ಕೇಳಿದೆ. ನಿಜವೇ?"

"ಹಾಗೇಂತ ನಾವೂ ಕೇಳಿದೆವು. ಮೊನ್ನೆ ಚರ್ಚಿನ ಮೇಲ್ವಿಚಾರಣಾಧಿಕಾರಿ, ನಾಮಕರಣ ಸಮಾರಂಭಕ್ಕೆ ನಮ್ಮ ಹಳ್ಳಿಗೆ ಬಂದಿದ್ದರು. ಆಗ, ದೊಡ್ಡ ಯಜಮಾನರಿಗೆ ಹೇಳಿದರು—'ಇನ್ನೇನಪ್ಪ. ನಿನ್ನ ಆಳ್ವಿಕೆ ಮುಗಿಯಿತು. ಇನ್ನು ಕಿರಿಲ್ಲಾ ಪೆಟ್ರೋವಿಷ್ ನಿಮ್ಮನ್ನೆಲ್ಲಾ ತನ್ನ ಅಂಗೈಯಲ್ಲಿಟ್ಟುಕೊಳ್ಳುತ್ತಾನೆ' ಅಂತ. ಕಮ್ಮಾರ ಮಿಕಿಟ ಆ ಮಾತು ಕೇಳಿದ್ದೇ ತಡ, 'ಓ, ಅದೆಲ್ಲ ಇರಲಿ ಬಿಡಿ ಸ್ವಾಮಿ. ಆ ಕೆಟ್ಟ ಸುದ್ದಿಯನ್ನು ಈಗ ಯಾಕೆ ಇಲ್ಲಿ ಪ್ರಸ್ತಾಪಿಸಿ, ಗೆಳೆಯರ ಮನಸ್ಸನ್ನು ಕೆಡಿಸಿ, ಸಮಾರಂಭವನ್ನು ಹಾಳು ಮಾಡುತ್ತೀರಿ? ಕಿರಿಲ್ಲಾ ಪೆಟ್ರೋವಿಷ್ ದೊಡ್ಡವನಾದರೆ, ಅವನಿಗೆ ದೊಡ್ಡವನು. ಹಾಗೇ ನಮ್ಮ ಒಡೆಯ ದುಬ್ರೋವ್‌ಸ್ಕಿಯವರೂ ದೊಡ್ಡವರೇ. ಯಾರು ಹೇಗಿದ್ದರೇನು, ನಾವೆಲ್ಲ ಪರಮಾತ್ಮನ ಮತ್ತು ಜಾರ್ ಪ್ರಭುವಿನ ಅಧೀನರಲ್ಲವೇ? ಪ್ರಭಾವವಿದ್ದ ಮಾತ್ರಕ್ಕೇ, ಯಾವನಾದರೊಬ್ಬ, ಜನರನ್ನೆಲ್ಲಾ ತುಳಿದು ಆಳುವುದಕ್ಕೆ ಸಾಧ್ಯವೇ? ಅಂದ."

"ಹಾಗಾದರೆ ಪೆಟ್ರೋವಿಚ್ ನಿಮ್ಮ ಒಡೆಯನಾಗುವುದು ನಿಮಗೆ ಇಷ್ಟವಿಲ್ಲವೇ ?"

"ಕಿರಿಲ್ಲಾ ಪೆಟ್ರೋವಿಚ್‌ನೇ? ಭಗವಂತನೇ ನಮ್ಮನ್ನು ಕಾಪಾಡ ಬೇಕು ! ಈಗಿರುವ ಸೇವಕರನ್ನೇ ಅವನು ಹುರಿದು ತಿನ್ನುತ್ತಿದ್ದಾನೆ. ಇನ್ನು ನಾವು, ಹೊಸಬರು ಹೋದರೆ, ನಮ್ಮಗಳ ಚರ್ಮ ಸುಲಿಸಿಬಿಡುತ್ತಾನೆ, ಅಷ್ಟೆ. ಬೇಡ, ಒಡೆಯ, ಎಂದೆಂದಿಗೂ ಆ ಕಷ್ಟ ಬೇಡ ! ನಮ್ಮ ದೊಡ್ಡ ಯಜಮಾನರು ಆರೋಗ್ಯ ಪಡೆದುಕೊಂಡರೆ ನಮಗೆ ಸಾಕು. ಅಥವಾ ದೇವರು ಏನಾದರೂ ಅವರನ್ನು ತನ್ನ ಕಡೆಗೆ ಕರೆದುಕೊಂಡರೆ, ನೀವು ಇದ್ದೇ ಇದ್ದೀರಿ. ನಿಮ್ಮ ವಿನಾ ನಮಗೆ ಇನ್ನಾವ ಒಡೆಯರೂ ಬೇಕಾಗಿಲ್ಲ. ನಮ್ಮ ಕೈಬಿಡಬೇಡಿ. ಅಷ್ಟು ಉಪಕಾರ ಮಾಡಿ. ನಾವು ಯಾವತ್ತಿಗೂ ನಿಮ್ಮ ಬೆಂಬಲಿಗರಾಗಿಯೇ ಇರುತ್ತೇವೆ." ಹೀಗೆ ಹೇಳುತ್ತಾ ಆಂತಾನ್, ಕುದುರೆ ಗಳಿಗೆ ಚಾಟಿ ಏಟುಕೊಟ್ಟು, ಲಗಾಮನ್ನು ಎಳೆದು, ಸಡಿಲಿಸಿದ; ಕುದುರೆ ಗಳು ಚುರುಕಾಗಿ ಓಡತೊಡಗಿದುವು.

ಸಾರಥಿಯ ನಿಷ್ಠೆ, ಸೇವಾಕಾಂಕ್ಷೆಗಳಿಗೆ ಮೆಚ್ಚಿ ವ್ಲಾಡಿಮಿರ್ ಯೋಚನಾ ಮಗ್ನನಾಗಿ ಮಾತನಾಡದೆ ಕುಳಿತ. ಹೀಗೇ ಸುಮಾರು ಒಂದು ತಾಸು ಪ್ರಯಾಣ ಮಾಡಿರಬೇಕು. ಆಗ, ಪಕ್ಕದಲ್ಲೇ ಕುಳಿತಿದ್ದ ಗ್ರೀಷಾ, "ಅಗೋ, ಅಲ್ಲಿ ನೋಡಿ, ಪೋಕ್ರೋವ್‌ಸ್ಕಾಯಿ ಗ್ರಾಮ" ಎಂದು ಉದ್ಗರಿ ಸಿದ. ದುಬ್ರೋವ್‌ಸ್ಕಿ ಎಚ್ಚೆತ್ತು, ತಲೆ ಎತ್ತಿ ಅತ್ತಕಡೆ ನೋಡಿದ. ಅವರು ಒಂದು ದೊಡ್ಡ ಸರೋವರದ ಪಕ್ಕದಲ್ಲಿ ಹಾದುಹೋಗುತ್ತಿದ್ದರು. ಆ ಸರೋವರದಿಂದ ಒಂದು ನದಿ ಹೊರಟು, ಬೆಟ್ಟ-ಗುಡ್ಡಗಳನ್ನು ಬಳಸಿ ಕೊಂಡು ಹರಿದುಹೋಗುತ್ತಿತ್ತು. ಒಂದು ಗುಡ್ಡದ ಮೇಲೆ ಕಲ್ಲಿನಿಂದ ಕಟ್ಟಿದ ಒಂದು ದೊಡ್ಡ ಭವನವಿದ್ದಿತು. ಅದರ ಹಸುರು ಮೇಲ್ಛಾವಣಿ ಮತ್ತು ಪ್ರಕೃತಿ ನೋಟಕ್ಕೆಂದು ಕಟ್ಟಿದ, ಎತ್ತರವಾದ ಶಿಖರ—ಇವು, ತೋಪಿನಲ್ಲಿ ದಟ್ಟವಾಗಿ ಬೆಳೆದಿದ್ದ ಮರಗಳ ಎಲೆಗಳ ಮಧ್ಯೆ ಎದ್ದು ಕಾಣು ತ್ತಿದ್ದುವು. ಇನ್ನೊಂದು ಗುಡ್ಡದ ಮೇಲೆ, ಕ್ರಿಸ್ತ ದೇವಾಲಯದ ಐದು ಗುಮ್ಮಟಗಳೂ ಪುರಾತನ ಘಂಟೆಗೋಪುರವೂ ಕಂಡು ಬಂದುವು.... ಈ ಗುಡ್ಡ ಗಳ ಸುತ್ತಲೂ ರೈತರ ಜೋಪಡಿಗಳು ಹರಡಿಕೊಂಡಿದ್ದುವು. ಅಲ್ಲಲ್ಲಿ ತರಕಾರಿ ತೋಟಗಳೂ ಬಾವಿಗಳೂ ಇದ್ದುವು. ವ್ಲಾಡಿಮಿರ್‌ಗೆ ಆ ಜಾಗ

ಪರಿಚಿತವಾದುದೇ ಆಗಿದ್ದಿತು. ಹಿಂದೆ, ಅದೇ ಗುಡ್ಡದ ಮೇಲೆಯೇ, ತನಗಿಂತ ಎರಡು ವರ್ಷ ಕಿರಿಯವಳಾದ ಮಾಷಾ ಟ್ರಾಯಿಕ್ಯುರೋವ್‌ಳೊಂದಿಗೆ ಆಟವಾಡುತ್ತಿದ್ದುದನ್ನು ಅವನು ಜ್ಞಾಪಿಸಿಕೊಂಡ. ಚಿಕ್ಕವಳಾಗಿದ್ದಾಗಲೂ ಆಕೆ ಎಷ್ಟು ಸ್ಫುರದ್ರೂಪಿಣಿಯಾಗಿ ಕಂಡುಬರುತ್ತಿದ್ದಳು! ಆಂತಾನ್‌ನನ್ನು ಆಕೆಯ ವಿಷಯವಾಗಿ ವಿಚಾರಿಸಬೇಕೆಂದು ಆಸೆಯಾಯಿತು. ಆದರೆ ನಾಚಿಕೆಯಾಗಿ, ಸುಮ್ಮನಾಗಿಬಿಟ್ಟ.

ಆ ಮನೆ ಸಮೀಪಿಸಿದಾಗ, ಉದ್ಯಾನದಲ್ಲಿ ಮರಗಳ ಮಧ್ಯೆ ಬಿಳಿಯ ಫ್ರಾಕಿನ ಅಂಚು ಗಾಳಿಯಲ್ಲಿ ಹಾರಾಡುತ್ತಿರುವುದು ಅವನ ಕಣ್ಣಿಗೆ ಬಿತ್ತು. ಅದೇ ದಿಕ್ಕಿನಲ್ಲಿ ಇನ್ನೆಷ್ಟು ಹೊತ್ತು ಎವೆಯಿಕ್ಕದೆ ನೋಡುತ್ತಿದ್ದನೋ ಏನೋ, ಆದರೆ ಅಷ್ಟರಲ್ಲೇ ಆಂತಾನ್, ತನ್ನ ದರ್ಪ ತೋರಿಸಲೋಸುಗ ಕುದುರೆಗಳನ್ನು ನಾಗಾಲೋಟದಿಂದ ಓಡಿಸಿ, ಸೇತುವೆಯ ಮೇಲೆ, ಆ ಗ್ರಾಮದ ಮೂಲಕ ಜೀಗ ಜೀಗ ಗಾಡಿಯನ್ನು ಹೊಡೆದುಬಿಟ್ಟ. ಆ ಗ್ರಾಮವನ್ನು ದಾಟಿದ ಮೇಲೆ, ಗಾಡಿ ಮತ್ತೊಂದು ಗುಡ್ಡವನ್ನೇರಿ ಹೊರಟಿತು. ಸದ್ಯದಲ್ಲೇ ವ್ಲಾಡಿಮಿರ್, ಬರ್ಚ್‌ಮರಗಳ ತೋಪನ್ನು ಕಂಡ. ಅದರ ಎಡಭಾಗದಲ್ಲಿ, ವಿಸ್ತಾರವಾದ ಪ್ರದೇಶದಲ್ಲಿ ಒಂದು ಚಿಕ್ಕ ಬೂದುಬಣ್ಣದ, ಕೆಂಪು ಮೇಲ್ಛಾವಣಿಯ ಮನೆಯೊಂದಿದ್ದಿತು. ತಾನು ಹುಟ್ಟಿದ್ದ ಹಳ್ಳಿ ಕಿಸ್ತೆನೆವ್‌ಕಾ ಮತ್ತು ತನ್ನ ತಂದೆಯ ನಿರಾಡಂಬರ ಕುಟೀರ, ಆತನ ಮುಂದಿದ್ದುವು. ಹತ್ತಿರ ಹೋಗುತ್ತಿದ್ದಂತೆ, ಅವನ ಹೃದಯದ ಬಡಿತವೂ ವೇಗವಾಗತೊಡಗಿತು.

ಹತ್ತು ನಿಮಿಷಗಳನಂತರ ಗಾಡಿ ಮನೆಯ ಮುಂದಿನ ಅಂಗಳದಲ್ಲಿ ಬಂದು ನಿಂತಿತು. ವ್ಲಾಡಿಮಿರ್, ಅವರ್ಣನೀಯ ಭಾವೋದ್ರೇಕದಿಂದ ಸುತ್ತಲೂ ನೋಡಿದ. ಅವನು ಹುಟ್ಟೂರನ್ನು ಬಿಟ್ಟು ಹನ್ನೆರಡು ವರ್ಷಗಳಾಗಿದ್ದುವು. ಹುಡುಗನಾಗಿದ್ದಾಗ ಅವನು ಬೇಲಿಗಳ ಮಧ್ಯೆ ನೆಟ್ಟಿದ್ದ ಎಳೆಯ ಬರ್ಚ್‌ಮರದ ಸಸಿಗಳು, ಈಗ ಮರಗಳಾಗಿ ಕೊಂಬೆಗಳನ್ನು ವಿಸ್ತಾರವಾಗಿ ಹರಡಿಕೊಂಡು, ಎತ್ತರವಾಗಿ ಬೆಳೆದು ನಿಂತಿದ್ದುವು. ಹಿಂದೆ ಮನೆಯ ಮುಂಭಾಗ, ತ್ರಿಕೋಣಾಕೃತಿಯ ಹೂದೋಟದಿಂದ ಅಲಂಕೃತವಾಗಿದ್ದಿತು. ಅದರ ಮಧ್ಯೆ ಉದ್ದಗಲಕ್ಕೂ ಸುಂದರವಾದ ಕಾಲುದಾರಿಗಳಿದ್ದುವು. ಈಗ ಆ ಜಾಗದಲ್ಲಿ ಕಳೆಗಳಿಂದ ತುಂಬಿದ ವಿಕೃತ ಹುಲ್ಲುಗಾವಲು ಬೆಳೆದುಕೊಂಡಿ

ದ್ದಿತು. ಅದರಲ್ಲಿ ಕುಂಟು ಕುದುರೆಯೊಂದು ಹುಲ್ಲು ಮೇಯುತ್ತಾ ಅಡ್ಡಾಡುತ್ತಿದ್ದಿತು. ಗಾಡಿ ಹೋಗುತ್ತಿದ್ದ ಹಾಗೆ, ನಾಯಿಗಳು ಬಗುಳತೊಡಗಿದುವು. ಆದರೆ, ಆಂತಾನ್‌ನನ್ನು ಕಂಡಕೂಡಲೇ ಬಾಲವಾಡಿಸುತ್ತಾ ಸುಮ್ಮನಾದುವು. ಸೈನಿಕರೆಲ್ಲ ಮನೆಯಿಂದ ಹೊರಬಂದು ತಮ್ಮ ಚಿಕ್ಕ ಯಜಮಾನರನ್ನು ಕಂಡು ಹರ್ಷೋದ್ಗಾರ ಮಾಡುತ್ತ ಗಾಡಿಯ ಸುತ್ತ ನೆರೆದರು. ವ್ಲಾಡಿಮಿರ್, ಆ ಉತ್ಸುಕ ಸೇವಕರ ಗುಂಪಿನ ಮಧ್ಯೆ ಕಷ್ಟಪಟ್ಟು ದಾರಿ ಬಿಡಿಸಿಕೊಂಡು, ಉದ್ವೇಗದಿಂದ ಕಂಪಿಸುತ್ತಾ, ಮೆಟ್ಟಿಲುಗಳನ್ನು ಹತ್ತಿ ಒಳಕ್ಕೆ ಓಡಿಹೋದ. ಮುಂದಿನ ಬಾಗಿಲಿನ ಬಳಿಯೇ ಅವನನ್ನು ಹಿಂದೆ ಪೋಷಿಸುತ್ತಿದ್ದ ಯೆಗೊರೋವ್ನಾ ಸಿಕ್ಕಳು. ಕಣ್ಣೀರು ಸುರಿಸುತ್ತಾ, ಆಕೆ ಅವನನ್ನು ಅಪ್ಪಿಕೊಂಡಳು.

"ಶಾಂತಳಾಗು, ನನ್ನವ್ವ, ಶಾಂತಳಾಗು. ಎಲ್ಲಿ, ಎಲ್ಲಿ ನಮ್ಮ ತಂದೆ? ಹೇಗಿದ್ದಾರೆ ಈಗ? ತುಂಬ ಬದಲಾಗಿ ಬಿಟ್ಟಿದ್ದಾರೆಯೆ?" ಎಂದು ಮೇಲಿಂದ ಮೇಲೆ ಕೇಳುತ್ತಾ ವ್ಲಾಡಿಮಿರ್ ಪ್ರೇಮಮಯಿಯಾದ ಆಕೆಯನ್ನು ತನ್ನ ಎದೆಗೊತ್ತಿಕೊಂಡ.

ಆ ಹೊತ್ತಿಗೆ, ನಿಲುವಂಗಿ ತೊಟ್ಟು, ರಾತ್ರಿ ಟೋಪಿಯನ್ನು ಧರಿಸಿದ್ದ, ಎತ್ತರವಾದ ವೃದ್ಧ ಮನುಷ್ಯನೊಬ್ಬ ಆ ಕೋಣೆಯೊಳಕ್ಕೆ ಬಂದ. ಆತನ ಮುಖ ವಿಲಕ್ಷಣವಾಗಿ ನಿಸ್ತೇಜವಾಗಿತ್ತು.

"ಅಂತೂ ಬಂದೆಯಾ ವೊಲೋದ್ಯ!" ಎನ್ನುತ್ತಾ ಆ ವೃದ್ಧ ಗದ್ಗದ ಕಂಠದಲ್ಲಿ ಹೇಳಿದ. ವ್ಲಾಡಿಮಿರ್, ತಂದೆಯನ್ನು ಗುರುತಿಸಿ, ಆತನನ್ನು ಬಿಗಿಯಾಗಿ ಅಪ್ಪಿಕೊಂಡ.

ಕಾಹಿಲೆಯಿಂದ ನರಳುತ್ತಿದ್ದ ವೃದ್ಧ ತಂದೆ ಈ ಸಂತೋಷದ ಹೊರೆಯನ್ನು ಹೊರಲಾರದಾದ. ಮಗನ ತೋಳತೆಕ್ಕೆಯಲ್ಲಿದ್ದುದರಿಂದ ಸರಿಹೋಯಿತು. ಇಲ್ಲವಿದ್ದಲ್ಲಿ, ನೆಲದ ಮೇಲೆ ಧೊಪ್ಪನೆ ಉರುಳಿ ಬೀಳುತ್ತಿದ್ದ.

"ಅಯ್ಯೋ, ನೀವೇಕೆ ಹಾಸಿಗೆ ಬಿಟ್ಟು ಎದ್ದು ಬಂದಿರಿ? ನಿಂತುಕೊಳ್ಳಲಿಕ್ಕೇ ತ್ರಾಣವಿಲ್ಲ, ಎಲ್ಲರ ಹಾಗೆ ಓಡಾಡಬೇಕೆಂದು ಬಯಸುತ್ತೀರಿ," ಎಂದಳು ಯೆಗೊರೋವ್ನಾ.

ಆತನನ್ನು ಶಯ್ಯಾಗೃಹಕ್ಕೆ ಒಯ್ಯಲಾಯಿತು. ಮಗನೊಡನೆ ಮಾತನಾಡಲು ಮುದುಕ ಯತ್ನಿಸಿದ. ಆದರೆ ಬುದ್ಧಿ ಸ್ತಿಮಿತದಲ್ಲಿರಲಿಲ್ಲ. ಒಂದ

ಕ್ಕೊಂದು ಸಂಬಂಧವಿರದ ಶಬ್ದಗಳನ್ನು ಮಾತ್ರ ಉಚ್ಚರಿಸಲು ಸಾಧ್ಯವಾಯಿತು. ಆದ್ದರಿಂದ ಮಾತನಾಡುವ ಹಂಬಲವನ್ನು ತೊರೆದು, ನಿದ್ರಾಸಕ್ತನಾದ. ತಂದೆ ಅಂತಹ ದುರವಸ್ಥೆಯಲ್ಲಿದ್ದುದನ್ನು ಕಂಡ ವ್ಲಾಡಿಮಿರ್‌ನ ಮನಸ್ಸು ತಲ್ಲಣಿಸಿತು. ಎಲ್ಲರನ್ನೂ ಕಳುಹಿಸಿಬಿಟ್ಟು, ತಂದೆಯ ಕೋಣೆಯನ್ನೇ ತನ್ನ ಮಲಗುವ ಮನೆಯನ್ನಾಗಿ ಮಾಡಿಕೊಂಡು, ಶುಶ್ರೂಷೆಗೆ ನಿಂತ. ಇತ್ತ ಸೇವಕರು ಗ್ರಿಷಾನನ್ನು ತಮ್ಮ ಮನೆಗಳಿಗೆ ಕರೆದುಕೊಂಡು ಹೋಗಿ, ಆ ಹಳ್ಳಿಯ ವಾಡಿಕೆಯಂತೆ, ಹಾರ್ದಿಕ ಸ್ವಾಗತವಿತ್ತರು. ಕೆಲವರು ಶುಭಾಶಯಗಳನ್ನು ಹೇಳಿದರು. ಇನ್ನು ಕೆಲವರು ನಗರ ಜೀವನದ ಬಗ್ಗೆ ನಾನಾ ರೀತಿಯ ಪ್ರಶ್ನೆಗಳನ್ನು ಹಾಕಿ ಗ್ರಿಷಾನನ್ನು ಗೋಳುಹುಯ್ದುಕೊಂಡರು.

## ೪

## ‘ ಭೋಗತಲ್ಪದ ಮೇಲಿತ್ತೊಂದು ಶವದಾನಿ.... ’ *

ಕೆಲವು ದಿನಗಳಾದ ಮೇಲೆ ವ್ಲಾಡಿಮಿರ್, ಆಸ್ತಿಯ ವ್ಯವಹಾರದ ಕಡೆಗೆ ಗಮನವೀಯಲು ನಿರ್ಧರಿಸಿದ. ತಂದೆ, ಯಾವ ವಿಧವಾದ ಮಾಹಿತಿಯನ್ನೂ ಒದಗಿಸುವ ಸ್ಥಿತಿಯಲ್ಲಿರಲಿಲ್ಲ. ವಕೀಲರನ್ನು ಗೊತ್ತುಮಾಡಿರಲಿಲ್ಲ. ತಂದೆಯ ಕಪಾಟಿನಲ್ಲಿ ಕಾಗದ ಪತ್ರಗಳಿಗಾಗಿ ತಡಕಾಡಿದ. ಅಲ್ಲಿ, ನ್ಯಾಯಾಧೀಶನಿಂದ ದುಬ್ರೋವ್‌ಸ್ಕಿಗೆ ಮೊದಲು ಬಂದ ಪತ್ರ ಮತ್ತು ಆತ ಇತ್ತ ಪ್ರತ್ಯುತ್ತರದ ಕರಡು ಪ್ರತಿ ಇವೆರಡು ಮಾತ್ರ ದೊರೆತುವು. ಅವುಗಳ ಸಹಾಯದಿಂದ, ವಿವಾದ ಯಾವ ಮಟ್ಟದಲ್ಲಿ ನಿಂತಿದೆಯೆಂದು ಅಂದಾಜು ಮಾಡಲೂ ಸಹ ಶಕ್ಯವಾಗಲಿಲ್ಲ. ನ್ಯಾಯ ತನ್ನ ಕಡೆಗೇ ಇದೆಯೆಂಬ ಸಂಪೂರ್ಣ ಭರವಸೆ ಹೊಂದಿ, ಹೊಸ ಘಟನೆಗಳು ಆಗುವುದನ್ನೇ ಗಮನಿಸುತ್ತಾ ಕಾದು ಕುಳಿತ.

ಅದೇ ಹೊತ್ತಿಗೆ, ಆಂದ್ರಿ ದುಬ್ರೋವ್‌ಸ್ಕಿಯ ಆರೋಗ್ಯ ಹೆಚ್ಚು ಹೆಚ್ಚು ಕೆಡುತ್ತಾ ಹೋಯಿತು. ಆತ ಎಲ್ಲ ಹಣ್ಣು ಮುದುಕರಂತೆ ಅರುಳು ಮರುಳಾಗಿ ವರ್ತಿಸತೊಡಗಿದ. ತಂದೆಯ ಅವಸಾನ ಕಾಲ ಸಮೀಪಿಸುತ್ತಿದೆ

---

* ಈ ಸಾಲು, ಹದಿನೆಂಟನೆಯ ಶತಮಾನದ ರಷ್ಯನ್ ಕವಿ ಡೆರ್ಜಾವಿನ್‌ರ ‘ ರಾಜಪುತ್ರ ಮೆಷರ್‌ಸ್ಕಿಯ ಸಾವಿನ ಬಗ್ಗೆ’ ಬರೆದ ಶೋಕಗೀತೆಯಲ್ಲಿ ಕಂಡು ಬರುತ್ತದೆ.

ಯೆಂದರಿತ ವ್ಲಾಡಿಮಿರ್, ಅವರ ಪಕ್ಕ ಬಿಟ್ಟು ಕದಲದೆ ಸೇವೆ ಮಾಡಿದ.

ಅಷ್ಟು ಹೊತ್ತಿಗೆ, ಅಪೀಲು ಹೋಗಲು ಕೊಟ್ಟಿದ್ದ ಕಾಲಾವಕಾಶ ತೀರಿತು. ಅಪೀಲು ಮಾತ್ರ ಹಾಕಿಯೇ ಇರಲಿಲ್ಲ. ದುಬ್ರೋವ್‌ಸ್ಕಿಯ ಮನೆ–ಮಾರು ಸಕಲವೂ ಈಗ ಕಿರಿಲ್ಲಾ ಪೆಟ್ರೋವಿಷ್‌ನ ವಶವಾದುವು. ನ್ಯಾಯಾಧೀಶ ಶಬಾಷ್ಕಿನ್ ಮಾರನೆಯ ದಿನವೇ ಪೆಟ್ರೋವಿಷ್‌ನ ಮನೆಗೆ ಬಂದು, ಅಡ್ಡಬಿದ್ದು ನಮಸ್ಕರಿಸುತ್ತಾ, ಜಯಶಾಲಿಯಾದುದಕ್ಕಾಗಿ ಆತನನ್ನು ಅಭಿನಂದಿಸಿದ. ಹಾಗೆಯೇ, ದುಬ್ರೋವ್‌ಸ್ಕಿಯ ಆಸ್ತಿ–ಪಾಸ್ತಿಗಳನ್ನು ವಶಪಡಿಸಿಕೊಳ್ಳಲು ದಿನ ಗೊತ್ತುಮಾಡಬೇಕೆಂದೂ, ಅವರೇ ಸ್ವತಃ ಹೋಗುವರೋ ಅಥವಾ ಕೋರ್ಟಿನ ಅಧಿಕಾರಿಗಳ ಮೂಲಕ ಎಲ್ಲವನ್ನೂ ಏರ್ಪಡಿಸಬೇಕೋ ತಿಳಿಸಬೇಕೆಂದೂ ಹಲ್ಲುಕಿರಿಯುತ್ತಾ ಪ್ರಾರ್ಥಿಸಿದ. ಕಿರಿಲ್ಲಾ ಪೆಟ್ರೋವಿಷ್‌ಗೆ ಇದನ್ನು ಕಂಡು ರೇಗಿಹೋಯಿತು. ಅವನು ಸ್ವಲ್ಪ ದುರಾಸೆಯವನೆಂಬುದೇನೋ ನಿಜ. ಆದರೆ ದುಬ್ರೋವ್‌ಸ್ಕಿಯ ವಿರುದ್ಧ ಸೇಡು ತೀರಿಸಿಕೊಳ್ಳುವ ಕಾರ್ಯದಲ್ಲಿ ಮಿತಿಮೀರಿ ಹೋದೆನೆಂದು ಆತನ ಅಂತರಾತ್ಮ ಚುಚ್ಚಿ–ಚುಚ್ಚಿ ಹೇಳುತ್ತಿತ್ತು. ಹಿಂದೆ ತನ್ನ ಆತ್ಮೀಯ ಗೆಳೆಯನಾಗಿದ್ದವನ ಮೇಲೆಯೇ ಇಂದು ವೈರ ಸಾಧಿಸಿ ಅವನನ್ನು ಎಂತಹ ದುರವಸ್ಥೆಗೆ ಈಡುಮಾಡಿರುವೆನೆಂಬ ವಿಷಯ ಈಗ ಅವನಿಗೆ ಮನದಟ್ಟಾಯಿತು. ತನಗೆ ದೊರೆತ ವಿಜಯ, ಅವನ ಹೃದಯವನ್ನು ಸ್ವಲವೂ ಹಿಗ್ಗಿಸಲಿಲ್ಲ. ಶಬಾಷ್ಕಿನ್‌ನ ಮಾತುಗಳನ್ನು ಕೇಳಿದ್ದೇ ತಡ, ಅವನತ್ತ ಕ್ರೂರದೃಷ್ಟಿಯನ್ನು ಬೀರಿ, ಏನಾದರೂ ನೆಪದ ಮೇಲೆ ಅವನನ್ನು ಚೆನ್ನಾಗಿ ನಿಂದಿಸಬೇಕೆಂದು ಮನಸ್ಸಾಯಿತು. ಆದರೆ, ತಕ್ಷಣಕ್ಕೆ ಕಾರಣಗಳಾವುವೂ ಕಾಣದೆ, ಸಿಡುಕಿನಿಂದ, "ಹೊರಟು ಹೋಗು. ನನಗೆ ಯೋಚಿಸಲು ಬೇರೆ ಬೇಕಾದಷ್ಟು ವಿಷಯಗಳಿವೆ," ಎಂದು ಆಕ್ರೋಶದಿಂದ ನುಡಿದ.

ಶ್ರೀಮಂತರು ಏಕೋ ಸ್ವಲ್ಪ ರೋಸಿರುವರೆಂದು ತಿಳಿದ ಶಬಾಷ್ಕಿನ್, ವಿನಯದಿಂದ ತಲೆಬಾಗಿ ವಂದಿಸುತ್ತಾ ಹೊರಟು ಹೋದ. ಕಿರಿಲ್ಲಾ ಪೆಟ್ರೋವಿಷ್, ತಾನೊಬ್ಬನೇ ಉಳಿದ ಮೇಲೆ, "ಮೊಳಗಿರಿ, ವಿಜಯ ದುಂದುಭಿ!"* ಎಂದು ಸಿಳ್ಳೆಹಾಕಿ ಹಾಡುತ್ತಾ ಕೋಣೆಯಲ್ಲಿ ಅತ್ತಿಂದಿತ್ತ

* ರಾಷ್ಟ್ರೀಯ ಸಮಾರಂಭಗಳಲ್ಲಿ ಒಟ್ಟಾಗಿ ಹಾಡುತ್ತಿದ್ದ ಗೀತೆಯ ಮೊದಲ ಚರಣ, ಇದು.

ತುಳಿದಾಡತೊಡಗಿದ. ಮನಸ್ಸಿನ ಒಳಗೆ ವಿಚಾರ ತುಮುಲ ನಡೆದಾಗಲೆಲ್ಲ ಸಾಧಾರಣವಾಗಿ ಪೆಟ್ರೋವಿಚ್ ಹೀಗೆ ವರ್ತಿಸುತ್ತಿದ್ದ.

ಕೊನೆಗೆ ಒಬ್ಬನೇ ಕುಳಿತುಕೊಳ್ಳುವಂತಹ ತನ್ನ ಜೂಜಿನ ಗಾಡಿಯನ್ನು ತರುವಂತೆ ಆಜ್ಞಾಪಿಸಿ ಬೆಚ್ಚನೆಯ ಅಂಗಿ ತೊಟ್ಟು (ಅದು ಮಾಗಿಯ ಕೊನೆಯ ದಿನಗಳಾಗಿದ್ದುವು) ಒಬ್ಬನೇ ಮನೆಬಿಟ್ಟು ಹೊರಟ.

ಆಂದ್ರಿ ದುಬ್ರೋವ್‌ಸ್ಕಿಯ ಪುಟ್ಟ ಮನೆ ಕಣ್ಣಿಗೆ ಬಿದ್ದ ಕೂಡಲೇ, ಅವನ ಹೃದಯದಲ್ಲಿ ನಾನಾ ರೀತಿಯ ರಾಗ ಭಾವಗಳ ಹೊಯ್ದಾಟ ಪ್ರಾರಂಭ ವಾಯಿತು. ಮೊದ-ಮೊದಲು, ಅಧಿಕಾರ ಲಾಲಸೆ, ಸೇಡು ತೀರಿಸಿಕೊಂಡ ತೃಪ್ತಿ—ಇವು ಅವನ ಉದಾತ್ತ ವಿಚಾರ, ಸ್ವಭಾವಗಳನ್ನು ಅದುಮಿ ಹಿಡಿ ದುವು. ಆದರೆ ಕೂಡಲೇ ಅವನ ಉಚ್ಚ ಭಾವನೆಗಳದೇ ಮೇಲುಗೈ ಆಯಿತು. ಅಷ್ಟೊಂದು ವರ್ಷಗಳಿಂದ ನೆರೆಯವನಾಗಿದ್ದ ದುಬ್ರೋವ್‌ಸ್ಕಿ ಯೊಂದಿಗೆ ಪುನಃ ರಾಜಿಮಾಡಿಕೊಳ್ಳುವ ಮನಸ್ಸಾಯಿತು. ಆಸ್ತಿಯನ್ನೆಲ್ಲ ಹಿಂದಿರುಗಿಸಿ, ಮನಸ್ತಾಪದ ಯಾವೊಂದು ಚಿಹ್ನೆಯೂ ಇಲ್ಲದಂತೆ ಮಾಡಬೇ ಕೆಂದು ನಿರ್ಧರಿಸಿದ. ಈಗ ಹೃದಯ ಹಗುರುವಾಯಿತು. ಕುದುರೆಯನ್ನು ಜೋರಾಗಿ ಓಡಿಸಿ, ದುಬ್ರೋವ್‌ಸ್ಕಿಯ ಮನೆಯ ಅಂಗಳಕ್ಕೇ ನೇರವಾಗಿ ಹೋದ.

ಆ ಹೊತ್ತಿಗೆ ಸರಿಯಾಗಿ, ಕಾಹಿಲೆಯಿಂದ ನರಳುತ್ತಿದ್ದ ದುಬ್ರೋ ವ್‌ಸ್ಕಿ ತನ್ನ ಮಲಗುವ ಮನೆಯ ಕಿಟಕಿಯ ಬಳಿಯೇ ಕುಳಿತಿದ್ದ. ಕಿರಿಲ್ಲಾ ಪೆಟ್ರೋವಿಚ್ ತನ್ನ ಮನೆಯತ್ತ ಬರುತ್ತಿದ್ದುದನ್ನು ಕಂಡು ಆತನ ಮುಖ ದಲ್ಲಿ ಭಯ-ಭೀತಿಗಳು ಮೂಡಿದುವು; ಬಿಳಿಚಿಕೊಂಡಿದ್ದ ಆತನ ಕಪೋಲ ಗಳು ಕೆಂಪಾದುವು. ಕಣ್ಣುಗಳಲ್ಲಿ ಅಪೂರ್ವ ಕಾಂತಿ ಮಿಂಚಿತು. ನಾಲಗೆ ಸೇದಿದಂತಾಗಿ ಅರ್ಥರಹಿತ ಶಬ್ದಗಳು ಹೊರಬಿದ್ದುವು. ಲೆಕ್ಕ-ಪತ್ರಗಳನ್ನು ಪರಿಶೀಲಿಸುತ್ತಿದ್ದ ವ್ಲಾಡಿಮಿರ್ ತಂದೆಯತ್ತ ನೋಡಿದ. ಅವನಲ್ಲುಂಟಾದ ಆಕಸ್ಮಿಕ ಬದಲಾವಣೆಗಳನ್ನು ಕಂಡು ಅವನಿಗೆ ದಂಗು ಬಡಿದಂತಾಯಿತು. ಕಾಹಿಲೆಯಾತ ಕಿಟಕಿಯಿಂದ ಹೊರಕ್ಕೆ ಬೆರಳು ಮಾಡಿ ತೋರಿಸುತ್ತಾ, ಮುಖದಲ್ಲಿ ಭಯ-ಕ್ರೋಧಗಳನ್ನು ವ್ಯಕ್ತಪಡಿಸುತ್ತಿದ್ದ. ಆಮೇಲೆ, ತೊಡಿಸಿದ್ದ ನಿಲುವಂಗಿಯನ್ನು ಸರಿಪಡಿಸಿಕೊಳ್ಳುತ್ತಾ, ಆತ ಹೊರಗೆ ಹೊರಡುವವನಂತೆ ಆರಾಮಕುರ್ಚಿಯಿಂದ ಅರ್ಧಮಾತ್ರ ಎದ್ದ....ತಕ್ಷಣವೇ

ನೆಲದ ಮೇಲೆ ಮೂಟೆಯಂತೆ ಕುಸಿದು ಬಿದ್ದ. ಮಗನು ಕೂಡಲೇ ತಂದೆಯ ಬಳಿಗೆ ಓಡಿಹೋಗಿ, ಆತನನ್ನು ಹಿಡಿದೆತ್ತಿದ. ಪ್ರಜ್ಞೆ ತಪ್ಪಿಹೋಗಿತ್ತು. ಉಸಿರಾಡುತ್ತಿದೆಯೇ—ಇಲ್ಲವೇ ಎಂದು ಹೇಳುವುದೇ ಕಷ್ಟವಾಗಿತ್ತು. ಹೃದಯಸ್ತಂಭನವಾಗಿ, ಹೃದಯಕ್ರಿಯೆ ನಿಂತಂತಿತ್ತು.

"ಬೇಗ, ಬೇಗ! ಯಾರಾದರೂ ನಗರಕ್ಕೆ ಹೋಗಿ ವೈದ್ಯರನ್ನು ಕರೆ ತನ್ನಿ!" ಎಂದು ವ್ಲಾಡಿಮಿರ್ ಕೂಗಿ ಕೊಂಡ.

ಅಷ್ಟು ಹೊತ್ತಿಗೆ ಸೇವಕನೊಬ್ಬ ಒಳಬಂದು, "ಕಿರಿಲ್ಲಾ ಪೆಟ್ರೋವಿಚ್ ತಮ್ಮನ್ನು ಕಾಣಲಿಚ್ಛಿಸುತ್ತಾರೆ" ಎಂದು ಬಿನ್ನೈಸಿದ.

ವ್ಲಾಡಿಮಿರ್ ಅವನತ್ತ ಕೆಂಡದಂತಹ ದೃಷ್ಟಿ ಬೀರುತ್ತಾ, "ಆ ಕಿರಿಲ್ಲಾ ಪೆಟ್ರೋವಿಚ್‌ಗೆ ಆದಷ್ಟು ಜಾಗ್ರತೆ ಇಲ್ಲಿಂದ ತೊಲಗಿಹೋಗುವುದಕ್ಕೆ ಹೇಳು. ಆಳುಗಳಿಗೆ ದಬ್ಬುವಂತೆ ಆಜ್ಞೆ ಕೊಡುವ ಮುನ್ನವೇ ಹೊರಟು ಹೋಗಲಿ! ನಡಿ ಆಚೆ!" ಎಂದು ಚೀರುವ ಧ್ವನಿಯಲ್ಲಿ ಹೇಳಿದ.

ಒಡೆಯನ ಆಜ್ಞೆಯನ್ನು ಪಾಲಿಸಲು ಸೇವಕ ಓಡಿಹೋದ. ಇದನ್ನು ನೋಡಿ ಯೆಗೊರೋವ್ನಾ ಭೀತಳಾಗಿ, ವ್ಲಾಡಿಮಿರ್‌ನನ್ನು ತಬ್ಬಿಕೊಂಡು, "ಅಯ್ಯೋ, ಹೀಗೇಕೆ ಮಾಡಿದಿರಿ, ನನ್ನೊಡೆಯ! ಇದು ಆತ್ಮನಾಶದ ಹಾದಿ. ಕಿರಿಲ್ಲಾ ಪೆಟ್ರೋವಿಚ್ ನಮ್ಮನ್ನೆಲ್ಲಾ ಸೇಡಿನ ಜ್ವಾಲೆಗೆ ಆಹುತಿ ತೆಗೆದು ಕೊಳ್ಳದೆ ಬಿಡುವುದಿಲ್ಲ" ಎಂದು ಒರಲಿದಳು.

"ಸುಮ್ಮನಿರಮ್ಮ ನೀನು. ಸ್ವಲ್ಪ ಸಮಾಧಾನಮಾಡಿಕೊ ಹೋಗು. ನಗರಕ್ಕೆ ಹೋಗಿ ವೈದ್ಯರನ್ನು ಕರೆತರುವಂತೆ ಅಂತಾನ್‌ಗೆ ತಿಳಿಸು" ಎಂದು ವ್ಲಾಡಿಮಿರ್ ಗದರಿಸಿಕೊಂಡು ನುಡಿದ.

ಯೆಗೊರೋವ್ನಾ ಹೊರಬಂದು ಸೇವಕರಿಗಾಗಿ ಹುಡುಕಾಡಿದಳು. ಎಲ್ಲರೂ ಪೆಟ್ರೋವಿಚ್‌ನನ್ನು ನೋಡಲು ಅಂಗಳಕ್ಕೆ ಹೊರಟು ಹೋಗಿದ್ದರು. ಅಲ್ಲಿಗೆ ಹೋಗಿ, ಜವಾನ ವ್ಲಾಡಿಮಿರ್‌ನ ಆಜ್ಞೆಯನ್ನು ಪೆಟ್ರೋವಿಚ್‌ಗೆ ಹೇಳುತ್ತಿದ್ದುದನ್ನು ಕೇಳಿದಳು. ಕಿರಿಲ್ಲಾ ಪೆಟ್ರೋವಿಚ್ ಗಾಡಿಯಲ್ಲಿ ಕುಳಿತಲ್ಲಿಂದಲೇ ಜವಾನ ಹೇಳುವುದನ್ನು ಕೇಳಿದ. ಆತನ ಮುಖ ಕಗ್ಗತ್ತಲೆಯ ರಾತ್ರಿಯಂತೆ ಕಪ್ಪಿಟ್ಟಿತು. ತುಟಿಗಳ ಮೇಲೆ ಲೇವಡಿ ಮಾಡುವ ಹುಸಿನಗೆ ಮಿಂಚುತ್ತಿತ್ತು. ಜವಾನನತ್ತ ಬೆದರಿಕೆಯ ದೃಷ್ಟಿ ಬೀರಿ, ಗಾಡಿಯನ್ನು ಹೊಡೆದುಕೊಂಡು ಹೊರಟುಹೋದ. ಹೋಗುತ್ತಾ, ದುಬ್ರೋವ್‌ಸ್ಕಿ

ಕುಳಿತು ನೋಡುತ್ತಿದ್ದ ಕಿಟಕಿಯತ್ತ ತಿರುಗಿನೋಡಿದ. ಇದೇ ಕೆಲವು ನಿಮಿಷಗಳ ಕೆಳಗೆ ಅಲ್ಲಿ ಕುಳಿತಿದ್ದ ದುಬ್ರೋವ್‌ಸ್ಕಿ, ಈಗ ಅಲ್ಲಿರಲಿಲ್ಲ. ದಾದಿ, ಯೆಗೊರೋವ್ನಾ, ಯಜಮಾನನ ಆಜ್ಞೆಯನ್ನು ಆಂತಾನ್‌ಗೆ ತಿಳಿಸುವುದನ್ನು ಸಂಪೂರ್ಣವಾಗಿ ಮರೆತು, ದಿಗ್ಭ್ರಾಂತಳಾಗಿ, ಮಹಾದ್ವಾರದ ಬಳಿಯೇ ನಿಂತುಬಿಟ್ಟಳು.

ಸೇವಕರೆಲ್ಲಾ ಪೆಟ್ರೋವಿಚ್‌ಗಾದ ಈ ಮುಖಭಂಗದ ಘಟನೆಯನ್ನು ಕುರಿತು ಚರ್ಚಿಸುತ್ತಿದ್ದರು. ಆಗ ಅನಿರೀಕ್ಷಿತವಾಗಿ, ವ್ಲಾಡಿಮಿರ್ ಅಲ್ಲಿಗೇ ಬಂದುಬಿಟ್ಟ.

"ವೈದ್ಯರ ಆವಶ್ಯಕತೆ ಏನಿಲ್ಲ. ನಮ್ಮ ತಂದೆ ತೀರಿ ಹೋದರು," ಎಂದು ಭಾರವಾದ ಸ್ವರದಲ್ಲಿ ಹೇಳಿದ.

ಕೂಡಲೇ ಮನೆಯಲ್ಲೆಲ್ಲಾ ಗೊಂದಲ, ಗೋಳಾಟ ಕೇಳಿ ಬಂದುವು. ಸೇವಕರೆಲ್ಲಾ ತಮ್ಮ ಹಿರಿಯ ಒಡೆಯನ ಕೋಣೆಗೆ ನುಗ್ಗಿದರು. ವ್ಲಾಡಿಮಿರ್ ಏರ್ಪಡಿಸಿದ್ದ ಸುಖಾಸನವೊಂದರಲ್ಲಿ ಆತ ದೀರ್ಘ ನಿದ್ರೆಯಲ್ಲಿ ಮಲಗಿದ್ದ. ಆತನ ಬಲಗೈ ಕೆಳಕ್ಕೆ ಸರಿದು ನೆಲಕ್ಕೆ ತಗಲುವಂತೆ ಜೋತು ಬಿದ್ದಿತ್ತು. ತಲೆ, ಎದೆಯ ಮೇಲೆ ಕುಸಿದುಬಿದ್ದಿತ್ತು. ದೇಹದಲ್ಲಿ ಸ್ವಲ್ಪ ಶಾಖವಿದ್ದರೂ, ಪ್ರಾಣವಿರುವ ಲಕ್ಷಣಗಳಾವುವೂ ಕಾಣಬರಲಿಲ್ಲ. ಸಾವಿನ ಸೆಳೆತದಿಂದಾಗಿ ದೇಹ ವಿಕಾರರೂಪ ತಾಳಿತ್ತು. ಯೆಗೊರೋವ್ನಾ ಗಟ್ಟಿಯಾಗಿ ರೋದಿಸತೊಡಗಿದಳು. ಇತರ ಹೆಂಗಸರೂ ಅವಳನ್ನನುಸರಿಸಿದರು. ಮೃತದೇಹವನ್ನು ಸೇವಕರ ವಶಕ್ಕೆ ಒಪ್ಪಿಸಲಾಯಿತು. ಅವರು ಅದರ ಸುತ್ತ ನೆರೆದು, ಅದನ್ನು ಚೆನ್ನಾಗಿ ತೊಳೆದರು. ಅನಂತರ, ಆಂದ್ರಿ ದುಬ್ರೋವ್‌ಸ್ಕಿ ಬಹು ಹಿಂದೆ—೧೭೯೭ ರಷ್ಟು ಹಿಂದೆ—ಹೊಲಿಸಿಕೊಂಡಿದ್ದ ಸಮವಸ್ತ್ರಗಳನ್ನು ತಂದು ಆ ಶವಕ್ಕೆ ತೊಡಿಸಿದರು. ಆಮೇಲೆ, ಹಿಂದೆ ತಾವು ತಮ್ಮ ಯಜಮಾನನಿಗೆ ಉಣಬಡಿಸುತ್ತಿದ್ದ ಮೇಜಿನ ಮೇಲೆಯೇ, ಇಂದು ಆತನ ಮೃತ ದೇಹವನ್ನು ಇರಿಸಿದರು. ಊಟದ ಮೇಜು ಹೆಣದ ಹಾಸಿಗೆಯಾಯಿತು.

ಮೂರು ದಿನಗಳನಂತರ ಶವಸಂಸ್ಕಾರ ವಿಧ್ಯುಕ್ತವಾಗಿ ನೆರವೇರಿತು. ಆ ನತದೃಷ್ಟನ ದೇಹವನ್ನು ಬಿಳಿಯ ವಸ್ತ್ರದಲ್ಲಿ ಮುಚ್ಚಿ ಮೇಜಿನ ಮೇಲಿರಿಸಿದ್ದರು. ಸುತ್ತಲೂ ಮೇಣದ ಬತ್ತಿಯನ್ನು ಹಚ್ಚಿಟ್ಟದ್ದರು. ಊಟದ ಮನೆಯ ತುಂಬ ಸೇವಕರೇ ತುಂಬಿದ್ದರು. ಅವರು ತಮ್ಮ ಒಡೆಯನ ಸ್ಮಶಾನ ಯಾತ್ರೆಯನ್ನು ವೀಕ್ಷಿಸಲು ಕಾದು ನಿಂತಿದ್ದರು. ವ್ಲಾಡಿಮಿರ್ ಮತ್ತು ಮೂವರು ಸೇವಕರು ಶವದಾನಿಯನ್ನು ಎತ್ತಿಕೊಂಡು ಹೊರಟರು. ಕ್ರೈಸ್ತಗುರು ಎಲ್ಲರಿಗಿಂತ ಮುಂದೆ ಹೊರಟ. ಆತನೊಂದಿಗೆ ಚರ್ಚಿಗೆ ಸಂಬಂಧಿಸಿದ ಪಾದ್ರಿಗಳು, ಪ್ರೇತಯಾತ್ರೆಗಳಲ್ಲಿ ಹೇಳುವ ಶ್ಲೋಕಗಳನ್ನು ಹಾಡುತ್ತಾ, ನಡೆದರು. ಕಿಸ್ತೆನೆವ್‌ಕಾದ ಮಾಲೀಕ ಆಂದ್ರಿ ದುಬ್ರೋವ್‌ಸ್ಕಿ ಕಟ್ಟಕಡೆಯದಾಗಿ ಹೊಸಲುದಾಟಿ ಹೊರಟೇಬಿಟ್ಟ. ಶವದಾನಿಯನ್ನು ಹೊತ್ತುಕೊಂಡು ಬರ್ಚ್‌ಮರಗಳ ತೋಪಿನ ಮೂಲಕ ಮೆರವಣಿಗೆ ಹೊರಟರು. ತೋಪಿನಿಂದಾಚೆಗೇ ಚರ್ಚ್ ಇದ್ದುದು. ಆಕಾಶ ತಿಳಿಯಾಗಿದ್ದಿತು. ಸ್ವಲ್ಪ ಚಳಿಯಾಗುತ್ತಿತ್ತು. ಎಲ್ಲೆಲ್ಲೂ ಮರಗಳಿಂದ ಎಲೆಗಳು ಉದುರುತ್ತಿದ್ದುವು.

ತೋಪನ್ನು ದಾಟಿದ ಬಳಿಕ, ಮರದ ಹಲಗೆಗಳಿಂದ ನಿರ್ಮಿತವಾದ ಹಳ್ಳಿಯ ಚಿಕ್ಕ ಚರ್ಚು ಕಾಣಬಂತು. ಅದರ ಸುತ್ತ ನಿಂಬೆ ಮರಗಳಿಂದ ತುಂಬಿದ ಪ್ರಾಚೀನ ಸ್ಮಶಾನ ಭೂಮಿ ಇದ್ದಿತು. ಅಲ್ಲಿಯೇ, ವ್ಲಾಡಿಮಿರ್‌ನ ತಾಯಿಯ ಮಾನವ ಅವಶೇಷಗಳನ್ನು ಮುಚ್ಚಿಡಲಾಗಿತ್ತು. ಆಕೆಯ ಗೋರಿಯ ಪಕ್ಕದಲ್ಲೇ, ಹಿಂದಿನ ದಿನವೇ, ಮತ್ತೊಂದು ಗುಂಡಿಯನ್ನು ತೋಡಿದ್ದರು.

ಚರ್ಚಿನಲ್ಲೂ ಹಳ್ಳಿಯ ರೈತರೆಲ್ಲರೂ ತಮ್ಮ ಒಡೆಯನಿಗೆ ಅಂತಿಮ ಗೌರವ ಸಲ್ಲಿಸಲು ಕಿಕ್ಕಿರಿದು ನೆರೆದಿದ್ದರು. ಕಿರಿಯ ದುಬ್ರೋವ್‌ಸ್ಕಿ ಪ್ರಾರ್ಥನಾ ವೇದಿಕೆಯ ಬಳಿ ಹೋಗಿ ನಿಂತನು. ಅವನು ಅಳಲೂ ಇಲ್ಲ, ಪ್ರಾರ್ಥನೆ ಮಾಡಲೂ ಇಲ್ಲ. ಅವನ ಮುಖ ಮಾತ್ರ ತುಂಬ ಭೀಕರವಾಗಿ ಕಾಣುತ್ತಿತ್ತು. ಆ ದಾರುಣ ಸಂಸ್ಕಾರ ಸಮಾರಂಭ ಅಂತೂ ಕೊನೆ

ಗಂಡಿತು. ವ್ಲಾಡಿಮಿರ್‌ನೇ ಮೊದಲು ತಂದೆಯ ಮೃತದೇಹಕ್ಕೆ ಕಟ್ಟ ಕಡೆಯ ಪ್ರಣಾಮ ಸಲ್ಲಿಸಿದ. ಅನಂತರ ಸೇವಕರೆಲ್ಲ ಅವನನ್ನನುಸರಿಸಿದರು. ಶವದಾನಿಯ ಮುಚ್ಚಳ ತಂದು ಮೊಳೆಗಳನ್ನು ಹೊಡೆದು ಸಂಪೂರ್ಣವಾಗಿ ಮುಚ್ಚಿಯೇಬಿಟ್ಟರು. ಹೆಂಗಸರೆಲ್ಲರೂ ಉಚ್ಚಕಂಠದಿಂದ ರೋದಿಸತೊಡಗಿದರು. ಗಂಡಸರೂ ಉಕ್ಕಿಬರುತ್ತಿದ್ದ ಕಣ್ಣೀರನ್ನು ಬೆರಳಿನ ಗೆಣ್ಣುಗಳಿಂದ ಒರಸುತ್ತಿದ್ದುದನ್ನು ಕಾಣಬಹುದಿತ್ತು. ವ್ಲಾಡಿಮಿರ್ ಮತ್ತು ಅದೇ ಮೂವರು ಸೇವಕರು ಪುನಃ ಶವದಾನಿಯನ್ನು ಹೊತ್ತು ರುದ್ರಭೂಮಿಯ ಕಡೆಗೆ ನಡೆದರು. ನೆರೆದಿದ್ದ ಹಳ್ಳಿಯ ಜನ ಸಮೂಹವೆಲ್ಲ ಅವರನ್ನು ಹಿಂಬಾಲಿಸಿತು. ಶವದಾನಿಯನ್ನು ಗೋರಿಯೊಳಕ್ಕೆ ಇಳಿಸಲಾಯಿತು. ಪ್ರತಿಯೊಬ್ಬರೂ ಮುಂದೆ ಬಂದು ಒಂದೊಂದು ಹಿಡಿಮಣ್ಣನ್ನು ಹಾಕಿದರು. ಸಮಾಧಿಯನ್ನು ಸಂಪೂರ್ಣವಾಗಿ ಮುಚ್ಚಲಾಯಿತು. ಎಲ್ಲರೂ ಕೊನೆಯ ಬಾರಿಗೆ ಬಾಗಿ ವಂದಿಸಿ ಹಿಂದಿರುಗಿದರು. ವ್ಲಾಡಿಮಿರ್ ಉಳಿದೆಲ್ಲರಿಗಿಂತ ಮುನ್ನವೇ ಹೊರಟು, ಬರ್ಚ್‌ಮರಗಳ ತೋಪಿನೊಳಗೆ ಹೊಕ್ಕು ಕಣ್ಮರೆಯಾದ.

ಯೆಗೊರೋವ್ನಾ, ತನ್ನ ಚಿಕ್ಕ ಯಜಮಾನರ ಪರವಾಗಿ, ಕ್ರೈಸ್ತಗುರು ಮತ್ತು ಅವನ ಹಿಂಬಾಲಕರನ್ನೆಲ್ಲಾ ಶ್ರಾದ್ಧದ ಸಂತರ್ಪಣೆಗೆ ಆಹ್ವಾನಿಸಿದಳು. ಚಿಕ್ಕ ಯಜಮಾನರು ಆ ಕೂಟದಲ್ಲಿ ಭಾಗವಹಿಸುವುದಿಲ್ಲವೆಂದು ಸೂಚಿಸಿದಳು. ಮುಖ್ಯಪಾದ್ರಿ ಫಾದರ್ ಆಂತಾನ್, ಅವನ ಪತ್ನಿ ಫೆಮೊತೋವ್ನಾ ಮತ್ತಿತರ ಪಾದ್ರಿ ವರ್ಗದವರೆಲ್ಲ ನಡೆದುಕೊಂಡೇ ದುಬ್ರೋವ್‌ಸ್ಕಿಯ ಮನೆಗೆ ಹೊರಟರು. ದಾರಿಯುದ್ದಕ್ಕೂ ಅವರು ಯೆಗೊರೋವ್ನಾ ಜತೆ ಮಾತನಾಡುತ್ತಾ, ಗತಿಸಿದ ದುಬ್ರೋವ್‌ಸ್ಕಿಯ ಗುಣಗಾನ ಮಾಡಿದರು; ಆತನ ವಾರಸುದಾರನಿಗೆ ಎಂತಹ ಭವಿಷ್ಯ ಕಾದಿದೆಯೋ ಎಂದು ಖೇದವನ್ನು ವ್ಯಕ್ತಪಡಿಸಿದರು. (ಪೆಟ್ರೋವಿಚ್, ದುಬ್ರೋವ್‌ಸ್ಕಿಯ ಮನೆಗೆ ಹೋಗಿದ್ದುದು, ಅಲ್ಲಿ ಅವನಿಗೆ ದೊರೆತ ಸ್ವಾಗತ—ಈ ವಿಷಯ ಆಗಲೇ ಹಳ್ಳಿಯವರಿಗೆಲ್ಲಾ ಗೊತ್ತಾಗಿದ್ದಿತು. ಇದರಿಂದ ಬಹು ವಿಪತ್ಕಾರೀ ಪರಿಣಾಮವಾಗುವುದೆಂದು ಸ್ಥಳೀಯ ಜನರು ಆಡಿಕೊಳ್ಳುತ್ತಿದ್ದರು.)

"ಹಣೆ ಬರಹ ಹೇಗಿದೆಯೋ ಹಾಗೆ ಆಗೇ ಆಗುತ್ತದೆ. ಆದರೆ, ವ್ಲಾಡಿಮಿರ್ ನಮ್ಮ ಯಜಮಾನರಾಗದಿದ್ದರೆ, ನಮಗೆಲ್ಲ ತುಂಬ ಅನಮಾನ

ವಾದಂತೆಯೇ ಸರಿ. ಅವರು ಧೈರ್ಯಸ್ಥ ಯುವಕರು. ತುಂಬ ಧೈರ್ಯಶಾಲಿಗಳು," ಎಂದಳು ಪಾದ್ರಿಯ ಪತ್ನಿ.

"ಯಾಕೆ, ಅದರಲ್ಲೇನು ಸಂಶಯ? ಅವರಲ್ಲವೆ ಇನ್ನಾರು ನಮ್ಮ ಯಜಮಾನರಾಗುವುದು?" ಎಂದು ಮಧ್ಯೆ ಮಾತನಾಡಿದಳು, ಯೆಗೊರೋವ್ನಾ. "ಕಿರಿಲ್ಲಾ ಪೆಟ್ರೋವಿಷ್ ಈ ತಕರಾರಿಲ್ಲ ಮಾಡಬೇಕಾಗಿಲ್ಲ. ಅವನಿಗೆ ಸರಿಸಮವಾಗಿ ನಿಲ್ಲಬಲ್ಲರು ನಮ್ಮ ಕಿರಿಯ ದಣಿಗಳು. ಪ್ರಭಾವಿ ಗಿಡುಗನಂತೆ! ಒಬ್ಬರೇ ಎದುರಿಸಬಲ್ಲರು. ಅಲ್ಲದೆ ದೇವರ ದಯದಿಂದ ಅವರ ಸಹಾಯಕ್ಕೆ ಬರಲು ಬೇಕಾದಷ್ಟು ಜನರಿದ್ದಾರೆ. ಪೆಟ್ರೋವಿಷ್‌ನೇನೋ ದರ್ಪದ ಪ್ರಭುವಿರಬಹುದು. ಆದರೆ ನನ್ನ ಮಗ ಗ್ರಿಷಾ, 'ತೊಲಗು, ಮುದಿನಾಯಿಯೇ, ತೊಲಗು ಇಲ್ಲಿಂದ!' ಅಂತ ಗದರಿಸಿ ಹೇಳಿದಾಗ, ತೆಪ್ಪಗೆ ಹಿಂದಿರುಗಲಿಲ್ಲವೇ?"

"ಹಾಗೇನು? ಆಶ್ಚರ್ಯವೇ ಸರಿ! ಅದು ಹೇಗೆ ನಿನ್ನ ಗ್ರಿಷಾ ಅಷ್ಟು ಜಬರ್ದಸ್ತಾಗಿ ಹೇಳಿದ? ನಾನು, ನಮ್ಮ ಚರ್ಚಿನ ಪ್ರಧಾನ ಗುರುಗಳ ಬಗ್ಗೆ ಯಾದರೂ ಟೀಕಿಸಿ ಮಾತನಾಡಬಲ್ಲೆ; ಆದರೆ, ಕಿರಿಲ್ಲಾ ಪೆಟ್ರೋವಿಷ್ ಇದ್ದ ಕಡೆ ಇಣಿಕಿ ನೋಡುವುದಕ್ಕೆ ಕೂಡ ಧೈರ್ಯ ಮಾಡಲಾರೆ. ಅವನು ದೃಷ್ಟಿಗೆ ಬಿದ್ದರೆ ಸಾಕು ನನಗೆ ಭಯವಾಗಿ ಮೈಯುದ್ದ ನಡುಕ ಹುಟ್ಟುತ್ತೆ; ಬೆವರು ಸುರಿಯಲು ಪ್ರಾರಂಭವಾಗಿ, ಬೆನ್ನು ತನ್ನಷ್ಟಕ್ಕೆ ತಾನೇ ಬಾಗಿ ಆತನಿಗೆ ಪ್ರಣಾಮ ಸಲ್ಲಿಸುತ್ತೆ...." ಎಂದು ಒಬ್ಬ ಪಾದ್ರಿ ಹೇಳಿದ.

"ಏನು ಜಂಭವೋ, ಹುಲುಮಾನವನದು! ಈಗ ದುಬ್ರೋವ್‌ಸ್ಕಿಗಾದಂತೆಯೇ, ಕಿರಿಲ್ಲಾ ಪೆಟ್ರೋವಿಷ್‌ಗೂ ಸ್ಮಶಾನ ಯಾತ್ರೆ ಕಾದೇ ಇದೆ. ಬಹುಶಃ ಅದು ಇದಕ್ಕಿಂತ ಹೆಚ್ಚು ವೈಭವದಿಂದ ನಡೆಯಬಹುದು, ಹೆಚ್ಚು ಅತಿಥಿಗಳು ಬರಬಹುದು. ಆದರೇನು? ಆ ಪರಮಾತ್ಮನ ದೃಷ್ಟಿಯಲ್ಲಿ ಎಲ್ಲಾ ಒಂದೇ!" ಎಂದ ಮುಖ್ಯ ಪಾದ್ರಿ.

"ಏನು ಮಾಡೋದು, ಫಾದರ್. ನಾವೂ, ಹಳ್ಳಿಯವರನ್ನೆಲ್ಲ ಕರೆಯಬೇಕೂಂತ ಮಾಡಿದ್ವಿ. ಆದರೆ ವ್ಲಾಡಿಮಿರ್ ಒಪ್ಪಲಿಲ್ಲ. ಅಡಿಗೆ ಸಾಮಾನುಗಳೇನೋ ಬೇಕಾದಷ್ಟಿವೆ, ದೊಡ್ಡ ಸಮಾರಾಧನೆಯನ್ನೇ ನಡಸುವಷ್ಟು. ಆದರೇನು ಮಾಡೋದು, ಗತ್ಯಂತರವಿಲ್ಲ. ಒಳ್ಳೆಯದೇ ಆಯಿತು. ನೀವು ಕೆಲವೇ

ಅತಿಥಿಗಳು ಬರೋಣದರಿಂದ, ಸನ್ಮಿತ್ರರೇ, ನಿಮಗೇ ಎಲ್ಲಾ ಆದರ ಸತ್ಕಾರಗಳನ್ನೂ ಕೊಡುತ್ತೇವೆ" ಎಂದು ಆಶ್ವಾಸನೆಯಿತ್ತಳು, ಯೆಗೊರೋವ್ನಾ.

ಈ ಔದಾರ್ಯದ ಮಾತು ಮತ್ತು ಚೊಕ್ಕಭೋಜನ ಸಿಗುವುದೆಂಬ ಉತ್ಸುಕತೆ, ಅವರು ಹೆಜ್ಜೆಯನ್ನು ಬೇಗ ಬೇಗ ಹಾಕುವಂತೆ ಪ್ರೇರೇಪಿಸಿದುವು. ಕೆಲವೇ ನಿಮಿಷಗಳಲ್ಲಿ ಅವರು ದುಬ್ರೋವ್‌ಸ್ಕಿಯ ಮನೆಯನ್ನು ತಲುಪಿದರು. ಆಗಲೇ ಊಟಕ್ಕೆ ಸಿದ್ಧತೆ ನಡೆದಿತ್ತು. ಲೋಟಾಗಳಲ್ಲಿ ವೋಡ್ಕಾ ತುಂಬುತ್ತಿದ್ದರು.

ಅದೇ ಹೊತ್ತಿನಲ್ಲೇ, ಇತ್ತಕಡೆ, ವ್ಲಾಡಿಮಿರ್ ದಟ್ಟವಾದ ವನ್ಯ ಪ್ರದೇಶದ ಒಳಭಾಗಕ್ಕೆ ಒಂದೇ ಸಮನೆ ನಡೆದು ಹೋಗುತ್ತಿದ್ದ. ಹಾಗೆ ನಡೆದದ್ದರಿಂದ ಉಂಟಾದ ಬಳಲಿಕೆಯಿಂದಲಾದರೂ ದುಗುಡವನ್ನು ಕಮ್ಮಿಯಾಗಿಸಲು ಪ್ರಯತ್ನಿಸುತ್ತಿದ್ದ. ಎಲ್ಲಿಗೆ ಹೋಗಬೇಕೆಂಬ ತಿಳಿವಳಿಕೆಯೇ ಇಲ್ಲದೆ ನಡೆಯುತ್ತಾ ಹೋದ. ರೆಂಬೆ–ಟೊಂಗೆಗಳು, ಮುಖ ಕೈಕಾಲುಗಳಿಗೆ ಸಿಕ್ಕಿಕೊಂಡು ತರಚಿದುವು. ಜೌಗುಪ್ರದೇಶಗಳಲ್ಲಿ ಕಾಲುಗಳು ಹೂತುಕೊಳ್ಳುತ್ತಿದ್ದುವು. ಇವಾವುವೂ ಅವನ ಗಣನೆಗೇ ಬರಲಿಲ್ಲ. ಕೊನೆಗೆ, ಸುತ್ತಲೂ ಪೊದೆಗಳಿಂದ ಆವೃತವಾಗಿದ್ದ ಒಂದು ಸಣ್ಣ ಕಣಿವೆ ಪ್ರದೇಶ ಸಿಕ್ಕಿತು. ಅಲ್ಲಿ ಹೇಮಂತಋತುವಿನ ಪ್ರಭಾವದಿಂದಾಗಿ ಎಲೆ ಕಳೆದುಕೊಂಡು ಬೋಳು–ಬೋಳಾಗಿ ನಿಂತಿದ್ದ ಮರಗಳನ್ನು ಬಳಸಿಕೊಂಡು, ಸಣ್ಣ ತೊರೆಯೊಂದು ನಿಶ್ಶಬ್ದವಾಗಿ ಹರಿಯುತ್ತಿತ್ತು. ವ್ಲಾಡಿಮಿರ್ ಇಲ್ಲಿ ತಂಪಾದ ಹುಲ್ಲು ಜಾಗದ ಮೇಲೆ ಕುಳಿತುಕೊಂಡು, ಶೋಕಚಿಂತನೆಯಲ್ಲಿ ತಲ್ಲೀನನಾದ.... ಈಗ ತಾನೊಬ್ಬ ಅನಾಥ, ಏಕಾಂಗಿ, ಎಂಬ ಯೋಚನೆ ಅವನನ್ನು ತುಂಬ ಕಾಡಿಸಿತು. ತನ್ನ ಭವಿಷ್ಯತ್ತು ಭೀಕರ ಕಾರ್ಮುಗಿಲುಗಳಿಂದ ಆವೃತವಾದಂತೆ ಅವನಿಗೆ ಭಾಸವಾಯಿತು. ಪೆಟ್ರೋವಿಷ್‌ನೊಡನೆ ಬೆಳೆಸಿದ ವೈರ ಹೊಸ ಕಷ್ಟಗಳನ್ನು ತಂದೊಡ್ಡಬಹುದೆನಿಸಿತು. ತನ್ನ ಅಧೀನದಲ್ಲಿದ್ದ ಸ್ವಲ್ಪ ಆಸ್ತಿಯೂ ಇನ್ನೇನು ಪರಹಸ್ತವಾಗುವುದು, ತನ್ನ ಪಾಲಿಗೆ ಉಳಿಯುವುದು ಬಡತನ ಮಾತ್ರ. ಈ ಎಲ್ಲ ಬಗೆಯ ಯೋಚನೆಗಳನ್ನೂ ಮನಸ್ಸಿನಲ್ಲಿ ತಿರುವಿಹಾಕುತ್ತಾ, ಬಹಳ ಹೊತ್ತಿನವರೆಗೆ ಆ ತೊರೆಯ ಬದಿಯಲ್ಲಿ ನಿಶ್ಚಲನಾಗಿ ಆತ ಕುಳಿತಿದ್ದ. ತೊರೆಯ ಕಡೆಗೆ ಅವನ ದೃಷ್ಟಿ ಹರಿಯಿತು. ನಿಧಾನವಾಗಿ ಹರಿಯುತ್ತಿದ್ದ ಪ್ರವಾಹ, ಕೆಲವು ಕೊಳೆತ ಎಲೆಗಳನ್ನು

ಕೊಚ್ಚಿಕೊಂಡು ಹೋಗುವುದನ್ನು ಕಂಡ. ಕೂಡಲೇ, ಸಾಮಾನ್ಯವಾಗಿ ನದಿಯನ್ನು ಜೀವನಕ್ಕೆ ಹೋಲಿಸುವ ಉಪಮೆ ಜ್ಞಾಪಕಕ್ಕೆ ಬಂತು; ಎಷ್ಟು ವಾಸ್ತವವಾದುದು, ಎಷ್ಟು ಸತ್ಯ, ಆ ಹೋಲಿಕೆ!—ಎಂದುಕೊಂಡ. ಕೊನೆಗೆ ಕವಿಯುತ್ತಿದ್ದ ಕತ್ತಲೆಯ ಅರಿವಾಯಿತು. ಎದ್ದು, ಮನೆಗೆ ಹೋಗುವ ದಾರಿಗಾಗಿ ಹುಡುಕಾಡಿದ. ಆ ಕಾಡು ಪ್ರದೇಶ ಅವನಿಗೆ ಅಪರಿಚಿತವಾಗಿತ್ತು. ಸ್ವಲ್ಪ ಹೊತ್ತು ಅಲೆದಾಡಿದ ಮೇಲೆ, ನೇರವಾಗಿ ಮನೆ ಮುಟ್ಟಿಸುವ ಮಾರ್ಗ ದೊರಕಿತು.

ದಾರಿಯಲ್ಲಿ, ದುಬ್ರೋವ್‌ಸ್ಕಿ, ಪಾದ್ರಿ ಮತ್ತು ಅವನ ಸಂಗಡದವರು ಎದುರಿಗೆ ಬರುತ್ತಿದ್ದುದನ್ನು ಕಂಡಿತು. ಅದೊಂದು ಅಪಶಕುನವೆನಿಸಿತು ಅವನಿಗೆ.... ತಕ್ಷಣವೇ ಪಕ್ಕಕ್ಕೆ ತಿರುಗಿ ಮರಗಳ ಹಿಂದೆ ಅವಿತುಕೊಂಡ. ಅವರು ಆತನನ್ನು ಕಾಣಲಿಲ್ಲ. ಪಕ್ಕದಲ್ಲೇ, ಮಾತುಕತೆಯಲ್ಲಿ ಮಗ್ನರಾಗಿ ಹಾದು ಹೋದರು.

"ದುಷ್ಕೃತ್ಯಗಳಿಂದ ದೂರವಿದ್ದು, ಸದಾ ಸತ್ಕಾರ್ಯವನ್ನೇ ಎಸಗು. ಈ ನಶ್ವರ ಪ್ರಪಂಚದಲ್ಲಿ ನಮ್ಮನ್ನು ಶಾಶ್ವತವಾಗಿರಿಸುವ ಸಾಧನ ಯಾವುದೂ ಇಲ್ಲ. ಯಾವ ವಿಷಯದಲ್ಲೇ ಆಗಲಿ, ನೀನು ನಿರ್ಲಿಪ್ತಳಾಗಿದ್ದುಕೊಂಡು ಜೀವನ ನಡಸಬೇಕು...." ಎಂದು ಮುಂತಾಗಿ ಮುಖ್ಯಪಾದ್ರಿ ತನ್ನ ಪತ್ನಿಗೆ ಉಪದೇಶಿಸುತ್ತಿದ್ದ.

ಅವನ ಪತ್ನಿ ಉತ್ತರವಾಗಿ ಏನೋ ಹೇಳಿದಳು. ಆದರೆ, ವ್ಲಾಡಿಮಿರ್‌ಗೆ ಅದು ಕೇಳಿಸಲಿಲ್ಲ.

ಮನೆಯ ಹತ್ತಿರ ಹೋಗುತ್ತಿದ್ದಂತೆ, ಅಂಗಳದಲ್ಲಿ ರೈತರು ಮತ್ತು ಮನೆಗೆಲಸದವರು ತಂಡತಂಡವಾಗಿ ನಿಂತಿದ್ದುದು ಕಂಡುಬಂತು. ದೂರದಿಂದ ಏನೋ ಗಲಭೆ–ಗೊಂದಲಗಳ ಗುಜು–ಗುಜು ಶಬ್ದವೂ ಕೇಳಿಸಿತು. ಗಾಡಿಖಾನೆಯ ಮುಂದೆ ಎರಡುಗಾಡಿಗಳು ನಿಂತಿದ್ದವು. ಸಮವಸ್ತ್ರಧಾರಿಗಳಾದ ಹಲವು ಅಪರಿಚಿತರು ದ್ವಾರಮಂಟಪದ ಬಳಿ ನಿಂತು ಯಾವುದೋ ಸಮಸ್ಯೆಯನ್ನು ಚರ್ಚಿಸುತ್ತಿದ್ದರು.

"ಇದೆಲ್ಲದರ ಅರ್ಥವೇನು?" ಎಂದು ತನ್ನನ್ನು ಕಾಣಲು ಓಡಿಬಂದ ಆಂತಾನ್‌ನನ್ನು ಕೇಳಿದ. "ಆ ಜನರು ಯಾರು? ಏನು ಬೇಕಂತೆ ಅವರಿಗೆ?"

"ಅಯ್ಯೋ, ಎಂತಹ ವಿಪತ್ತು ಬಂತು, ನನ್ನೊಡೆಯಾ!" ಎಂದು

ಆಂತಾನ್ ಏದುತ್ತಾ ಹೇಳಿದ. "ಅವರು ಜಿಲ್ಲಾಕೋರ್ಟಿನಿಂದ ಬಂದಿದ್ದಾರೆ, ನಿಮ್ಮ ಆಶ್ರಯದಿಂದ ನಮ್ಮನ್ನು ಬಿಡಿಸಿಕೊಂಡು ಪೆಟ್ರೋವಿಷ್‌ನ ಅಧೀನಕ್ಕೆ ವಶಪಡಿಸಲು ಬಂದಿದ್ದಾರೆ."

ವ್ಲಾಡಿಮಿರ್ ತಲೆತಗ್ಗಿಸಿ ನಿಂತ. ಸೇವಕರೆಲ್ಲರೂ ತಮ್ಮ ನಿರ್ಭಾಗ್ಯ ಯಜಮಾನನ ಸುತ್ತ ನೆರೆದು, ಅವನ ಕೈಯನ್ನು ಪ್ರೀತಿ ವಿಶ್ವಾಸದಿಂದ ಮುದ್ದಿಡುತ್ತಾ, "ನೀವು ನಮ್ಮ ತಂದೆ. ನಿಮ್ಮ ವಿನಾ ನಮಗೆ ಬೇರಾವ ಒಡೆಯರೂ ಬೇಕಾಗಿಲ್ಲ. ನೀವು ಅಪ್ಪಣೆ ಕೊಡಿ, ಈ ನ್ಯಾಯಾಧಿಪತಿಗಳ ಹೇಳಹೆಸರಿಲ್ಲದಂತೆ ಮಾಡಿಬಿಡುತ್ತೇವೆ. ನಾವು ಸಾಯಲಿಕ್ಕೆ ಸಿದ್ಧ. ಆದರೆ ಉಪ್ಪುಂಡ ನಿಮ್ಮ ಮನೆಗೆ ಎರಡು ಬಗೆಯಲಾರೆವು...." ಎಂದು ಅಂಗಲಾಚಿ ಬೇಡಿಕೊಳ್ಳತೊಡಗಿದರು.

ಅವರ ವಿಶ್ವಾಸ, ಸ್ವಾಮಿಭಕ್ತಿ ಇವುಗಳನ್ನು ವ್ಲಾಡಿಮಿರ್ ಕಂಡ. ಅವನ ಮನಸ್ಸನ್ನು ವಿಚಿತ್ರರೀತಿಯ ಯೋಚನೆಗಳು ಕಲಕಿದುವು.

"ನೀವೆಲ್ಲ ಇಲ್ಲೇ ಶಾಂತರಾಗಿ ಇರಿ. ನಾನು ಹೋಗಿ ಆ ಅಧಿಕಾರಿಗಳೊಂದಿಗೆ ಮಾತನಾಡುತ್ತೇನೆ," ಎಂದು ಅವರನ್ನು ಸಮಾಧಾನಮಾಡಿದ.

"ಹಾಗೇ ಮಾಡಿ, ಒಡೆಯರೇ! ದಬಾಯಿಸಿ ಮಾತನಾಡಿ, ಆ ನಾಯಿಗಳು ನಾಚಿಕೆಯಿಂದ ತಲೆ ತಗ್ಗಿಸುವಂತೆ ಮಾಡಿ."

ವ್ಲಾಡಿಮಿರ್ ಅಧಿಕಾರಿಗಳ ಬಳಿ ಸಾರಿದ. ಶಬಾಷ್ಕಿನ್ ಸೊಂಟದ ಮೇಲೆ ಕೈಯಿಟ್ಟುಕೊಂಡು, ತಲೆಯ ಮೇಲೆ ಟೋಪಿ ಏರಿಸಿ, ಸುತ್ತಮುತ್ತ ಸೊಕ್ಕಿನ ದೃಷ್ಟಿ ಬೀರುತ್ತಾ ನಿಂತಿದ್ದ....ಅಲ್ಲಿಯೇ ಫೌಜುದಾರನೂ ನಿಂತಿದ್ದ. ಎತ್ತರವಾದ, ದಢೂತಿಯಾದ ಆಸಾಮಿ. ಸುಮಾರು ಐವತ್ತು ವರ್ಷ ವಯಸ್ಸಾಗಿದ್ದಿರಬಹುದು. ಕೆಂಪು ಮುಖ. ಗಿರಿಜಾಮೀಸೆ ಬೆಳೆಸಿದ್ದ. ಡುಬ್ರೋವ್‌ಸ್ಕಿ ಬರುತ್ತಿರುವುದನ್ನು ಕಂಡು, ಅವನು ಗುಟುರು ಹಾಕುವವನಂತೆ ಗಂಟಲು ಶಬ್ದಮಾಡುತ್ತಾ, ಕರ್ಕಶಧ್ವನಿಯಲ್ಲಿ ಸೇವಕರನ್ನುದ್ದೇಶಿಸಿ ಹೇಳಿದ:

"ಇನ್ನೊಂದು ಸಾರಿ ನಾನು ಹೇಳುತ್ತೇನೆ ಕೇಳಿ. ಜಿಲ್ಲಾಕೋರ್ಟಿನ ಪ್ರಕಾರ ಇನ್ನು ಮುಂದೆ ನೀವೆಲ್ಲಾ ಕಿರಿಲ್ಲಾ ಪೆಟ್ರೋವಿಷ್‌ರ ಅಧೀನ. ಅವರ ಪರವಾಗಿ, ಶಬಾಷ್ಕಿನ್ ಇಲ್ಲಿ ಬಂದಿದ್ದಾರೆ. ಅವರ ಪ್ರತಿಯೊಂದು ಆಣತಿಯನ್ನೂ ಗೌರವಿಸಿ. ಇನ್ನು ನೀವು, ಹೆಣ್ಣಾಳುಗಳು—ನೀವೂ ಪೆಟ್ರೋವಿಷ್

ರನ್ನು ಇಷ್ಟಪಡುವುದನ್ನು ಕಲಿಯುವುದು ಒಳ್ಳೆಯದು. ಅವರಿಗಂತೂ ನಿಮ್ಮನ್ನೆಲ್ಲ ಕಂಡರೆ ಬಹಳ ಪ್ರೀತಿ."

ತನ್ನ ಕುಹಕಮಾತುಗಳಿಗೆ ತಾನೇ ಮೆಚ್ಚಿಕೊಂಡು, ಆ ಫೌಜುದಾರ ನಗತೊಡಗಿದ. ಶಬಾಷ್ಕಿನ್ ಮತ್ತಿತರ ಅಧಿಕಾರ ವರ್ಗದವರೂ ಅವನ ನಗೆಚಾಟಿಯನ್ನು ಪ್ರತಿಧ್ವನಿಸಿದರು. ವ್ಲಾಡಿಮಿರ್‌ನ ಕೋಪ ಕುದಿಯುವಂತಾಯಿತು.

"ಇವೆಲ್ಲದರ ಅರ್ಥವೇನು ಎಂದು ನಾನು ಕೇಳಬಹುದೆ?" ಎಂದು, ಗಹಗಹಿಸಿ ನಗುತ್ತಿದ್ದ ಫೌಜುದಾರನನ್ನು ಕುರಿತು, ಕೋಪವನ್ನು ಅಡಗಿಸಿ ಗಂಭೀರವಾಣಿಯಲ್ಲಿ ಆತ ಪ್ರಶ್ನಿಸಿದ.

"ಇದರ ಅರ್ಥವೇನು ಅಂದರೆ—ಕಿರಿಲ್ಲಾ ಪೆಟ್ರೋವಿಚ್‌ರನ್ನು ಈ ಆಸ್ತಿಯ ಮಾಲೀಕರನ್ನಾಗಿ ಸಂಸ್ಥಾಪಿಸಿ, ಆಸ್ತಿಗೆ ಸಂಬಂಧಿಸದ ಬೇರೆ ಕೆಲವು ಜನರನ್ನು ಸ್ಥಳಬಿಟ್ಟು ಹೊರಡಿ ಎಂದು ಹೇಳೋಕೆ ಬಂದಿದ್ದೇವೆ." ಎಂದು ಹೇಳಿದ ಆ ಚತುರ ಫೌಜುದಾರ.

"ಹೌದು. ನೀವು ನನ್ನ ರೈತರೊಂದಿಗೆ ವಾದಿಸುವ ಮುನ್ನ, ಆಸ್ತಿಯ ಮಾಲೀಕನಾದ ನನ್ನ ಬಳಿ ಬಂದು, ಅಧಿಕಾರ ಚ್ಯುತಿಯ ವಿಷಯ ತಿಳಿಸಬಹುದಿತ್ತಲ್ಲ."

"ಅದು ಸರಿ. ಆದರೆ, ತಾವು ಯಾರು ಸ್ವಾಮಿ?" ಎಂದು ಶಬಾಷ್ಕಿನ್ ವ್ಯಂಗ್ಯವಾಗಿ, ಉದ್ಧಟತನದಿಂದ ಕೇಳಿದ. ಮುಂದುವರಿದು, "ಹಿಂದೆ ಇದರ ಮಾಲೀಕನಾಗಿದ್ದ ಗ್ಯಾವ್ರಿಲ್ ದುಬ್ರೋವ್‌ಸ್ಕಿಯ ಮಗ ಆಂದ್ರಿ ದುಬ್ರೋವ್‌ಸ್ಕಿ ತೀರಿಕೊಂಡ ಅನ್ನುವುದಷ್ಟೇ ನಮಗೆ ಗೊತ್ತು. ಇನ್ನು ನೀವು ಯಾರೋ ನಮಗೆ ತಿಳಿಯದು, ತಿಳಿಯಲು ಇಷ್ಟವೂ ಇಲ್ಲ," ಎಂದು ಹೇಳಿದ.

"ಅವರು ನಮ್ಮ ಕಿರಿಯ ಒಡೆಯರು—ವ್ಲಾಡಿಮಿರ್ ದುಬ್ರೋವ್‌ಸ್ಕಿಯವರು" ಎಂದು ಸೇವಕರ ಗುಂಪಿನಿಂದ ಉತ್ತರ ಬಂತು.

"ಯಾರದು ಉಸಿರೆತ್ತುವವರು? ಎಷ್ಟು ಧೈರ್ಯ!" ಎಂದು ಫೌಜುದಾರ ಗುಡುಗಿದ. "ಯಾರು ನಿಮ್ಮ ಒಡೆಯರು? ಯಾವನು ಅವನು ವ್ಲಾಡಿಮಿರ್ ದುಬ್ರೋವ್‌ಸ್ಕಿ? ನಿಮ್ಮ ಒಡೆಯರು ಕಿರಿಲ್ಲಾ ಪೆಟ್ರೋವಿಚ್. ಕೇಳಿಸ್ತೋ ಇಲ್ಲವೋ, ಮುಟ್ಠಾಳರೇ?"

"ಓಹೋ, ಅದೆಲ್ಲಾ ಸುಳ್ಳು. ಅದಾಗದು. ಆತನೇನು ನಮ್ಮ ಯಜಮಾನನಲ್ಲ," ಎಂದಿತು ಅದೇ ಶಬ್ದ, ಸೇವಕರ ಗುಂಪಿನಿಂದ.

"ಸರಿ, ಸರಿ. ಇದೇಕೋ ಬಂಡಾಯಕ್ಕೆ ತಿರುಗಿತು. ಎಲ್ಲಿ ಪಟೇಲರೇ, ಬನ್ನಿ ಇಲ್ಲಿ" ಎಂದು ಕೂಗುಹಾಕಿದ ಫೌಜುದಾರ.

ಹಳ್ಳಿಯ ಮುಖ್ಯಸ್ಥ, ಪಟೇಲ, ಮುಂದೆ ಬಂದು ನಿಂತ.

"ನನಗೆ ಪ್ರತ್ಯುತ್ತರ ಕೊಡುವ ಆ ದುರಹಂಕಾರಿ ಯಾರು ಅನ್ನೋದನ್ನು ಈಗಲೇ ಕಂಡುಹಿಡಿಯಿರಿ. ಅವನಿಗೆ ನನ್ನ ಕೈಚುರುಕು ತೋರಿಸ್ತೇನೆ."

ಪಟೇಲ ಗುಂಪಿನ ಕಡೆ ತಿರುಗಿ, ಯಾರು ಉತ್ತರವಿತ್ತುದೆಂದು ಕೇಳಿದ. ಯಾರೂ ಒಂದು ಮಾತೂ ಆಡಲಿಲ್ಲ. ಆದರೆ, ಕೂಡಲೇ, ಎಲ್ಲೋ ಹಿಂಬಂದಿಯಿಂದ ಗುಸುಗುಸು ಶಬ್ದ ಕೇಳಿಬಂತು. ಬರುಬರುತ್ತಾ ಆ ಶಬ್ದ ದೊಡ್ಡದಾಗಿ, ಕೆಲವೇ ಕ್ಷಣಗಳಲ್ಲಿ, ಕಿವುಡಾಗುವಂತಹ ಭೋರ್ಗರೆಯುವ ಶಬ್ದವಾಯಿತು.

ಫೌಜುದಾರನಿಗೆ ಈಗ ಎದೆ ನಡುಕ ಹುಟ್ಟಿತು. ಮಾತಿನ ಸ್ವರವನ್ನು ತಗ್ಗಿಸಿ, ಯಾವ ತರದಲ್ಲಿಯಾದರೂ ಸೇವಕ ಸಮೂಹವನ್ನು ಸಮಾಧಾನ ಪಡಿಸಬೇಕೆಂದು ಯತ್ನಿಸಿದ.

"ಬನ್ನಿ, ಗೆಳೆಯರೇ! ಏತಕ್ಕಾಗಿ ಇನ್ನೂ ಕಾಯುತ್ತಾ ನಿಂತಿದ್ದೀರಿ?" ಎಂದು ಗುಂಪಿನಲ್ಲಿ ಕೆಲವರು ಕೂಗಿ ಹೇಳಿದರು. "ಈ ಅಧಿಕಾರಿವರ್ಗವೆಲ್ಲಾ ಇಂದೇ ನಾಶವಾಗಿ ಹೋಗಲಿ!" ಎಂದು ಕೂಗಿಕೊಳ್ಳುತ್ತಾ ಇಡೀ ಗುಂಪೇ ಅಧಿಕಾರಿಗಳತ್ತ ಮುಂದುವರಿಯಿತು.

"ಕಟ್ಟಿಹಾಕಿ ಇವರನ್ನೆಲ್ಲಾ" ಎಂದು ಗುಂಪಿನಿಂದ ಅದೇ ಶಬ್ದ ಉಳಿದವರನ್ನು ಪ್ರೋತ್ಸಾಹಿಸುತ್ತಾ ಹೇಳಿತು. ಗುಂಪು ಅವರ ಮೇಲೆರಗಿತು.

ಶಬಾಷ್ಕಿನ್ ಮತ್ತು ಆತನ ವರ್ಗದವರು ಬೇಗ ಮನೆಯ ಒಳಗೆ ಸೇರಿಕೊಂಡು, ಅಗಣಿ ಹಾಕಿಕೊಂಡರು.

"ನಿಲ್ಲಿ, ನಿಲ್ಲಿ. ಏನು ಮಾಡುತ್ತಿದ್ದೀರಿ. ತಿಳಿಗೇಡಿಗಳೇ! ನೀವು ನಿಮ್ಮನ್ನೇ ನಾಶಪಡಿಸಿಕೊಳ್ಳುವುದಲ್ಲದೆ, ನನ್ನನ್ನೂ ಹಾಳು ಮಾಡುತ್ತೀರಿ. ನನ್ನೊಬ್ಬನನ್ನೇ ಬಿಟ್ಟು, ನೀವೆಲ್ಲ ಮನೆಗೆ ಹೋಗಿ. ನೀವೇನೂ ಹೆದರಬೇಕಾಗಿಲ್ಲ. ನಮ್ಮ ಜಾರ್ ದೊರೆ ತುಂಬ ದಯಾಳು. ನಮಗೆಲ್ಲ ಅನ್ಯಾಯವಾಗುವುದನ್ನು ನೋಡುತ್ತಾ ಸುಮ್ಮನಿರುವುದಿಲ್ಲ. ನಾವೆಲ್ಲ ಅವರ ಮಕ್ಕಳೇ

ಅಲ್ಲವೇ? ನೀವು ಹೀಗೆ ಕಾನೂನುಗಳನ್ನು ಎದುರಿಸಿ, ದೊಂಬಿ ನಡಸಿದರೆ, ಅವರು ನಮ್ಮ ಹಿತವನ್ನು ಹೇಗೆ ತಾನೇ ರಕ್ಷಿಸಿಯಾರು?" ಎಂದು ದುಬ್ರೋವ್‌ಸ್ಕಿ ತುಸು ಕೋಪದಿಂದ ನುಡಿದ.

ದುಬ್ರೋವ್‌ಸ್ಕಿಯ ಆಜ್ಞಾಪಿಸುವ ಉಚ್ಚಕಂಠ, ಆತನ ಭವ್ಯ ವ್ಯಕ್ತಿತ್ವ, ಕೆಲಸಗಾರರ ಮೇಲೆ ಇಚ್ಛಿಸಿದ ಪರಿಣಾಮ ಬೀರಿದುವು. ಜನರು ಶಾಂತರಾಗಿ, ಚೆದರಿದರು. ಅಂಗಳ ಬರಿದಾದ ಮೇಲೆ, ಮನೆಯೊಳಗೆ ಅವಿತುಕೊಂಡಿದ್ದ ಶಬಾಷ್ಕಿನ್ ಸಂಗಡವನರು, ಶಬ್ದವಾಗದಂತೆ ಅಗಣಿ ತೆಗೆದು ಹೊರಬಂದು, ತಮಗೆಲ್ಲ ಔದಾರ್ಯದಿಂದ ರಕ್ಷಣೆಯಿತ್ತುದಕ್ಕಾಗಿ ದುಬ್ರೋವ್‌ಸ್ಕಿಗೆ ದೈನ್ಯದಿಂದ ಬಾಗಿ ವಂದಿಸಿದರು.

ವ್ಲಾಡಿಮಿರ್ ಅವರ ವಂದನೆಗಳನ್ನು ತಾತ್ಸಾರದಿಂದ ನಿರ್ಲಕ್ಷಿಸಿ, ಮರು ಮಾತನಾಡಲೇ ಇಲ್ಲ.

"ತಾವು ಅಪ್ಪಣೆಯಿತ್ತರೆ, ಈ ರಾತ್ರಿಯನ್ನು ಇಲ್ಲಿಯೇ ಕಳೆಯಬೇಕೆಂದು ತೀರ್ಮಾನಿಸಿದ್ದೇವೆ. ಈಗಾಗಲೇ ಕತ್ತಲಾಗಿ ಬಿಟ್ಟಿದೆ. ದಾರಿಯಲ್ಲಿ ನಿಮ್ಮ ರೈತರು ಮೇಲೆ ಬಿದ್ದರೂ ಬೀಳಬಹುದು. ಆ ಹಜಾರದಲ್ಲಿ ಸ್ವಲ್ಪ ಒಣಹುಲ್ಲು ತರಿಸಿ ಹಾಕಬಲ್ಲಿರಾ? ಅಲ್ಲಿ ಮಲಗಿದ್ದು, ಬೆಳಗಾಗುತ್ತಲೇ ಮನೆಗೆ ಹೊರಟು ಹೋಗುವೆವು," ಎಂದ ಶಬಾಷ್ಕಿನ್.

"ನಿಮ್ಮ ಇಷ್ಟವಿದ್ದ ಹಾಗೆ ಮಾಡಿ. ನಾನೇನು ಈ ಮನೆಯ ಮಾಲೀಕನಲ್ಲವಲ್ಲ" ಎಂದು ದುಬ್ರೋವ್‌ಸ್ಕಿ ಗಡುಸಾಗಿಯೇ ಉತ್ತರವಿತ್ತ.

ಹೀಗೆ ಹೇಳಿ ದುಬ್ರೋವ್‌ಸ್ಕಿ, ತನ್ನ ತಂದೆಯ ಕೋಣೆಗೆ ಹೋಗಿ, ಅಗಣಿ ಹಾಕಿಕೊಂಡ.

## ೭

"ಇನ್ನೇನು, ಕಥೆ ಎಲ್ಲಾ ಮುಗಿದ ಹಾಗಾಯಿತು," ಎಂದು ತನ್ನಲ್ಲಿ ತಾನೇ ಅಂದುಕೊಂಡ. "ಇದೇ ದಿನ ಬೆಳಗ್ಗೆ, ಇರೋದಕ್ಕೆ ಒಂದು ಮನೆ, ತಿನ್ನೋದಕ್ಕೆ ಒಂದು ಚೂರು ರೊಟ್ಟಿ. ನಾಳೆ?........ನಾನು ಹುಟ್ಟಿದ ಈ ಮನೆಯನ್ನು, ನನ್ನ ತಂದೆ ತೀರಿಕೊಂಡ ಈ ಮನೆಯನ್ನು, ಆತನ ಮರಣಕ್ಕೆ ಕಾರಣನಾದವನಿಗೇ, ನನ್ನನ್ನು ಈ ದುರವಸ್ಥೆಗೆ ಈಡು ಮಾಡಿದವನಿಗೇ ಬಿಟ್ಟುಕೊಡಬೇಕಾಯಿತಲ್ಲಾ!" ಎಂದು ಪ್ರಲಾಪಿಸುತ್ತಾ

ಕುಳಿತ. ಕೊಠಡಿಯಲ್ಲಿ ತೂಗುಹಾಕಿದ್ದ ತಾಯಿಯ ಚಿತ್ರಪಟದತ್ತ ಅವನ ಕಣ್ಣುಗಳು ಹೊರಳಿದುವು. ಶುಭ್ರವಾದ, ಪ್ರಾತಃಕಾಲದ ಉಡಿಗೆಯನ್ನು ತೊಟ್ಟು, ಮುಡಿಯಲ್ಲಿ ಕೆಂಪು ಗುಲಾಬಿಯನ್ನು ಮುಡಿದು, ಮಹಡಿ ಮೆಟ್ಟಲಿನ ಕಟಕಟೆಯ ಮೇಲೆ ಮೊಣಕೈ ಊರಿಕೊಂಡು ನಿಂತಿರುವಂತೆ, ಆಕೆಯನ್ನು ಕಲಾವಿದ ಚಿತ್ರಿಸಿದ್ದ. "ಇನ್ನು ಈ ಭಾವಚಿತ್ರ ನನ್ನ ತಂದೆಯ ಶತ್ರುವಿನ ಕೈಸೇರುತ್ತೆ," ಎಂದು ಚಿಂತಿಸಿದ. ಮುರಿದ ಕುರ್ಚಿ–ಮೇಜುಗಳನ್ನು ಒಟ್ಟುವ ಉಗ್ರಾಣದಲ್ಲಿ, ಆತ ಇದನ್ನು ಬಿಸಾಡಬಹುದು. ಅಥವಾ ಓಣಿಯಲ್ಲಿ ನೇತುಹಾಕಿ, ಹೋಗಿಬರುವ ಜೇಡರೆಲ್ಲರೂ ಅಣಕಿಸುವಂತೆ ಮಾಡಬಹುದು. ನನ್ನ ತಾಯಿಯ ಈ ಕೋಣೆ, ತಂದೆ ಕಾಲವಾದ ಈ ಪವಿತ್ರ ಕೋಣೆ, ಇನ್ನು ಮುಂದೆ ಬಂದೀಖಾನೆಯೋ ಅಥವಾ ಪೆಟ್ರೋವಿಷ್‌ನ ಜನಾನಾವೋ ಆಗಬಹುದು....ಇಲ್ಲ, ಇಲ್ಲ....ಅದಾಗದು. ನನ್ನನ್ನೇನೋ ಈ ಮನೆಯಿಂದ ಹೊರಹಾಕಿದ್ದಾನೆ. ಆದರೆ ಈ ದುರದೃಷ್ಟದ ಮನೆ ಅವನಿಗೂ ದಕ್ಕಬಾರದು!" ಎಂದು ಆಲೋಚಿಸುತ್ತಾ, ವ್ಲಾಡಿಮಿರ್ ಹಲ್ಲು ಕಚ್ಚಿ ಮುಖ ವಿಕಾರ ಮಾಡಿದ. ಭೀಕರ ಯೋಚನೆಗಳು ಅವನ ಮನಸ್ಸಿನಲ್ಲಿ ರೂಪುಗೊಳ್ಳುತ್ತಿದ್ದುವು. ಹಜಾರದಲ್ಲಿ ನ್ಯಾಯಾಧೀಶನ ಗುಂಪಿನವರು ಗಲಭೆನಡಸುತಿದ್ದರು. ಮನೆಯನ್ನು ತಮ್ಮದನ್ನಾಗಿ ಮಾಡಿಕೊಂಡು, ಅದು ಬೇಕು, ಇದು ಬೇಕು ಎಂದು ಆಜ್ಞೆಯೀಯುತ್ತಿದ್ದರು. ಅವನ ಸಂತಪ್ತ, ಆಲೋಚನಾಮಗ್ನತೆಗೆ ಅವರ ಹುಚ್ಚು ಅರಚಾಟಗಳು ಅಡ್ಡಿಬರುತ್ತಿದ್ದುವು. ಕಟ್ಟಕಡೆಗೆ, ಎಲ್ಲ ಶಬ್ದವೂ ಅಡಗಿತು.

ವ್ಲಾಡಿಮಿರ್‌ನು ಮೇಜಿನ ಕಪಾಟುಗಳನ್ನೆಲ್ಲಾ ತೆರೆದು, ತೀರಿಹೋದ ತಂದೆಯ ಕಾಗದ–ಪತ್ರಗಳನ್ನೆಲ್ಲಾ ನೋಡ ತೊಡಗಿದ. ಅವು ಬಹುಮಟ್ಟಿಗೆ ಗೃಹಕೃತ್ಯದ ಖರ್ಚುಗಳು ಮತ್ತು ವ್ಯಾಪಾರಕ್ಕೆ ಸಂಬಂಧಿಸಿದ ಕಾಗದಗಳಾಗಿದ್ದುವು. ಅವು ಯಾವುವನ್ನೂ ಓದದೆ, ವ್ಲಾಡಿಮಿರ್, ಹರಿದು ಗುಡ್ಡೆಹಾಕಿದ. ಆದರೆ, ಅವುಗಳ ಮಧ್ಯೆ ಪತ್ರಗಳನ್ನೊಳಗೊಂಡ ಒಂದು ದಪ್ಪನಾದ ಲಕ್ಕೋಟೆಯೂ ಇದ್ದಿತು. ಅದರ ಮೇಲೆ "ನನ್ನ ಪತ್ನಿಯಿಂದ ಬಂದ ಓಲೆಗಳು" ಎಂದು ಬರೆದಿದ್ದಿತು. ವ್ಲಾಡಿಮಿರ್ ತಾಯಿಯ ಆ ಕಾಗದಗಳನ್ನೆಲ್ಲಾ ಪರಿಶೀಲಿಸಿದ. ಉದ್ವೇಗ ಒತ್ತಿಕೊಂಡು ಬಂದು, ತಲ್ಲಣಿಸಿಹೋದ. ಟರ್ಕಿದೇಶದ ಮೇಲೆ ಮಿಲಿಟರಿ ಕ್ರಮಕೈಕೊಂಡಿದ್ದ

ಸಮಯದಲ್ಲಿ, ಕಿಸ್ತೆನೆವ್‌ಕಾ ಹಳ್ಳಿಯಿಂದ ಆಕೆ, ಸೈನ್ಯದಲ್ಲಿದ್ದ ತನ್ನ ಪತಿಗೆ ಬರೆದ ಪತ್ರಗಳಾಗಿದ್ದುವು, ಅವು. ತನ್ನ ಅಸಹನೀಯ ಏಕಾಂತ ಜೀವನ, ಮನೆಯ ತಾಪತ್ರಯಗಳು, ವಿರಹ ವೇದನೆ—ಮೊದಲಾದ ಸ್ತ್ರೀಸಹಜ ದುಃಖಗಳನ್ನೆಲ್ಲಾ ತೋಡಿಕೊಂಡು, ಬಹು ನಯವಾದ ಭಾಷೆಯಲ್ಲಿ ಆಕೆ ಪತ್ರಗಳನ್ನು ಬರೆದಿದ್ದಳು. ಆದಷ್ಟು ಜಾಗ್ರತೆ ಊರಿಗೆ ಹಿಂದಿರುಗಿ, ಬಾಳ ಸಂಗಾತಿಯಾದ ತನ್ನ ತೋಳ ತೆಕ್ಕೆಯಲ್ಲಿ ಒಂದಾಗಬೇಕೆಂದು ಪ್ರತಿಯೊಂದು ಪತ್ರದಲ್ಲಿಯೂ ಆಕೆ ಪ್ರಾರ್ಥಿಸಿದ್ದಳು. ಒಂದು ಕಾಗದದಲ್ಲಿ, ಮಗು ವ್ಲಾಡಿಮಿರ್‌ನ ಆರೋಗ್ಯದ ಬಗ್ಗೆ ಕಳವಳ ಸೂಚಿಸಿ, ಪತಿಯ ಸಲಹೆ ಕೇಳಿದ್ದಳು. ಇನ್ನೊಂದು ಪತ್ರದಲ್ಲಿ, ಎಳೆವಯಸ್ಸಿನಲ್ಲಿಯೇ ತುಂಬ ಬುದ್ಧಿವಂತಿಕೆಯನ್ನು ಪ್ರದರ್ಶಿಸುತ್ತಿದ್ದ ತನ್ನ ಮಗುವಿಗೆ ಅತ್ಯುತ್ತಮವಾದ ಭವಿಷ್ಯವಿದೆ ಎಂದು ಕೊಂಡಾಡಿದ್ದಳು. ದುಬ್ರೋವ್‌ಸ್ಕಿ ಸುತ್ತಮುತ್ತಲಿನ ಸನ್ನಿವೇಶವನ್ನೇ ಮರೆತು, ಕಾಲ್ಪನಿಕ ಸಾಂಸಾರಿಕ ಸುಖ - ಸಾಮ್ರಾಜ್ಯದಲ್ಲಿ ವಿಹರಿಸುತ್ತಾ, ವೇಳೆ ಸಮೆಯುತ್ತಿರುವ ಪರಿವೆಯೇ ಇಲ್ಲದೆ, ಆ ಪತ್ರಗಳನ್ನು ಓದುವುದರಲ್ಲಿ ಮಗ್ನನಾಗಿಬಿಟ್ಟ. ಹಳೆಯ ನಿಲುವು-ಗಡಿಯಾರ ಹನ್ನೊಂದು ಹೊಡೆದಾಗಲೇ ಅವನಿಗೆ ಎಚ್ಚರವಾದದ್ದು. ಕೂಡಲೇ ಎದ್ದು, ಕಾಗದಗಳ ಲಕ್ಕೋಟೆಯನ್ನು ಜೇಬಿಗೆ ಸೇರಿಸಿ, ಮೇಣದ ಬತ್ತಿಯೊಂದನ್ನು ಹಚ್ಚಿಕೊಂಡು, ಕೊಠಡಿಯಿಂದ ಹೊರಹೊರಟ. ನ್ಯಾಯಾಧೀಶನ ಕಡೆಯ ಗುಮಾಸ್ತರು ಹಜಾರದಲ್ಲಿ ನೆಲದ ಮೇಲೆ ಬಿದ್ದುಕೊಂಡಿದ್ದರು. ಮೇಜಿನ ಮೇಲೆ ಮದ್ಯದ ಸೀಸೆಗಳೂ ಲೋಟಾಗಳೂ ಇದ್ದುವು. ಕೋಣೆಯ ತುಂಬಾ ಸಾರಾಯಿಯ ವಾಸನೆ ಅಡರಿತ್ತು. ವ್ಲಾಡಿಮಿರ್ ಅಸಹ್ಯಪಟ್ಟುಕೊಂಡು, ಹಜಾರದ ಮೂಲಕ ಹೊರಬಾಗಿಲಿನ ಕಡೆಗೆ ನಡೆದ. ಬಾಗಿಲಿಗೆ ಬೀಗ ಹಾಕಿತ್ತು. ಅಲ್ಲಿಯೇ ಬೀಗದ ಕೈಗಾಗಿ ತಡಕಾಡಿದ. ದೊರಕಲಿಲ್ಲ. ಹಜಾರಕ್ಕೆ ಹಿಂದಿರುಗಿ ಹೋಗಿ ನೋಡಿದ. ಕೈಗೊಂಚಲು ಮೇಜಿನ ಮೇಲಿದ್ದಿತು. ಬಾಗಿಲು ತೆರೆದು ಹೊರಹೊರಟ. ಕೂಡಲೇ ಅಲ್ಲೇ ಮೂಲೆಯಲ್ಲಿ ಕುಳಿತಿದ್ದ ಮನುಷ್ಯನೊಬ್ಬನನ್ನು ಎಡವಿದ. ಆ ಮನುಷ್ಯನ ಕೈಯಲ್ಲಿ ಒಂದು ಕುಡುಗೋಲು ಪ್ರಕಾಶಿಸುತ್ತಿದ್ದಿತು. ಮೇಣದ ಬತ್ತಿಯನ್ನು ಆತನ ಮುಖಕ್ಕೆ ಹಿಡಿದು ಪರೀಕ್ಷಿಸಿದ. ಆತ ಕಮ್ಮಾರ ಆರ್ಖಿಪ್ ಎಂದು ಗೊತ್ತಾಯಿತು.

"ಇಲ್ಲಿ ಏನು ಮಾಡುತ್ತಿದ್ದೀಯ, ನೀನು?" ಎಂದು ಕೇಳಿದ.

"ಓ, ಸ್ವಾಮೀ, ನನ್ನೊಡೆಯನೇ! ದೇವರು ನಿಮ್ಮನ್ನು ಹರಸಲಿ, ಕಾಪಾಡಲಿ. ನೀವು ಮೇಣದ ಬತ್ತಿಯನ್ನು ತಂದದ್ದರಿಂದ ಎಲ್ಲಾ ಸರಿ ಹೋಯಿತು," ಎಂದು ಆರ್ಖಿಪ್ ಪಿಸುಧ್ವನಿಯಲ್ಲಿ ಹೇಳಿದ.

ವ್ಲಾಡಿಮಿರ್ ಅವನನ್ನು ವಿಸ್ಮಯದಿಂದ ನೋಡುತ್ತ ನಿಂತ.

"ಇಲ್ಲೇಕೆ ನೀನು ಹೀಗೆ ಹೊಂಚು ಹಾಕಿಕೊಂಡು ನಿಂತಿದ್ದೀಯೆ?" ಎಂದು ಕಮ್ಮಾರನನ್ನು ಕೇಳಿದ.

"ನನಗೆ....ಆಸೆಯಾಯಿತು....ಬಂದೆ....ಇಲ್ಲ, ಇಲ್ಲ....ಎಲ್ಲವೂ ತಮ್ಮ ತಮ್ಮ ಜಾಗದಲ್ಲಿ ಸರಿಯಾಗಿವೆಯೇ ಅಂತ ನೋಡಿಕೊಂಡು ಹೋಗೋಣ ಅಂತ ಬಂದೆ," ಎಂದು ತೊದಲುತ್ತಾ ಆರ್ಖಿಪ್ ಉತ್ತರಿಸಿದ.

"ಅದು ಸರಿ. ಆ ಕುಡುಗೋಲು ಯಾಕೆ, ಕೈಯಲ್ಲಿ?"

"ಕುಡುಗೋಲೆ? ಈ ಕೆಟ್ಟಕಾಲದಲ್ಲಿ ಕುಡುಗೋಲು ಇಲ್ಲದೆ ಯಾರಿಗೆ ತಾನೇ ಓಡಾಡಲಿಕ್ಕೆ ಸಾಧ್ಯ? ಈ ಸರ್ಕಾರಿ ಗುಮಾಸ್ತರು ಎಂತಹ ಖದೀಮರಿದ್ದಾರೆ ಅಂತೀರಿ! ಅವರು ಪಾತಕ್ಕಾಗಿ ಬಂದಿದ್ದಾರೆ, ಯಾವ ಗಳಿಗೆಯಲ್ಲಿ ಏನು ಮಾಡ್ತಾರೆ ಅಂತ ಯಾರಿಗೆ ಗೊತ್ತಾಗುತ್ತೆ?"

"ನಿನಗೆ ಅಮಲೇರಿದೆ. ಆ ಕುಡುಗೋಲನ್ನು ಅತ್ತ ಬಿಸಾಕಿ, ಹೋಗಿ ಮಲಗಿಕೊ. ಮತ್ತು ಸ್ವಲ್ಪ ಕಡಮೆಯಾಗಲಿ."

"ಅಮಲೆ? **ನನಗೆ** ಅಮಲೇರಿದೆಯೆ? ನನ್ನೊಡೆಯಾ, ದೇವರಾಣೆಯಾಗಿಯೂ, ಒಂದು ತೊಟ್ಟೂ ಕುಡಿದಿಲ್ಲ—ಈ ಹೊತ್ತಿನಲ್ಲಿ ಕುಡಿಯೋ ಯೋಚನೆ ಯಾರು ಮಾಡ್ತಾರೆ? ಈ ಗುಮಾಸ್ತರು ನಮ್ಮ ಮನೆಗೆ ಬಂದು, ನಮ್ಮ ಒಡೆಯರನ್ನೇ ಹೊರತಳ್ಳಿ, ತಮ್ಮದೇ ಒಡೆತನ ಸ್ಥಾಪಿಸಿ ದಾಂಧಲೆ ನಡಸುವುದನ್ನು ಯಾರಾದರೂ, ಎಲ್ಲಾದರೂ ಕೇಳಿದ್ದಾರೆಯೆ?.... ಅಲ್ಲಿ ನೋಡಿ, ಗೊರಕೆ ಹೊಡೆಯುತ್ತಿರುವುದು. ಅವರೆಲ್ಲಾ ನೆಗೆದು ಬೀಳ! ಎಲ್ಲರನ್ನೂ ಒಂದೇ ಏಟಿಗೆ ಕಡಿದು ಹಾಕಿದರೂ ಯಾವ ಪಾಪವೂ ಅಂಟೊಲ್ಲ. ಅದಕ್ಕಿಂತ ಒಳ್ಳೆಯ ಕೆಲಸ ಬೇರೊಂದಿಲ್ಲ. ಅವರಲ್ಲಿ ಒಬ್ಬನೂ, ಕಿಲುಬು ಕಾಸಿಗೂ ಲಾಯಕ್ಕಿಲ್ಲ!"

ದುಬ್ರೋವ್‌ಸ್ಕಿ ಹುಬ್ಬುಗಂಟಿಕ್ಕಿದ, ಸ್ವಲ್ಪ ತಡೆದು, ಹೇಳಿದ: "ಇಲ್ಲಿ ಕೇಳು, ಆರ್ಖಿಪ್! ನಿನ್ನ ಯೋಚನೆ ಸರಿಯಲ್ಲ. ಇದರಲ್ಲಿ ಈ

ಗುಮಾಸ್ತರ ತಪ್ಪೇನೂ ಇಲ್ಲ. ಎಲ್ಲಿ, ಒಂದು ಲಾಟೀನು ಹಚ್ಚು. ನನ್ನ ಹಿಂದೆ ಬಾ."

ಆರ್ಖಿಪ್, ಯಜಮಾನನ ಕೈಯಿಂದ ಮೇಣದ ಬತ್ತಿಯನ್ನು ಇಸ ಕೊಂಡು, ಅಲ್ಲಿಯೇ ಒಲೆಯ ಹಿಂದಿದ್ದ ಲಾಟೀನನ್ನು ಹಚ್ಚಿದ. ಇಬ್ಬರೂ ಸದ್ದು ಮಾಡದೆ ಪ್ರಾಂಗಣವನ್ನು ದಾಟಿ, ಅಂಗಳಕ್ಕೆ ಬಂದರು. ರಾತ್ರಿಯ ಪಹರೆಯವನು ಆಗಲೇ ಕಬ್ಬಿಣದ ತಟ್ಟೆಯ ಮೇಲೆ ಗಂಟೆ ಬಾರಿಸುತ್ತಿದ್ದ. ಅಲ್ಲಲ್ಲಿ ನಾಯಿಗಳು ಬಗುಳುವ ಶಬ್ದ ಕೇಳಿ ಬರುತ್ತಿತ್ತು.

"ಯಾರು ಪಹರೆ ನಡಸುತ್ತಿರುವವರು?" ದುಬ್ರೋವ್‌ಸ್ಕಿ ಕೇಳಿದ.

"ನಾವು, ಒಡೆಯರೆ—ವಾಸಿಲೀಸಾ ಮತ್ತು ಲುಕೆರ್ಯಾ" ಎಂಬ ಕೀರಲು ಧ್ವನಿಯ ಉತ್ತರ ಬಂತು.

"ನೀವು ನಿಮ್ಮ ಮನೆಗಳಿಗೆ ಹೊರಟುಹೋಗಿ. ಇನ್ನು ನಿಮ್ಮ ಆವಶ್ಯ ಕತೆ ಏನೂ ಇಲ್ಲ," ಎಂದು ದುಬ್ರೋವ್‌ಸ್ಕಿ ಅವರಿಗೆ ಹೇಳಿದ.

"ಹುಂ. ನೀವು ಹೋಗಬಹುದು," ಎಂದು ಆರ್ಖಿಪ್‌ನೂ ಆಜ್ಞಾಪಿಸಿದ.

"ತುಂಬ ಉಪಕಾರವಾಯ್ತು, ನಮ್ಮಪ್ಪ" ಎಂದು ಉತ್ತರವಿತ್ತು ಆ ಹೆಂಗಸರು ಕೂಡಲೇ ಮನೆಗಳಿಗೆ ತೆರಳಿದರು.

ದುಬ್ರೋವ್‌ಸ್ಕಿ ಮುಂದೆ ಹೊರಟ. ಯಾರೋ ಇಬ್ಬರು ಅವರನ್ನು ಸಮೀಪಿಸುತ್ತಿದ್ದರು. ಅವರು, ಸ್ವಲ್ಪ ದೂರವಿದ್ದಾಗಲೇ, 'ಯಾರವರು?' ಎಂದು ವಿಚಾರಿಸಿದರು. ಅವರ ಸ್ವರದಿಂದಲೇ, ಅವರು ಆಂತಾನ್ ಮತ್ತು ಗ್ರಿಶಾ ಎಂದು ದುಬ್ರೋವ್‌ಸ್ಕಿ ಪತ್ತೆ ಹಚ್ಚಿದ.

"ನೀವು ಯಾರೂ ಯಾಕೆ ನಿದ್ದೆ ಮಾಡಿಲ್ಲ?" ಅವರನ್ನು ಕೇಳಿದ.

"ಹೇಗೆ ತಾನೇ ನಿದ್ದೆ ಮಾಡೋದು? ಎಂತಹ ಕೆಟ್ಟ ಸ್ಥಿತಿಗೆ ಬಂದಿದ್ದೀವಿ ಅಂತ ಯೋಚಿಸಿದರೆ....ಯಾರಿಗೆ ಗೊತ್ತಿತ್ತು ಹೀಗೆಲ್ಲ ಆಗುತ್ತೆ ಅಂತ...." ಎಂದ ಆಂತಾನ್.

"ಶಾಂತರಾಗಿ. ಸಮಾಧಾನ ತಂದುಕೊಳ್ಳಿ" ಎಂದು ದುಬ್ರೋವ್‌ಸ್ಕಿ ಅವನ ಮಾತಿನ ಮಧ್ಯದಲ್ಲೇ ತಡೆಹಾಕಿ ಹೇಳಿದ. "ಯೆಗೊರೋವ್ನಾ ಎಲ್ಲಿ?"

"ದೊಡ್ಡ ಮನೆಯಲ್ಲಿ, ಅವಳ ಕೋಣೆಯಲ್ಲೇ ಇದ್ದಾಳೆ" ಗ್ರಿಶಾ ಹೇಳಿದ.

"ಹೋಗು. ಅವಳನ್ನು ಕರೆದು ತಾ. ಹಾಗೆಯೇ, ನಮ್ಮ ಜನರಿಗೆಲ್ಲಾ

ಮನೆಬಿಟ್ಟು ಹೊರಬರುವಂತೆ ತಿಳಿಸು. ಆ ಸರ್ಕಾರೀ ಅಧಿಕಾರಿಗಳ ವಿನಾ ಬೇರೆ ಯಾವ ನರಪಿಳ್ಳೆಯೂ ಮನೆಯ ಒಳಗೆ ಇರಕೂಡದು. ಮತ್ತೆ, ನೀನು, ಆಂತಾನ್ ಹೋಗಿ ಗಾಡಿಯನ್ನು ಸಿದ್ಧಪಡಿಸು."

ಗ್ರೀಷಾ ಹೋಗಿ, ಕೆಲ ನಿಮಿಷಗಳನಂತರ ತನ್ನ ತಾಯಿಯನ್ನು ಕರೆ ತಂದ. ಆ ವೃದ್ಧೆ, ಅಂದಿನ ಗಡಿಬಡಿಯಲ್ಲಿ, ಮಧ್ಯಾಹ್ನದ ಪೋಷಾಕನ್ನು ಬದಲಾಯಿಸುವುದನ್ನೂ ಮರೆತಿದ್ದಳು. ಅಂದು ರಾತ್ರಿ, ಅಧಿಕಾರಿಗಳ ವಿನಾ ಬೇರಾರೂ ಕಣ್ಣು ಮುಚ್ಚಿರಲಿಲ್ಲ.

"ಎಲ್ಲರೂ ಬಂದಿದ್ದಾರೆಯೇ? ಮನೆಯೊಳಗೆ ಯಾರೂ ಉಳಿದಿಲ್ಲ ತಾನೆ?" ದುಬ್ರೋವ್‌ಸ್ಕಿ ಕೇಳಿದ.

"ಇಲ್ಲ. ಅಧಿಕಾರಿಗಳನ್ನು ಬಿಟ್ಟು ಬೇರೆ ಯಾರೂ ಇಲ್ಲ," ಎಂದು ಗ್ರೀಷಾ ಉತ್ತರಿಸಿದ.

"ಸರಿ. ಸ್ವಲ್ಪ ಒಣಗಿದ ಹುಲ್ಲನ್ನೋ, ಕಡ್ಡಿಗಳನ್ನೋ ತನ್ನಿ," ಎಂದ ದುಬ್ರೋವ್‌ಸ್ಕಿ.

ಸೇವಕರು ಕುದುರೆಯ ಲಾಯಕ್ಕೆ ಓಡಿಹೋಗಿ, ಹುಲ್ಲಿನ ಹೊರೆಗಳನ್ನು ಹೊತ್ತು ತಂದರು.

"ಆ ದ್ವಾರಮಂಟಪದ ಕೆಳಗೆ ಎಲ್ಲವನ್ನೂ ಒಟ್ಟು. ಹಾಗೇ........ ಹಾಗೆ. ಸರಿ....ಈಗ, ನನ್ನ ನೆಚ್ಚಿನ ಗೆಳೆಯರೇ, ಎಲ್ಲಿ ಸ್ವಲ್ಪ ಈ ಕಡೆ ದೀಪ ತನ್ನಿ."

"ಆರ್ಖಿಪ್ ಲಾಟೀನಿನ ಚಿಮಣಿಯನ್ನು ಸಡಿಲಿಸಿ, ದೀಪವನ್ನು ಮುಂದೊಡ್ಡಿದ. ಅದರಿಂದ, ದುಬ್ರೋವ್‌ಸ್ಕಿ, ಒಂದು ಕಡ್ಡಿಯನ್ನು ಹೊತ್ತಿಸಿಕೊಂಡ.

"ಓಹ್, ಒಂದು ನಿಮಿಷ ತಾಳು. ಆ ಹಜಾರದ ಒಳಕ್ಕೆ ಹೋಗುವ ಬಾಗಿಲಿಗೆ ಬೀಗ ಹಾಕಿಬಿಟ್ಟಿದ್ದೇನೆ ಅಂತ ತೋರುತ್ತೆ. ಓಡಿಹೋಗಿ, ತೆಗೆದುಬಿಟ್ಟು ಬಾ." ಎಂದು ಆರ್ಖಿಪ್‌ಗೆ ಹೇಳಿದ.

ಆರ್ಖಿಪ್ ಹಜಾರದ ಬಾಗಿಲಿಗೆ ಓಡಿಹೋಗಿ ನೋಡಿದ. ಬೀಗ ಹಾಕಿರಲಿಲ್ಲ. "ಓಹ್, ಬೀಗ ತೆಗೆಯಬೇಕೆ?—ಅದೆಲ್ಲ ಆಗದು" ಎಂದು ಹಲ್ಲುಕಚ್ಚಿ ಹೇಳಿಕೊಳ್ಳುತ್ತಾ, ಬೀಗವನ್ನು ಭದ್ರವಾಗಿ ಹಾಕಿ, ದುಬ್ರೋವ್‌ಸ್ಕಿಯ ಬಳಿಗೆ ಹಿಂದಿರುಗಿದ.

ದುಬ್ರೋವ್‌ಸ್ಕಿ, ಒಟ್ಟಿದ್ದ ಹುಲ್ಲಿನ ಮೆದೆಗೆ, ಉರಿಯುತ್ತಿದ್ದ ಕಡ್ಡಿಯನ್ನು ಸೋಂಕಿಸಿದ. ಎಲ್ಲವೂ ಹೊತ್ತಿಕೊಂಡು ಧಗಧಗನೆ ಉರಿಯತೊಡಗಿದುವು. ಉರಿಯ ನಾಲಗೆಗಳು ಸುತ್ತಲೂ ಚಾಚಿ, ಅಂಗಳವನ್ನೆಲ್ಲಾ ಬೆಳಕಿನಿಂದ ತುಂಬಿದುವು.

"ಅಯ್ಯೋ, ಅಯ್ಯೋ, ಏನು ಮಾಡುತ್ತಿದ್ದೀಯಪ್ಪ, ವ್ಲಾಡಿಮಿರ್" ಎಂದು ಯೆಗೊರೋವ್ನಾ ಶೋಕಪೂರಿತ ಧ್ವನಿಯಲ್ಲಿ ಕೂಗಿಕೊಂಡಳು.

"ಸದ್ದು! ಸದ್ದು!" ದುಬ್ರೋವ್‌ಸ್ಕಿ ಆಜ್ಞಾಪಿಸಿದ. "ಇನ್ನು ಎಲ್ಲವೂ ಮುಗಿಯಿತು. ನನ್ನ ಪ್ರೀತಿಪಾತ್ರ ಮಕ್ಕಳೇ, ನಿಮಗೆಲ್ಲ ಅಂತಿಮ ಬೀಳ್ಕೊಡುಗೆಯ ನಮಸ್ಕಾರ! ದೇವರು ಎತ್ತ ಒಯ್ದರತ್ತ ನಾನು ಹೋಗ್ತೀನಿ. ನೀವೆಲ್ಲರೂ ಇಲ್ಲೇ ಇದ್ದುಕೊಂಡು, ನಿಮ್ಮ ಹೊಸ ಯಜಮಾನನೊಂದಿಗೆ ಸುಖ ಬಾಳ್ವೆ ನಡಸಿ."

"ಇಲ್ಲ ನಮ್ಮಪ್ಪ! ನಮ್ಮ ಪ್ರಭು! ಸತ್ತರೂ ಸತ್ತೇವು, ನಿಮ್ಮನ್ನು ಬಿಟ್ಟಿರೋದಕ್ಕೆ ಸಾಧ್ಯವಿಲ್ಲ. ನಿಮ್ಮ ಜತೆಯಲ್ಲಿ ನಾವೂ ಬಂದುಬಿಡುತ್ತೇವೆ" ಎಂದು ಎಲ್ಲರೂ ಅಳತೊಡಗಿದರು.

ಅಷ್ಟು ಹೊತ್ತಿಗೆ ಕುದುರೆಯ ಗಾಡಿ ಸಿದ್ಧವಾಗಿ ಬಂತು. ಗ್ರಿಷಾನ ಪಕ್ಕದಲ್ಲಿ ದುಬ್ರೋವ್‌ಸ್ಕಿ ಹತ್ತಿಕುಳಿತ. ತನ್ನ ಪಂಗಡದ ಕೆಲಮಂದಿಗೆ ಭೇಟಿಮಾಡಬೇಕಾದ ಸ್ಥಳ—ಕಿಸ್ತೆನೆವ್‌ಕಾ ಹಳ್ಳಿಯ ಬರ್ಚ್ ಮರಗಳ ತೋಪು—ವನ್ನು ಸೂಚಿಸಿದ. ಆಂತಾನ್, ಕುದುರೆಗಳ ಬೆನ್ನಿನ ಮೇಲೆ ಚಾಟಿ ಬೀಸಿದ. ಗಾಡಿ ಅಂಗಳದಿಂದ ಹೊರಕ್ಕೆ ಹೊರಟೇ ಹೋಯಿತು.

ಇದ್ದಕ್ಕಿದ್ದಂತೆಯೇ ಎಲ್ಲಿಂದಲೋ ಬಲವಾದ ಬಿರುಗಾಳಿ ಎದ್ದಿತು. ಒಂದೇ ಕ್ಷಣ, ಉರಿಯ ನಾಲಗೆಗಳು ಇಡೀ ಮನೆಯನ್ನೇ ಕಬಳಿಸಿದುವು. ರಕ್ತವರ್ಣದ ಹೊಗೆ, ಮನೆಯ ಮೇಲ್ಛಾವಣಿಯಿಂದ ತರಂಗ ತರಂಗಗಳಾಗಿ ಹೊರಹೊಮ್ಮುತ್ತಿತ್ತು. ಗವಾಕ್ಷಗಳು ಸಿಡಿದು, ಗಾಜಿನ ಚೂರುಗಳು ಅಂಗಳದಲ್ಲೆಲ್ಲಾ ಹರಡಿದುವು. ಉರಿಯುತ್ತಿದ್ದ ದೊಡ್ಡ ದೊಡ್ಡ ತೊಲೆಗಳು ಶಬ್ದ ಮಾಡುತ್ತಾ ಕೆಳಗೆ ಉರುಳಿದುವು. ಮನೆಯ ಒಳಗಿನಿಂದ ಮನಕರಗಿಸುವಂತಹ ಚೀತ್ಕಾರ, ಕೂಗುಗಳು ಕೇಳಿಬರುತ್ತಿದ್ದುವು—"ನಾವು ಸುಟ್ಟು ಹೋಗುತ್ತಿದ್ದೇವೆ. ಸಹಾಯ ನೀಡಿ! ರಕ್ಷಿಸಿ!"

"ಓಹ್, ಅದೆಲ್ಲ ಆಗದು" ಎಂದ ಆರ್ಖಿಪ್, ಮನೆಯನ್ನೆಲ್ಲಾ ಭಸ್ಮ

ಮಾಡುತ್ತಿದ್ದ ಆ ಮಹಾಜ್ವಾಲೆಯನ್ನು ನೋಡಿ, ಪೈಶಾಚಿಕ ತೃಪ್ತಿಯ ನಗೆ ಬೀರುತ್ತಾ.

"ಆರ್ಖಿಪ್, ನೀನು ತುಂಬ ಒಳ್ಳೆಯವನಪ್ಪ. ಒಳಗಿರುವ ಅವರನ್ನೆಲ್ಲಾ ರಕ್ಷಿಸಪ್ಪ. ಪಾಪ, ನತದೃಷ್ಟ ಪಾಪಿಗಳು, ಬೆಂದು ಹೋಗುತ್ತಿದ್ದಾರೆ. ದೇವರು ನಿನಗೆ ಒಳ್ಳೇದು ಮಾಡ್ತಾನೆ" ಎಂದು ಯೆಗೊರೋವ್ನಾ ಗೋಗರೆದಳು.

"ಅದೆಲ್ಲ ಆಗದು. ಸಾಧ್ಯವೇ ಇಲ್ಲ" ಎಂದುಬಿಟ್ಟ ಆರ್ಖಿಪ್.

ಅಷ್ಟು ಹೊತ್ತಿಗೆ, ಒಳಗಿದ್ದ ಅಧಿಕಾರಿಗಳು–ಗುಮಾಸ್ತರು, ಕಿಟಕಿಯ ಹತ್ತಿರ ಬಂದು, ಅದರ ಎರಡು ಪದರದ ಗಾಜುಗಳನ್ನು ಒಡೆದು ಹೊರ ಬರಲು ಯತ್ನಿಸುತ್ತಿದ್ದುದು ಕಂಡು ಬಂತು. ಆದರೆ, ಅಷ್ಟರಲ್ಲೇ, ಮೇಲಿನಿಂದ ಉರಿಯುತ್ತಿದ್ದ ಮೇಲ್ಛಾವಣಿ ಒಮ್ಮೆಲೇ ಅವರ ಮೇಲೆ ಬಿದ್ದು, ಅವರ ಚೀತ್ಕಾರದ ಸದ್ದನ್ನಡಗಿಸಿಬಿಟ್ಟಿತು.

ಸ್ವಲ್ಪವೇ ಹೊತ್ತಿನಲ್ಲಿ, ಇಡೀ ಅಂಗಳ ಹಳ್ಳಿಯ ರೈತ–ಕೂಲಿಗಾರರಿಂದ ತುಂಬಿಹೋಯಿತು. ಹೆಂಗಸರು ತಾವು ಬಚ್ಚಿಟ್ಟಿದ್ದ ಸಾಮಾನುಗಳನ್ನು ರಕ್ಷಿಸಲು ಓಡಾಡುತ್ತಿದ್ದರು. ಮಕ್ಕಳು ಆ ಮಹಾಜ್ವಾಲೆಯನ್ನು ಕಂಡು ಉತ್ಸಾಹದಿಂದ ಕುಣಿದಾಡುತ್ತಿದ್ದರು. ಬೆಂಕಿಯ ಕಿಡಿಗಳು ಗಾಳಿಯಲ್ಲಿ ತೂರಿಕೊಂಡು ಹೋಗಿ, ಆ ದೊಡ್ಡ ಮನೆಯ ಸುತ್ತಮುತ್ತಲಿದ್ದ ಜೋಪಡಿಗಳನ್ನೂ ದಹಿಸತೊಡಗಿದುವು.

"ಈಗ ಎಲ್ಲವೂ ಸರಿಹೋಯಿತು. ಆಹಾ, ಎಷ್ಟು ಚೆನ್ನಾಗಿ ಉರಿಯುತ್ತಿದೆ! ಪೆಟ್ರೋವಿಚ್‌ನ ಮನೆಯಿಂದ ನೋಡಿದರೆ, ಈ ನೋಟ ಬಹು ಸುಂದರವಾಗಿ ಕಂಡೀತು!" ಎಂದು ಆರ್ಖಿಪ್ ವಿಕಟಾಟ್ಟಹಾಸದಿಂದ ಕೂಗುತ್ತಿದ್ದ.

ಆದರೆ, ಅಷ್ಟರಲ್ಲೇ, ಏನೋ ಒಂದು ಹೊಸ ನೋಟ ಅವನ ದೃಷ್ಟಿಯನ್ನು ಸೆಳೆಯಿತು.—ಉರಿಯುತ್ತಿದ್ದ ಗುಡಿಸಲೊಂದರ ಮೇಲ್ಛಾವಣಿಯ ತೊಲೆಯ ಮೇಲೆ, ಒಂದು ಬೆಕ್ಕು ಅತ್ತಿಂದಿತ್ತ ಓಡಾಡುತ್ತಾ, ಸುರಕ್ಷಿತವಾದ ಜಾಗಕ್ಕೆ ಹಾರಿ ಹೋಗಲು ಭಗೀರಥ ಪ್ರಯತ್ನ ನಡೆಸುತ್ತಿತ್ತು. ಅದರ ಸುತ್ತ ಉರಿ ಧಗಧಗಿಸುತ್ತಿತ್ತು. ಹೃದಯ ವಿದ್ರಾವಕವಾಗಿ ಅರಚುತ್ತಾ ಆ ಬಡಪ್ರಾಣಿ ನೆರವಿಗಾಗಿ ಪ್ರಾರ್ಥಿಸುತ್ತಿತ್ತು. ಗೋಳಾಡುತ್ತಿದ್ದ ಆ

ಬೆಕ್ಕನ್ನು ಬೊಟ್ಟುಮಾಡಿ ತೋರಿಸುತ್ತಾ, ಹುಡುಗರು–ಮಕ್ಕಳು, ಮಿತಿ ಮೀರಿದ ಆನಂದದಿಂದ ಕುಣಿದು ಕುಪ್ಪಳಿಸುತ್ತಿದ್ದರು.

"ಏನನ್ನು ನೋಡಿ ನಗ್ತಾ ಇರೋದು, ಮೂರ್ಖ ಹುಡುಗರಾ?" ಎಂದು ಕೋಪದಿಂದ, ಬಿರುಗಣ್ಣು ಬಿಡುತ್ತಾ, ಆರ್ಖಿಪ್ ರೇಗಿದ. "ದೇವರಲ್ಲಿ ನಿಮಗೆ ಭಯ–ಭಕ್ತಿ ಎಳ್ಳಷ್ಟೂ ಇಲ್ಲವೇ? ದೇವರು ಸೃಷ್ಟಿಸಿದ ಮೂಕ ಪ್ರಾಣಿಯೊಂದು ಸಾಯ್ತಾ ಇದ್ರೆ, ನಿಮಗೆ ಖುಷಿ! ನಾಲಾಯಕ್ಕು ಜನರೇ!" ಹಾಗೆನ್ನುತ್ತಾ ಆ ಬೆಕ್ಕನ್ನು ರಕ್ಷಿಸಲು, ಉರಿಯುತ್ತಿದ್ದ ಗುಡಿಸಲಿನ ಮೇಲ್ಛಾವಣಿಗೆ ಏಣಿಯನ್ನು ಒರಗಿಸಿಕೊಂಡು ಮೇಲಕ್ಕೆ ಹತ್ತಿಹೋದ. ಅವನ ಉದ್ದೇಶವನ್ನರಿತ ಆ ಬೆಕ್ಕು, ಅಪ್ರತಿಮ ಕೃತಜ್ಞತೆಯನ್ನು ತೋರಿಸುತ್ತಾ, ಅವನ ಭುಜದ ಮೇಲಕ್ಕೆ ಹಾರಿ ಅಪ್ಪಿಕೊಂಡು, ಕುಳಿತುಕೊಂಡಿತು. ಕಮ್ಮಾರ ಆರ್ಖಿಪ್, ಮೈ – ಕೈ ಎಲ್ಲಾ ಸುಟ್ಟುಕೊಂಡು, ತಾನು ಗೆದ್ದು ತಂದ ಬಹುಮಾನವೆಂಬಂತೆ ಆ ಬೆಕ್ಕನ್ನು ಹಿಡಿದುಕೊಂಡು ಕೆಳಗೆ ಬಂದ.

"ಸರಿ ಇನ್ನು, ಗೆಳೆಯರೇ, ನಿಮಗೆಲ್ಲ ಕೊನೆಯ ನಮಸ್ಕಾರಗಳು" ಎಂದು ತನ್ನನ್ನೇ ಸಖೇದಾಶ್ಚರ್ಯಗಳಿಂದ ದಿಟ್ಟಿಸಿ ನೋಡುತ್ತಿದ್ದ ಸೇವಕರನ್ನುದ್ದೇಶಿಸಿ ಹೇಳಿದ. "ಇನ್ನು ಇಲ್ಲಿ ನಾನು ಮಾಡುವ ಕೆಲಸ ಏನೂ ಇಲ್ಲ. ನಿಮಗೆಲ್ಲ ಒಳ್ಳೆಯದಾಗಲಿ. ನಾನು ಯಾರಿಗಾದರೂ, ಯಾವಾಗಲಾದರೂ ಕೆಟ್ಟದ್ದು ಮಾಡಿದ್ದರೆ, ದಯವಿಟ್ಟು ಕ್ಷಮಿಸಿಬಿಡಿ."

ಕಮ್ಮಾರ ಆರ್ಖಿಪ್ ಹೊರಟುಹೋದ. ಅಗ್ನಿ ಇನ್ನೂ ಸ್ವಲ್ಪ ಹೊತ್ತಿನವರೆಗೆ ಉರಿಯುತ್ತಲೇ ಇದ್ದು, ಕೊನೆಗೆ ಶಮನವಾಯಿತು. ಅಲ್ಲಲ್ಲಿ, ಬಿಸಿ ಬೂದಿಯ ರಾಶಿಗಳು, ಕತ್ತಲಿನಲ್ಲಿ ಕೆಂಪಗೆ ಪ್ರಜ್ವಲಿಸುತ್ತಿದ್ದುವು. ಮನೆ–ಮಾರು ಕಳೆದುಕೊಂಡ ಕಿಸ್ತೆನೆವ್‌ಕಾ ನಿವಾಸಿಗಳು, ಅನಾಥರಂತೆ ಅವುಗಳ ಸುತ್ತ ಓಡಾಡುತ್ತಿದ್ದರು.

## ೭

ಮಾರನೆಯ ದಿನ ಈ ಅಗ್ನಿ ಪ್ರಕರಣದ ಸುದ್ದಿ ಜಿಲ್ಲೆಯಲ್ಲೆಲ್ಲಾ ಹಬ್ಬಿತು. ಪ್ರತಿಯೊಬ್ಬನ ಬಾಯಲ್ಲೂ ಅದೇ ಮಾತು. ಪ್ರತಿಯೊಬ್ಬನೂ ತನ್ನದೇ ಆದ ಊಹೆ–ಕಲ್ಪನೆಗಳಿಂದ ಸುದ್ದಿಗೆ ಸುಣ್ಣ–ಬಣ್ಣ ಹಚ್ಚಿ

ಹೇಳುತ್ತಿದ್ದ. ದುಬ್ರೋವ್‌ಸ್ಕಿಯ ಮನೆಯ ಜವಾನರು, ಶ್ರಾದ್ಧದ ಸಮಾರಾಧನೆಯಲ್ಲಿ ವಿಪರೀತವಾಗಿ ಸಾರಾಯಿ ಕುಡಿದು, ಮತ್ತರಾಗಿ, ಬೇಜವಾಬ್ದಾರಿಯಿಂದ ಮನೆಗೆ ಬೆಂಕಿ ತಗಲಿಸಿಬಿಟ್ಟರು – ಎಂದು ಕೆಲವರು ಹೇಳಿದರು. ಮತ್ತೆ ಕೆಲವರು ಮನೆಯೊಳಗೆ ಮಲಗಿದ್ದ ಅಧಿಕಾರಿ – ಗುಮಾಸ್ತರು ಮೇಲೆ ತಪ್ಪನ್ನು ಹೊರಿಸಿದರು. ಹೊಸದಾಗಿ ವಶಪಡಿಸಿಕೊಂಡ ಮನೆಯ ಗೃಹಪ್ರವೇಶೋತ್ಸವ ಸಮಾರಂಭದ ಉತ್ಸುಕತೆಯಲ್ಲಿ, ರಾತ್ರಿಯಲ್ಲಿ ಬೆಚ್ಚಗಿರುವುದಕ್ಕಾಗಿ ಉರಿ ಹಾಕಿಕೊಂಡು ಮಲಗಿದ್ದರು, ಹಾಗೇ ಇಡೀ ಮನೆಯೇ ಹೊತ್ತಿಕೊಂಡು ಉರಿದುಹೋಗಿದೆ – ಎಂದು ಅವರು ವಾದಿಸಿದರು. ಈ ಬೆಂಕಿ ಅನಾಹುತ, ಆಕಸ್ಮಿಕವಾಗಿ ನಡೆದದ್ದೇ ಇರಬೇಕು; ಜಿಲ್ಲಾ ನ್ಯಾಯಾಲಯದ ಇಡೀ ಅಧಿಕಾರಿವರ್ಗ ಮತ್ತು ಆ ಹಳ್ಳಿಯ ನಿವಾಸಿಗಳೆಲ್ಲರೂ ಭಸ್ಮೀಭೂತರಾಗಿರಬೇಕು – ಎಂದು ಬಹುಮಂದಿ ತರ್ಕಿಸಿದರು. ಅವರಲ್ಲಿ ಕೆಲವರು ನಿಜವಾದ ಕಾರಣವನ್ನು ಊಹಿಸಿ ಹೇಳಿದರು – ಕ್ರೋಧದಿಂದ, ಉನ್ಮತ್ತನಾಗಿ ದುಬ್ರೋವ್‌ಸ್ಕಿಯೇ ಈ ಭಯಂಕರ ಅನಾಹುತವನ್ನು ನಡೆಸಿರಬೇಕು, ಎಂದರು.

ಕಿರಿಲ್ಲಾ ಪೆಟ್ರೋವಿಚ್, ಮಾರನೆಯ ದಿನ, ಅನಾಹುತವಾದ ಸ್ಥಳಕ್ಕೆ ಹೋಗಿ ಸ್ವತಃ ವಿಚಾರಣೆ ನಡೆಸಿದ. ನ್ಯಾಯಾಧೀಶ, ಫೌಜುದಾರ, ವಕೀಲ, ಗುಮಾಸ್ತ, ಮತ್ತು ವ್ಲಾಡಿಮಿರ್ ದುಬ್ರೋವ್‌ಸ್ಕಿ, ಆತನ ದಾದಿ ಯೆಗೊರೋವ್ನಾ ಸೇವಕ ಗ್ರಿಷಾ ಗಾಡಿ ಹೊಡೆಯುವ ಆಂತಾನ್ ಮತ್ತು ಕಮ್ಮಾರ.... ಇವರೆಲ್ಲ ನಾಪತ್ತೆಯಾಗಿದ್ದಾರೆಂದು ತಿಳಿದು ಬಂತು. ಒಳಗಿದ್ದ ಅಧಿಕಾರಿ–ಗುಮಾಸ್ತರು, ಉರಿಯುತ್ತಿದ್ದ ಮೇಲ್ಛಾವಣಿಯ ಕೆಳಗೆ ಸಿಕ್ಕಿಬಿದ್ದು ಸತ್ತರೆಂದು ಆ ದೃಶ್ಯವನ್ನು ಕಣ್ಣಾರೆ ಕಂಡ ಸೇವಕರು ಪ್ರಮಾಣ ಒದಗಿಸಿದರು. ಅದರ ಮೇಲೆ, ಸುಟ್ಟು ಹೋದವರ ಸೀದ ಮೂಳೆಗಳನ್ನು ಬೂದಿಯಿಂದ ಅಗೆದು ತೆಗೆಯಲಾಯಿತು. ಅಂದು ರಾತ್ರಿ ಪಹರೆ ಮಾಡುತ್ತಿದ್ದ ಹೆಂಗಸರು ವಾಸಿಲೀಸಾ ಮತ್ತು ಲುಕೇರ್ಯಾ, ಬೆಂಕಿ ಹತ್ತಿಕೊಂಡು ಉರಿಯುವುದಕ್ಕೆ ಸ್ವಲ್ಪ ಮುನ್ನ ದುಬ್ರೋವ್‌ಸ್ಕಿ ಮತ್ತು ಕಮ್ಮಾರ ಆರ್ಖಿಪ್‌ರವರನ್ನು ತಾವು ಕಂಡಿದ್ದೆವೆಂದು ಸಾಕ್ಷ್ಯವಿತ್ತರು. ಹೀಗೆ ವಿಚಾರಣೆಯಿಂದ ದೊರೆತ ದಾಖಲೆಗಳಿಂದ, ಕಮ್ಮಾರ ಆರ್ಖಿಪ್ ಜೀವಂತನಾಗಿದ್ದಾನೆಂದೂ, ಬಹುಶಃ ಅವನೊಬ್ಬನೇ ಪಾತಕಿಯೆಂದು ಹೇಳಲಾಗದಿದ್ದರೂ, ಅವನನೇ

ಪ್ರಮುಖ ಪಾತ್ರವೆಂದು ಹೇಳಬಹುದೆಂದೂ ಸರ್ವರೂ ಅಭಿಪ್ರಾಯ ಪಟ್ಟರು. ದುಬ್ರೋವ್‌ಸ್ಕಿಯ ಮೇಲೂ ಗಾಢವಾದ ಸಂದೇಹ ಬಿದ್ದಿತು. ಕಿರಿಲ್ಲಾ ಪೆಟ್ರೋವಿಚ್, ಘಟನೆಯ ಬಗ್ಗೆ ಸುದೀರ್ಘ ವರದಿಯನ್ನು ತಯಾರಿಸಿ ಗವರ್ನರ್‌ಗೆ ಕಳುಹಿಸಿಕೊಟ್ಟ. ಕೋರ್ಟಿನಲ್ಲಿ ದುಬ್ರೋವ್‌ಸ್ಕಿಯ ಮೇಲೆ ಹೊಸ ಕೇಸೊಂದು ದಾಖಲಾಯಿತು.

ಈ ಘಟನೆ ಜರುಗಿದ ಕೆಲವು ದಿನಗಳನಂತರ, ಬೇರೊಂದು ತರದ ಸುದ್ದಿ ಜನರ ಕುತೂಹಲ–ಆಸಕ್ತಿಗಳನ್ನು ಕೆರಳಿಸಿ, ನಾನಾ ರೀತಿಯ ಊಹಾಪೋಹಗಳಿಗೆ ಎಡೆಯಿತ್ತಿತ್ತು.—

'——' ಎಂಬ ಸ್ಥಳದಲ್ಲಿ ಕಳ್ಳರ ಒಂದು ಗುಂಪು ಕಾಣಿಸಿಕೊಂಡು, ಸುತ್ತಮುತ್ತಲಿನ ಹಳ್ಳಿಗಳಲ್ಲಿ ಭಯ–ಭೀತಿಗಳನ್ನು ಬಿತ್ತಲು ಪ್ರಾರಂಭಿಸಿದ್ದರು. ಸರ್ಕಾರ ಅವರ ವಿರುದ್ಧ ತೆಗೆದುಕೊಂಡ ಕಾರ್ಯಕ್ರಮಗಳೆಲ್ಲಾ ನಿರರ್ಥಕವಾದುವು. ಲೂಟಿ–ದರೋಡೆಗಳು ಒಂದಾದಮೇಲೆ ಒಂದರಂತೆ ಬೇಗ ಬೇಗ ಆಗತೊಡಗಿದುವು. ಒಂದು ಮತ್ತೊಂದಕ್ಕಿಂತ ಚಮತ್ಕಾರವಾದ ರೀತಿಯಲ್ಲಿ ಆಗುತ್ತಿದ್ದಿತು. ಪ್ರಯಾಣಿಕರಿಗೆ ದಾರಿಯಲ್ಲಾಗಲೀ, ಗ್ರಾಮಸ್ಥರಿಗೆ ಹಳ್ಳಿಗಳಲ್ಲಾಗಲೀ ರಕ್ಷಣೆ ಒದಗಿಸುವುದು ಕಷ್ಟಸಾಧ್ಯವಾಯಿತು. ದರೋಡೆಕಾರರಿಂದ ತುಂಬಿದ ಕುದುರೆಗಾಡಿಗಳು ಆ ಕ್ಷೇತ್ರದಲ್ಲೆಲ್ಲಾ, ಹಾಲು ಹಗಲಿನಲ್ಲಿಯೇ, ಬಹಿರಂಗವಾಗಿ ಓಡಾಡುತ್ತಿದ್ದುವು. ಟಪಾಲು – ಗಾಡಿಗಳನ್ನು ಹಿಡಿದು ನಿಲ್ಲಿಸುವುದು; ಪ್ರಯಾಣಿಕರನ್ನು ತಡೆದು ಅವರ ಬಳಿ ಇದ್ದ ಹಣ–ವಸ್ತುಗಳನ್ನು ದೋಚುವುದು; ಹಳ್ಳಿಗಳಿಗೆ ನುಗ್ಗಿ, ಜಮೀನ್ದಾರರ ಮನೆಗಳನ್ನು ಲೂಟಿಮಾಡಿ, ಅವುಗಳಿಗೆ ಬೆಂಕಿ ಹಚ್ಚುವುದು—ಇದು ಆ ದರೋಡೆಗಾರರ ದಿನಚರಿಯಾಗಿದ್ದಿತು. ಸಾಮಾನ್ಯ ಜನರೆಲ್ಲ, ಈ ಬಂಡಾಯಗಾರರ ನಾಯಕನ ದಕ್ಷತೆ, ಎದೆಗಾರಿಕೆ ಮತ್ತು ಔದಾರ್ಯಗಳನ್ನು ಬಹುವಾಗಿ ಪ್ರಶಂಸಿಸುತ್ತಿದ್ದರು. ಅವನ ಬಗ್ಗೆ ಅನೇಕ ಪವಾಡಗಳು ನಿರ್ಮಿತವಾದುವು. ಎಲ್ಲರ ಬಾಯಲ್ಲೂ ದುಬ್ರೋವ್‌ಸ್ಕಿಯ ಹೆಸರೇ ಕೇಳಬರುತ್ತಿತ್ತು. ಈ ನಿರ್ಭೀತ ದೌರ್ಜನ್ಯಕಾರರ ನಾಯಕ, ದುಬ್ರೋವ್‌ಸ್ಕಿ ಅಲ್ಲದೆ ಬೇರಾರೂ ಅಲ್ಲವೆಂದು ಎಲ್ಲರೂ ನಂಬಿದ್ದರು.

ಆದರೆ, ಒಂದು ವಿಷಯ ಮಾತ್ರ ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡಿದ್ದಿತು.—ಈ ದರೋಡೆಕಾರರು ಪೆಟ್ರೋವಿಚ್‌ನ ಜಮೀನ್ದಾರಿಯ

ಬಳಿ ಮಾತ್ರ ಸುಳಿಯಲಿಲ್ಲ. ಅಲ್ಲಿನ ಒಂದು ಜೋಪಡಿಯನ್ನೂ ಅವರು ದೋಚಲಿಲ್ಲ; ಅವನ ಕೃಷಿ–ಕ್ಷೇತ್ರದ ಗಾಡಿಯೊಂದನ್ನೂ ಅಡ್ಡಹಾಕಿ ಸುಲಿಗೆ ಮಾಡಲಿಲ್ಲ. ಇದಕ್ಕೆ, ಪೆಟ್ರೋವಿಚ್, ತನ್ನ ಸೊಕ್ಕಿನ ಸ್ವಭಾವಕ್ಕೆ ತಕ್ಕಂತೆ, ತನ್ನದೇ ಆದ ಕಾರಣವನ್ನು ಕೊಡುತ್ತಿದ್ದ. ತಾನು, ಆ ಪ್ರಾಂತ್ಯದ ಎಲ್ಲ ತರದ ಜನರನ್ನೂ ಎಷ್ಟು ಭಯದಿಂದ ಹಿಡಿದಿಟ್ಟಿದ್ದೇನು! ಮತ್ತು ತನ್ನ ಅಧೀನದಲ್ಲಿದ್ದ ಹಳ್ಳಿಗಳಲ್ಲಿ ಪೋಲೀಸ್ ವ್ಯವಸ್ಥೆಯನ್ನು ಎಷ್ಟು ಸಮರ್ಪಕ ವಾಗಿ ಏರ್ಪಡಿಸಿದ್ದೇನು!—ಈ ಕಾರಣಗಳಿಂದಾಗಿ ದೌರ್ಜನ್ಯಕಾರರು ತನ್ನ ಬಳಿ ಸುಳಿದಿಲ್ಲವೆಂದು ಆತ ಜಂಭ ಕೊಚ್ಚಿಕೊಳ್ಳುತ್ತಿದ್ದ. ಆತನ ಈ ಮೌಢ್ಯ ಆತ್ಮಪ್ರಶಂಸೆಯ ನುಡಿಗಳನ್ನು ಕೇಳಿ ನೆರೆಯವರು ಆತನನ್ನು ಮೊದ ಮೊದಲು ಗೇಲಿ ಮಾಡುತ್ತಿದ್ದರು–ಒಂದಲ್ಲ ಒಂದು ದಿನ ಪೆಟ್ರೋವಿಚ್‌ನ ಮನೆಗೆ ಅಕ್ರಮ–ಅತಿಥಿಗಳ ಪಡೆ ನುಗ್ಗೇ ನುಗ್ಗುವುದು, ಅಲ್ಲಿ ಅವರಿಗೆ ಪೂರ್ಣ ತೃಪ್ತಿಯಾಗುವಂತೆ ಲೂಟಿ ಮಾಡಲು ಅವಕಾಶವೀಯುವ, ಅವನ ಅಮೌಲ್ಯ ಭಂಡಾರವನ್ನು ಲೂಟಿ ಮಾಡೇ ತೀರುವರು–ಎಂದು ಅವರು ಪ್ರತಿ ದಿನವೂ ನಿರೀಕ್ಷಿಸುತ್ತಿದ್ದರು. ಆದರೆ ಆ ದಿನ ಬರಲೇ ಇಲ್ಲ. ಕೊನೆಗೆ, ಅವರು ಪೆಟ್ರೋವಿಚ್‌ನ ಮಾತನ್ನೇ–ಆ ದೌರ್ಜನ್ಯಕಾರರೂ ಅವನಿಗೆ ವಿಶೇಷ ವಾದ ಮರ್ಯಾದೆ ತೋರಿಸುತ್ತಿದ್ದರು ಎಂಬ ಮಾತನ್ನೇ ಒಪ್ಪಬೇಕಾಗಿ ಬಂತು....ಒಂದೊಂದು ಬಾರಿಯೂ, ಹೊಸ ಹೊಸ ದರೋಡೆಯ ಸುದ್ದಿ ಬಂದಾಗಲೂ, ಪೆಟ್ರೋವಿಚ್‌ಗೆ ಭಾರಿ ಸಂತೋಷ! ಆ ಪ್ರಾಂತದ ಗವರ್ನರ್, ಪೋಲೀಸ್ ಮುಖ್ಯಾಧಿಕಾರಿಗಳು ಮತ್ತು ಸೈನಿಕ ದಳಪತಿಗಳೆಲ್ಲರ ಕಣ್ಣಿಗೆ ಮಣ್ಣೆರಚಿ, ದುಬ್ರೋವ್‌ಸ್ಕಿ, ಯಾವ ತೊಂದರೆಗೂ ಸಿಗದೆ ತಪ್ಪಿಸಿಕೊಂಡು ಹೋದಾಗಲೆಲ್ಲಾ ಪೆಟ್ರೋವಿಚ್ ಅವರನ್ನೆಲ್ಲಾ ಹೀಯಾಳಿಸಿ ಹಾಸ್ಯ ಮಾಡಿದ್ದೂ ಮಾಡಿದ್ದೆ!

ಹೀಗೇ ಕಾಲಚಕ್ರ ಉರುಳುತ್ತಾ, ಅಕ್ಟೋಬರ್ ಒಂದನೆಯ ತಾರೀಖು ಬಂದಿತು. ಅದು ಪೆಟ್ರೋವಿಚ್‌ನ ಟ್ರಾಯಿಕ್ಯುರೋವ್‌ನ ಗ್ರಾಮದೇವತೆ ಯನ್ನು ಆರಾಧಿಸುವ ದಿನವಾಗಿದ್ದಿತು....ಆದರೆ ಆ ಉತ್ಸವದ ಮತ್ತು ಉತ್ಸವ ನಂತರದ ಘಟನೆಗಳ ವಿವರಣೆಯನ್ನೀಯುವುದಕ್ಕೆ ಮುನ್ನ, ನಾವು, ನಮ್ಮ ಪಾಠಕ ಮಹಾಶಯರಿಗೆ ಇನ್ನೂ ಪರಿಚಯವಾಗದಿರುವ, ಅಥವಾ ಕಥಾನಕದ ಪ್ರಾರಂಭದಲ್ಲಿ ಕೇವಲ ಸೂಚಿಸಿ ಬಿಟ್ಟಿರುವ, ಕೆಲವು ವ್ಯಕ್ತಿಗಳನ್ನು ಪರಿಚಯ ಮಾಡಿಕೊಡಬೇಕಾಗಿದೆ.

೮

ಕಿರಿಲ್ಲಾ ಪೆಟ್ರೋವಿಚ್‌ನ ಮಗಳ ವಿಷಯವಾಗಿ ಕೇವಲ ಕೆಲವೇ ಮಾತುಗಳನ್ನು ಹೇಳಿದ್ದರೂ, ಆಕೆಯೇ ನಮ್ಮ ಕಥಾನಾಯಕಿ ಎಂಬುದನ್ನು ನಮ್ಮ ವಾಚಕ ಮಹಾಶಯರು ಊಹಿಸಿರಬಹುದು. ನಮ್ಮ ಈ ಕಥಾನಕದ ಪ್ರಾರಂಭದ ಘಟನೆಗಳು ಜರುಗಿದಾಗ ಆಕೆ ಹದಿನೇಳು ವರುಷ ವಯಸ್ಸಿನ ಯುವತಿಯಾಗಿದ್ದಳು. ಆಕೆಯ ಸೌಂದರ್ಯ ಪೂರ್ಣವಾಗಿ ವಿಕಸಿತವಾಗಿ, ಚೆಲುವು ಅಂಗಾಂಗಗಳಲ್ಲಿ ತುಂಬಿತುಳುಕುತ್ತಿತ್ತು. ಒಬ್ಬಳೇ ಮಗಳು, ತಾಯಿ ಇಲ್ಲದ ಮಗಳು, ತಂದೆ ಅತಿಯಾಗಿ ಮುದ್ದಿಸುತ್ತಿದ್ದ—ಆದರೆ, ಅಲ್ಲೂ ತನ್ನ ಸ್ವಾಭಾವಿಕ ಸ್ವೇಚ್ಛಾ ಪ್ರವೃತ್ತಿಯನ್ನೇ ತೋರುತ್ತಿದ್ದ. ಒಮ್ಮೊಮ್ಮೆ ಆಕೆಯ ಪ್ರತಿಯೊಂದು ಆಸೆ–ಅಭಿಲಾಷೆಗಳನ್ನೂ ತೃಪ್ತಿಪಡಿಸಿದರೆ, ಮತ್ತೆ ಕೆಲವು ಸಾರಿ, ಇಲ್ಲದ ಸಲ್ಲದ ತಪ್ಪುಗಳನ್ನು ಹುಡುಕಿ ಬಲು ಬಿಗುಮನಸ್ಸಿನಿಂದ—ಕ್ರೌರ್ಯದಿಂದ ಅಂತಲೇ ಅನ್ನಬಹುದು—ವರ್ತಿಸುತ್ತಿದ್ದ. ಆಕೆ ತನ್ನೊಂದಿಗೆ ತುಂಬ ಹೊಂದಿಕೊಂಡು ಅಚ್ಚುಮೆಚ್ಚಾಗಿ ಇದ್ದಾಳೆ ಎಂದು ಆತನಿಗೆ ತೋರಿದರೂ, ಆಕೆಯ ಸಂಪೂರ್ಣ ವಿಶ್ವಾಸ–ಒಲವನ್ನು ಸಂಪಾದಿಸಲು ಆತನಿಗೆ ಸಾಧ್ಯವಾಗಿರಲಿಲ್ಲ. ತಂದೆಯ ಈ ಸ್ವೇಚ್ಛಾವರ್ತನೆ, ಸಂದೇಹ ಪ್ರವೃತ್ತಿಗಳನ್ನು ಕಂಡು, ಆಕೆ ಆತನ ಮುಂದೆ ತನ್ನ ಸ್ವಂತ ವಿಚಾರ–ಭಾವನೆಗಳನ್ನು ನಿಸ್ಸಂಕೋಚವಾಗಿ ವ್ಯಕ್ತಪಡಿಸಲು ಹಿಂಜರಿಯುತ್ತಿದ್ದಳು. ಅವುಗಳು ತಂದೆಯಲ್ಲಿ ಯಾವ ಪರಿಣಾಮವನ್ನುಂಟುಮಾಡುವುವೋ ಎಂದು ಅಳುಕಿ, ಆಗಾಗ್ಗೆ ತನ್ನಲ್ಲಿ ಉದ್ಭವಿಸುತ್ತಿದ್ದ ರಾಗಭಾವ ಮತ್ತು ವಿಚಾರಗಳನ್ನು ಮುಚ್ಚಿಟ್ಟು ಮೌನದಿಂದಿರುವುದೇ ಆಕೆಗೆ ಅಭ್ಯಾಸವಾಗಿ ಹೋಯಿತು. ಆಕೆಗೆ ಸ್ತ್ರೀ–ಸಂಗಾತಿಗಳಾರೂ ಇರಲಿಲ್ಲ. ಒಬ್ಬಂಟಿಗಳಾಗಿಯೇ ಮೊದಲಿನಿಂದಲೂ ಬೆಳೆದುಕೊಂಡು ಬಂದಳು. ನೆರೆಹೊರೆಯ ಜಮೀನ್ದಾರರ ಪತ್ನಿಯರಾಗಲೀ, ಪುತ್ರಿಯರಾಗಲೀ ಪೆಟ್ರೋವಿಚ್‌ನ ಮನೆಗೆ ಬರುತ್ತಿರಲಿಲ್ಲ. ಪೆಟ್ರೋವಿಚ್‌ನ ಕೀಳುದರ್ಜೆಯ ಹಾಸ್ಯಗಳು ಮತ್ತು ಅಸಭ್ಯ ಮಾತುಕತೆಗಳು ಸರಿಹೋಗುತ್ತಿದ್ದುವೇ ಹೊರತು, ಕುಲೀನ ಸ್ತ್ರೀಯರಿಗೆ ಆತನ ಮನೆಯಲ್ಲಿ ಎಡೆ ಇರಲಿಲ್ಲ. ಕಿರಿಲ್ಲಾ ಪೆಟ್ರೋವಿಚ್ ತನ್ನ ಅತಿಥಿಗಳೊಂದಿಗೆ ಭೋಜನಾ

ಸಕ್ತನಾಗಿದ್ದಾಗ, ಎಂದೂ ನಮ್ಮ ಈ ಚೆಲುವೆ ಆವನ ಮುಂದೆ ಸುಳಿಯುತ್ತಿರಲಿಲ್ಲ. ದೊಡ್ಡ ಪುಸ್ತಕ ಭಂಡಾರವೊಂದು ಆಕೆಯ ವಶದಲ್ಲಿತ್ತು. ಅದರಲ್ಲಿ, ಹದಿನೆಂಟನೆಯ ಶತಮಾನದ ಫ್ರೆಂಚ್ ಲೇಖಕರ ಕೃತಿಗಳೇ ಬಹುವಾಗಿ ಇದ್ದುವು. 'ಮನೋಹರ ಪರಿಚಾರಿಕೆ'* ಎಂಬ ಪುಸ್ತಕವಲ್ಲದೆ ಬೇರಾವ ಪುಸ್ತಕಗಳನ್ನೂ ಓದದ ಆಕೆಯ ತಂದೆ, ಅವಳಿಗೆ ಒಳ್ಳೆಯ ಕೃತಿಗಳನ್ನು ಆರಿಸಿಕೊಂಡು ಓದುವ ಕಾರ್ಯದಲ್ಲಿ ಮಾರ್ಗದರ್ಶನ ಮಾಡಲು ಅಶಕ್ತನಾಗಿದ್ದ. ಮಾಷಾ ಒಬ್ಬಳೇ ಇಡೀ ಪುಸ್ತಕ ರಾಶಿಯನ್ನೆಲ್ಲಾ ಶೋಧಿಸಿ, ಕೊನೆಗೆ, ಸ್ವಾಭಾವಿಕವಾಗಿಯೇ, ಕಾದಂಬರಿಗಳೇ ತನಗೆ ಓದಲು ಸರಿಯಾದ ಗ್ರಂಥಗಳೆಂದು ತೀರ್ಮಾನಿಸಿದ್ದಳು. ಬಹಳ ವರ್ಷಗಳ ಹಿಂದೆ, ಮೊದಲು ಫ್ರೆಂಚ್ ಶಿಕ್ಷಕಿ ಮೈಮಿ ಎಂಬುವಳ ನೇತೃತ್ವದಲ್ಲಿ ಪ್ರಾರಂಭವಾದ ಆವಳ ವಿದ್ಯಾಭ್ಯಾಸ, ಹೀಗೆ ಮುಕ್ತಾಯಗೊಂಡಿತ್ತು. ಪೆಟ್ರೋವಿಚ್, ಆ ಫ್ರೆಂಚ್ ಶಿಕ್ಷಕಿ ಮೈಮಿಯೊಂದಿಗೆ ಅತಿಯಾಗಿ ಸಲಿಗೆ—ವಿಶ್ವಾಸಗಳನ್ನು ಬೆಳೆಸಿದ್ದಲ್ಲದೆ, ಆಂತರಿಕ ವ್ಯವಹಾರಗಳನ್ನೂ ಇಟ್ಟುಕೊಂಡಿದ್ದ. ಕೆಲವು ವರ್ಷಗಳಾದ ಮೇಲೆ ಈ ಗುಟ್ಟಾದ ವ್ಯವಹಾರ ಮುಚ್ಚಿಡಲಾಗದಷ್ಟು ಬಹಿರಂಗವಾದಾಗ, ಆತ ಆಕೆಯನ್ನು ಸದ್ದಿಲ್ಲದೆ ಬೇರೊಂದು ಸ್ಥಳಕ್ಕೆ ಕಳುಹಿಸಬೇಕಾಯಿತು. ಆ ಫ್ರೆಂಚ್ ಕನ್ಯೆ ಮೈಮಿ, ಆತನಲ್ಲಿ ಸದಾ ಹರ್ಷವೀಯುವಂತಹ ನೆನಪುಗಳನ್ನು ಬಿಟ್ಟು ಹೋಗಿದ್ದಳು. ಸಹೃದಯಿಯಾದ ಆ ಯುವತಿ, ಪೆಟ್ರೋವಿಚ್‌ನ ಮೇಲೆ ತನಗಿದ್ದ ಪ್ರಭಾವವನ್ನು ಎಂದೂ ದುರುಪಯೋಗಪಡಿಸಿಕೊಂಡಿರಲಿಲ್ಲ. ಈ ವಿಷಯದಲ್ಲಿ ಆಕೆ ತನ್ನನಂತರ ಒಬ್ಬರಾದಮೇಲೊಬ್ಬರಂತೆ ಬೇಗ ಬೇಗ ಬಂದು, ಕಿರಿಲ್ಲಾ ಪೆಟ್ರೋವಿಚ್‌ನ ಮನಸ್ಸನ್ನು ಅಪಹರಿಸಿ ಹೋಗಿದ್ದ ಬೇರೆ ಅನೇಕ ಫ್ರೆಂಚ್ ಶಿಕ್ಷಕಿಯರಿಂದ ಭಿನ್ನ

---

* ಇದು ಪುಷ್ಕಿನ್‌ನ ಕಾಲದಲ್ಲಿ ಹೆಸರುವಾಸಿಯಾಗಿದ್ದ ಶ್ರೀಮತಿ ಬೀಕನ್ ಎಂಬಾಕೆಯ ಜೀವನವೃತ್ತಾಂತವೆಂದು ಕೆಲವರ ಊಹೆ. ಅಥವಾ ಎಂ. ಡಿ. ಸುಲ್ಕೋವ್ ಎಂಬ ಹದಿನೆಂಟನೆಯ ಶತಮಾನದ ಕಾದಂಬರಿಕಾರನ 'ಸುಂದರ ಪರಿಚಾರಿಕೆ' ಅಥವಾ 'ಮಾನಗೆಟ್ಟ ಹೆಂಗಸೊಬ್ಬಳ ಸಾಹಸಕೃತ್ಯಗಳು' ಎಂಬ ಪುಸ್ತಕ ಪುಷ್ಕಿನ್‌ನ ಮನಸ್ಸಿನಲ್ಲಿರಬಹುದೆಂದು ಮತ್ತೆ ಕೆಲವರು ಅಭಿಪ್ರಾಯಪಡುತ್ತಾರೆ.

ಳಾಗಿದ್ದಳು. ಮೈಮಿ, ಬಹು ವಿನಯದಿಂದ ವರ್ತಿಸಿ, ಪೆಟ್ರೋವಿಚ್‌ನ ಮನಸ್ಸನ್ನು ಸಂಪೂರ್ಣವಾಗಿ ಸಂತುಷ್ಟಿಗೊಳಿಸಿದ್ದಳು. ಪೆಟ್ರೋವಿಚ್‌ನೂ ಆಕೆಯ ಬಗ್ಗೆ ಆಗಾಗ್ಗೆ ತನ್ನ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಿದ್ದ. ತನ್ನ—ಆಕೆಯ ಸಂಬಂಧದಿಂದ ಜನಿಸಿದ, ಮೈಮಿಯಂತೆಯೇ ದಾಕ್ಷಿಣಾತ್ಯ ಮುಖಲಕ್ಷಣಗಳನ್ನು ಹೊಂದಿದ್ದ, ಕಪ್ಪು ಕಣ್ಣಿನ ಒಂಬತ್ತು ವರ್ಷದ ಹುಡುಗನನ್ನು ತನ್ನ ಮನೆಯಲ್ಲೇ ಸಾಕಿಕೊಂಡು, ತನ್ನ ಮಗನೆಂದೇ ಕರೆಯುತ್ತಿದ್ದ. ಆದರೆ, ಅದೇ ಪೆಟ್ರೋವಿಚ್‌ನ ಪ್ರತಿಮೂರ್ತಿಗಳಾಗಿ ಜನಿಸಿ, ಆತನ ಮನೆಯಂಗಳದಲ್ಲಿ ಓಡಾಡುತ್ತಿದ್ದ ಇನ್ನೂ ಅನೇಕ ಬಾಲಕರು ಬರಿಗಾಲಿನಲ್ಲೇ ಓಡಾಡುತ್ತಾ, ಕೇವಲ ರೈತ ಮಕ್ಕಳಂತೆ ಪರಿಗಣಿತರಾಗಿದ್ದರು.

ಈ ಹಿಂದೆ ವಿವರಿಸಿದ ಘಟನೆಗಳು ಜರುಗುತ್ತಿದ್ದಾಗ, ಪೆಟ್ರೋವಿಚ್‌ನ ಕಿರಿಯ ಪುತ್ರ ಸಾಷಾ ಕಿರಿಲ್ಲಾ ಪೆಟ್ರೋವಿಚ್‌ಗೆ ಶಿಕ್ಷಣ ಕೊಡಲು ಫ್ರೆಂಚ್ ಶಿಕ್ಷಕನೊಬ್ಬ ಅದೇ ತಾನೇ ಮಾಸ್ಕೋದಿಂದ ಆಗಮಿಸಿದ್ದ.

ಆತನ ಲಕ್ಷಣವಾದ ಮೈಕಟ್ಟು ಮತ್ತು ನಿರಾಡಂಬರ ಜೀವನವನ್ನೂ, ಕಿರಿಲ್ಲಾ ಪೆಟ್ರೋವಿಚ್ ತುಂಬ ಮೆಚ್ಚಿಕೊಂಡ. ಆ ಶಿಕ್ಷಕ, ಅಭ್ಯರ್ಥಿಯೊಬ್ಬ ಸಾಮಾನ್ಯವಾಗಿ ತರಬೇಕಾಗಿದ್ದ ಪ್ರಶಂಸಾ ಪತ್ರಗಳೊಂದಿಗೆ, ಪೆಟ್ರೋವಿಚ್‌ನ ಸಂಬಂಧಿಯೊಬ್ಬರಿಂದ ಒಂದು ಶಿಫಾರಸು ಪತ್ರವನ್ನೂ ತಂದಿದ್ದ. ಅವರ ಮನೆಯಲ್ಲಿ ಆತ ನಾಲ್ಕು ವರ್ಷಗಳ ಕಾಲ ಶಿಕ್ಷಕನಾಗಿ ಕೆಲಸ ಮಾಡಿದ್ದ. ಆತ ಮುಂದಿರಿಸಿದ ಪತ್ರಗಳನ್ನೆಲ್ಲಾ ಪೆಟ್ರೋವಿಚ್ ಪರಾಮರ್ಶಿಸಿದ. ಪೆಟ್ರೋವಿಚ್‌ನಿಗೆ ಆತನಲ್ಲಿ ಕಂಡು ಬಂದ ಒಂದು ಅನರ್ಹತೆ ಎಂದರೆ—ಆತನ ಯೌವನ ಮತ್ತು ಮನೋಹರವಾದ ಅಂಗ ಸೌಷ್ಠವ. ನಿರ್ಭಾಗ್ಯ ವೃತ್ತಿ ಎನಿಸಿಕೊಂಡ ಉಪಾಧ್ಯಾಯ ವೃತ್ತಿಯನ್ನು ಮಾಡುವವರಲ್ಲಿ ಅತ್ಯಾವಶ್ಯಕವಾಗಿ ಕಾಣಬರುವ ತಾಳ್ಮೆ ಮತ್ತು ಅನುಭವಗಳ ಬದಲು, ಆತನಲ್ಲಿ ಕಂಡುಬರುತ್ತಿದ್ದ ಆ ದೇಹದಾರ್ಢ್ಯತೆ ಮತ್ತು ಯೌವನ ತೀರ ಅಸಮಂಜಸವೆಂದೇನೂ ಪೆಟ್ರೋವಿಚ್‌ಗೆ ಅನಿಸದಿದ್ದರೂ, ಬೇರೆ ಕಾರಣಗಳಿಗಾಗಿ ಆತನಿಗೆ ತುಸು ಅಸಮಾಧಾನವಾಯಿತು. ಅದನ್ನು ಹೋಗಲಾಡಿಸಿಕೊಳ್ಳಲೋಸುಗ, ಆ ಶಿಕ್ಷಕನಿಗೆ ಸ್ಪಷ್ಟವಾಗಿ ಎಲ್ಲವನ್ನೂ ತಿಳಿಯ ಹೇಳಿ, ಮುನ್ನೆಚ್ಚರಿಕೆಯಿಡಬೇಕೆಂದು ಆತ ನಿರ್ಧರಿಸಿದ. ಅದಕ್ಕಾಗಿ ತನ್ನ ಮಗಳು ಮಾಷಾಗೆ ಹೇಳಿ ಕಳುಹಿಸಿದ. (ಕಿರಿಲ್ಲಾ ಪೆಟ್ರೋವಿಚ್‌ಗೆ ಫ್ರೆಂಚ್

ಬರುತ್ತಿರಲಿಲ್ಲ. ಮಗಳೇ ಅವನ ಮಧ್ಯವರ್ತಿಯಾಗಿದ್ದಳು.)

"ಇಲ್ಲಿ, ಬಾಮ್ಮಾ ಮಾಷಾ. ಈ ಶಿಕ್ಷಕನಿಗೆ ತಿಳಿಸು, ನನಗೆ ಎಲ್ಲ ಒಪ್ಪಿಗೆಯಾಗಿದೆ, ಅವನನ್ನು ಶಿಕ್ಷಕನನ್ನಾಗಿ ಗೊತ್ತು ಮಾಡಿಕೊಳ್ಳುತ್ತೇನೆ ಅಂತ. ಆದರೆ ಒಂದು ವಿಷಯ ಮಾತ್ರ ಅವನು ಆಗಮನದಲ್ಲಿಡಬೇಕೂಂತ ತಿಳಿಸು—ನನ್ನ ವಿಲಾಸೀ ಹುಡುಗಿಯರ ತಂಟೆಗೆ ಮಾತ್ರ ಅವನು ಹೋಗದಿರಲಿ. ಹಾಗೇನಾದರೂ ಹೋದದ್ದು ಕಂಡರೆ, ತಕ್ಕ ಶಾಸ್ತಿ ಮಾಡ್ತೀನಿ, ನಾಯಿ ಜನ್ಮ ಕಾಣಿಸ್ತೀನಿ....ಇದನ್ನು ಫ್ರೆಂಚ್ ಭಾಷೆಯಲ್ಲಿ ಅವನಿಗೆ ತಿಳಿಯ ಹೇಳಮ್ಮ, ಮಾಷಾ."

ಮಾಷಾಗೆ ತಲೆ ತಗ್ಗಿಸುವಂತಾಯಿತು, ತಂದೆಯ ಅಸಭ್ಯ ಮಾತುಗಳನ್ನು ಕೇಳಿ. ಆತನ ವಿವೇಚನಾ ಶಕ್ತಿ ಮತ್ತು ಸಂಭಾವಿತ ವರ್ತನೆಗಳನ್ನು ನೆಚ್ಚಿಕೊಂಡು ತನ್ನ ತಂದೆ ಆತನನ್ನು ನೇಮಿಸಿಕೊಂಡಿರುವುದಾಗಿ, ಗಂಭೀರವಾದ ಫ್ರೆಂಚ್ ಭಾಷೆಯಲ್ಲಿ ಆ ಶಿಕ್ಷಕನಿಗೆ ಹೇಳಿದಳು.

ಅವನು ವಿನಯದಿಂದ ಬಾಗಿ, ಉತ್ತರವಿತ್ತ: ಎಲ್ಲರ ವಿಶ್ವಾಸ ಗಳಿಸುವುದರಲ್ಲಿ ತಾನು ಹಿಂದೆಬಿದ್ದರೂ, ಪ್ರತಿಷ್ಠಿತನಾಗಿ, ಎಲ್ಲರ ಗೌರವವನ್ನಂತೂ ಸಂಪಾದಿಸೇತೀರುವೆನೆಂಬ ಭರವಸೆ ತನಗಿದೆ, ಎಂದ.

ಮಾಷಾ ಆ ಉತ್ತರವನ್ನು ಪದಶಃ ಭಾಷಾಂತರಿಸಿ ತಂದೆಗೆ ತಿಳಿಸಿದಳು.

"ಬಹಳ ಒಳ್ಳೆಯದು. ಅವನಿಗೆ ವಿಶ್ವಾಸವನ್ನೂ ತೋರಿಸೆವು, ಗೌರವವನ್ನೂ ಕೊಡೆವು. ಸಾಷಾನ್ನ ಚೆನ್ನಾಗಿ ನೋಡಿಕೊಂಡು, ಅವನಿಗೆ ಭೂಗೋಳ, ವ್ಯಾಕರಣ ಹೇಳಿಕೊಡುವುದು ಅವನ ಕರ್ತವ್ಯ ಅಂತ ಅವನಿಗೆ ಭಾಷಾಂತರಿಸಿ ಹೇಳಮ್ಮ" ಎಂದ ಪೆಟ್ರೋವಿಷ್.

ಮರಯ್ಯಾ ಪೆಟ್ರೋವಿಷ್, ತಂದೆಯ ಆ ಒರಟು ಮಾತುಗಳನ್ನು ನಯವಾದ ಭಾಷೆಗೆ ಪರಿವರ್ತಿಸಿ ವಿಷಯ ತಿಳಿಸಿದಳು. ಈ ಸಂದರ್ಶನ ಮುಗಿದ ಮೇಲೆ ಪೆಟ್ರೋವಿಷ್ ಆ ಶಿಕ್ಷಕನನ್ನು ಆತನಿಗಾಗಿ ತೆರವು ಮಾಡಿದ್ದ ಕೋಣೆಗೆ ಕಳುಹಿಸಿಕೊಟ್ಟ.

ಮಾಷಾ, ಆ ಫ್ರೆಂಚ್ ಶಿಕ್ಷಕನನ್ನು ಭೇಟಿಯ ಸಂದರ್ಭದಲ್ಲಿ ಕತ್ತೆತ್ತಿ ಕೂಡ ನೋಡಲಿಲ್ಲ. ಶ್ರೀಮಂತಿಕೆಯ ಬೆಡಗು—ಬಿನ್ನಾಣಗಳಿಗೆ ಸಂಪೂರ್ಣವಾಗಿ ಮಾರುಹೋಗಿದ್ದ ಆಕೆ, ಉಪಾಧ್ಯಾಯನನ್ನು ಕೇವಲ ಸೇವಕನನ್ನೋ ಅಥವಾ ಕಾರ್ಮಿಕನನ್ನೋ ಎಂದು ಮಾತ್ರ ಪರಿಗಣಿಸುತ್ತಿದ್ದಳು. ಮತ್ತು

ಕಾರ್ಮಿಕರು ಮತ್ತು ಸೇವಕರು, ಆಕೆಯ ದೃಷ್ಟಿಯಲ್ಲಿ, ಮನುಷ್ಯ ವರ್ಗಕ್ಕೆ ಸೇರಿದವರೇ ಆಗಿರಲಿಲ್ಲ. ಆದ್ದರಿಂದಲೇ, ತಾತ್ಸಾರದಿಂದ ಆ ಶಿಕ್ಷಕ ದಿ–ಫಾರ್ಗ್‌ನನ್ನು ನೋಡಿ ಕೂಡ ನೋಡಲಿಲ್ಲ. ಅಥವಾ ಅವಳು ಅವನೊಂದಿಗೆ ಮಾತನಾಡಿದಾಗ ಅವನಲ್ಲುಂಟಾದ ಮನೋವಿಕಾರ ಮತ್ತು ಸ್ವರಬದಲಾ ವಣೆಗಳನ್ನು ಕೂಡ ಗಮನಿಸಲಿಲ್ಲ. ಇದಾದಮೇಲೆ ಅನೇಕ ದಿನಗಳವರೆಗೆ ಪ್ರತಿದಿನವೂ ಆತನನ್ನು ಭೇಟಿಮಾಡುತ್ತಿದ್ದರೂ, ಆತನಲ್ಲಿ ವಿಶೇಷವಾದ ಆಸಕ್ತಿಯನ್ನೇನೂ ತೋರಿಸಲಿಲ್ಲ. ಆದರೆ ಆತನ ಬಗ್ಗೆ ಗೌರವಯುತವಾದ ಅಭಿಪ್ರಾಯವನ್ನು ಹೊಂದುವಂತಹ ಪಾಠವನ್ನು ಆಕೆ ಸಧ್ಯದಲ್ಲೇ ಕಲಿಯ ಬೇಕಾಯಿತು. ಆ ಪ್ರಸಂಗವೂ ಬಹು ಅನಿರೀಕ್ಷಿತವಾಗಿಯೇ ಒದಗಿಬಂದಿತು.

ಕಿರಿಲ್ಲಾ ಪೆಟ್ರೋವಿಚ್, ಮನೋಲ್ಲಾಸ – ಕ್ರೀಡೆಗಳಿಗೆಂದು ಕೆಲವು ಕರಡಿಮರಿಗಳನ್ನು ತನ್ನ ಮನೆಯಲ್ಲಿ ಸದಾ ಸಾಕಿಕೊಂಡಿರುತ್ತಿದ್ದ. ಅವು ಗಳೊಂದಿಗೆ ಆಡುವುದು ಆತನ ಅತ್ಯಂತ ಮನೋರಂಜಕ ಕಾರ್ಯಕ್ರಮಗಳ ಲ್ಲೊಂದಾಗಿತ್ತು. ಅವುಗಳು ಇನ್ನೂ ಮರಿಗಳಾಗಿದ್ದಾಗ, ತನ್ನ ದಿವಾನ ಖಾನೆಗೇ ತರಿಸಿ, ಗಂಟೆಗಟ್ಟಲೆ ಅವುಗಳೊಂದಿಗೆ ಆಡುತ್ತಿದ್ದನು. ಬೆಕ್ಕು, ನಾಯಿಗಳನ್ನು ಅವುಗಳೊಂದಿಗೆ ಜಗಳವಾಡಲು ಬಿಟ್ಟು, ತಾನು ಅವುಗಳ ಹೋರಾಟವನ್ನು ಹಿಗ್ಗಿನಿಂದ ವೀಕ್ಷಿಸುತ್ತಿದ್ದ. ಅವುಗಳು ಬೆಳೆದು ಮೃಗ ಗಳಾದಾಗ, ಅವುಗಳನ್ನು ಸರಪಳಿಗಳಿಂದ ಬಂಧಿಸಿ, ಕೋಣೆಯಲ್ಲಿ ಕೂಡಿ ಹಾಕಿ, ಹೊತ್ತು–ಗೊತ್ತಿಗೆ ಆಹಾರಕೊಡದೆ ಉಪವಾಸ ಕೆಡವಿ, ಸತಾಯಿ ಸುತ್ತ, ಬೇರೊಂದು ರೀತಿಯಲ್ಲಿ ಸಂತೋಷ ದೊರಕಿಸಿಕೊಳ್ಳುತ್ತಿದ್ದ. ಆಗಾಗ್ಗೆ ಈ ಕರಡಿ ಮರಿಗಳನ್ನು ಮನೆಯ ಕಿಟಕಿಯ ಬಳಿಗೆ ಬರುವಂತೆ ಮಾಡಿ, ಅವುಗಳ ಮುಂದೆ, ಸುತ್ತ ಚೂಪಾದ ಮೊಳೆಗಳನ್ನು ಹೊಡೆದಿದ್ದ ಖಾಲಿ ಹೆಂಡದ ಪೀಪಾಯಿಯನ್ನು ಉರುಳಿಬಿಡುತ್ತಿದ್ದ. ಕರಡಿಯ ಮರಿಯು ಅದನ್ನು ಮೂಸಿನೋಡಿ, ಮೆತ್ತಗೆ, ಜಾಗರೂಕತೆಯಿಂದ ತನ್ನ ಪಂಜರದಿಂದ ಸ್ಪರ್ಶಿಸುವುದು. ಮೊಳೆಗಳು ಚುಚ್ಚುವುದೇ ತಡ ಹಿಂದಕ್ಕೆ ಜಿಗಿಯುವುದು. ಪುನಃ ಮುಂದೆ ಬಂದು, ಕೋಪೋದ್ರಿಕ್ತವಾಗಿ ಆ ಪೀಪಾಯಿಯನ್ನು ಬಲವಾಗಿ ತಳ್ಳಲು ಯತ್ನಿಸುವುದು. ಹಾಗೆ ಮಾಡಿ ಮತ್ತಷ್ಟು ಗಾಯ ಮಾಡಿಕೊಳ್ಳು ವುದು. ಹುಚ್ಚು ಹಿಡಿದಂತಾಗಿ ಅದು ಗರ್ಜಿಸುತ್ತಾ ಆ ಪೀಪಾಯಿಯ ಮೇಲೆ ಪುನಃ ಪುನಃ ಬೀಳುವುದು, ಜಿಗಿದಾಡುವುದು. ಪೀಪಾಯಿಯನ್ನು ಅದರ

ಸಮ್ಮುಖದಿಂದ ತೆಗೆದಾಗಲೇ, ಆ ಬಡಪ್ರಾಣಿ ಸುಮ್ಮನಾಗುತ್ತಿದ್ದುದು.

ಇನ್ನು ಕೆಲವು ವೇಳೆ, ಎರಡು ಕರಡಿಗಳನ್ನು ತರಿಸಿ ಗಾಡಿಗೆ ಕಟ್ಟಿಸುತ್ತಿದ್ದ. ಗಾಡಿಯೊಳಗೆ, ಅವರು ಇಷ್ಟಪಡಲಿ, ಇಲ್ಲದಿರಲಿ, ಬಲಾತ್ಕಾರವಾಗಿ ಅತಿಥಿಗಳನ್ನು ತುಂಬುತ್ತಿದ್ದ. ಆಮೇಲೆ ಆ ಕರಡಿಗಳಿಗೆ ಚಾಟಿ ಏಟು ಬಿಗಿಸಿ, ಅವು ತಮ್ಮ ಮನಬಂದತ್ತ ಗಾಡಿಯನ್ನು ಎಳೆದುಕೊಂಡು ಹೋಗುವಂತೆ ಮಾಡುತ್ತಿದ್ದ. ಗಾಡಿಯ ಒಳಗಿದ್ದವರೆಲ್ಲಾ ಭಯ ವಿಹ್ವಲರಾಗಿ ಪೇಚಾಡುತ್ತಿದ್ದಾಗ, ಪೆಟ್ರೋವಿಷ್ ಆ ದೃಶ್ಯವನ್ನು ನೋಡುತ್ತಾ ಗಹಗಹಿಸಿ ನಗುತ್ತಿದ್ದ. ಆದರೆ ಇವೆಲ್ಲಕ್ಕಿಂತ ಅವನಿಗೆ ಹೆಚ್ಚಿನ ಸಂತೋಷ ಕೊಡುತ್ತಿದ್ದ ಆತನ ಪ್ರೀತಿಯ, ವಿಲಕ್ಷಣ ವಿನೋದ ಕಾರ್ಯಕ್ರಮವಿನ್ನೊಂದಿದ್ದಿತು. ಅದನ್ನು ವಿಸ್ತಾರವಾಗಿ ವರ್ಣಿಸಿದರೇ, ಅದರ ಸೊಗಸು ಅರಿವಾದೀತು.

ಹಸಿವಿನಿಂದ ಬಳಲಿ, ಕಂಗೆಟ್ಟು ಕ್ರೋಧಗೊಂಡ ಕರಡಿಯೊಂದನ್ನು, ಖಾಲೀ ಕೋಣೆಯೊಂದರಲ್ಲಿ ಸೇರಿಸಿ, ಹಗ್ಗದಿಂದ ಅದನ್ನು ಕಟ್ಟಿಹಾಕುತ್ತಿದ್ದ. ಹಗ್ಗದ ಉದ್ದ, ಆ ಕೋಣೆಯ ಉದ್ದಕ್ಕೆ ಸಮನಾಗಿದ್ದಿತು. ಆದ್ದರಿಂದ, ಯಾರಾದರೂ ಆ ಕೋಣೆಯೊಳಕ್ಕೆ ಅಕಸ್ಮಾತ್ತಾಗಿ ಹೋಗಿ ಆ ಭಯಂಕರ ಪ್ರಾಣಿಯ ಕೈಗೆ ಸಿಕ್ಕಿಬಿದ್ದಲ್ಲಿ, ಪ್ರಾಣರಕ್ಷಣೆ ಮಾಡಿಕೊಳ್ಳಲು, ಕರಡಿಯ ಮೂಲೆಗೆ ಎದುರಾಗಿದ್ದ ಮೂಲೆ ಸೇರಿದ್ದಲ್ಲಿ ಮಾತ್ರ ಸಾಧ್ಯವಾಗುತ್ತಿತ್ತು–ಪೆಟ್ರೋವಿಷ್‌ಗೆ ಮೋಜು ಮಾಡಬೇಕೆನಿಸಿದಾಗ, ಈ ಕೊಠಡಿಯ ಬಾಗಿಲಿನ ತನಕ ಯಾರಾದರೊಬ್ಬ ಅಪರಿಚಿತ ವ್ಯಕ್ತಿಯನ್ನು ಕರೆದುಕೊಂಡು ಹೋಗಿ, ಒಮ್ಮೆಲೇ ಆತನನ್ನು ಒಳಕ್ಕೆ ತಳ್ಳಿ ಹೊರಗಡೆಯಿಂದ ಚಿಲಕ ಹಾಕಿಕೊಂಡು ಬಿಡುತ್ತಿದ್ದ–ಹಾಗೆ ಒಳಗೆ ಹೋದ ವ್ಯಕ್ತಿ, ತನ್ನ ಎದುರಿಗೆ ಮೈತುಂಬ ಕೂದಲು ಹೊದ್ದುಕೊಂಡಿದ್ದ ಆ ಕ್ರೂರ ಪ್ರಾಣಿಯನ್ನು ಕಂಡಷ್ಟೇ, ಜಂಘಾಬಲ ಉಡುಗಿ ಹೋಗಿ ಥರಥರನೆ ನಡುಗುತ್ತ ನಿಂತುಬಿಡುತ್ತಿದ್ದ. ಕರಡಿ, ಆತನ ಮೇಲೆ ಬಿದ್ದು, ಆತನ ಬಟ್ಟೆಯನ್ನು ಹರಿದು ಚಿಂದಿ ಮಾಡಿ, ಪರಚಿ ಮೈ ಕೈಯನ್ನೆಲ್ಲಾ ವ್ರಣಮಯವನ್ನಾಗಿ ಮಾಡುತ್ತಿದ್ದಿತು. ರಕ್ತ ಸೋರುತ್ತಿದ್ದಾಗ, ಆ ನಿರ್ಭಾಗ್ಯ ವ್ಯಕ್ತಿ, ಹೇಗಾದರೂ ಮಾಡಿ ಪ್ರಾಣರಕ್ಷಣೆ ಮಾಡಿಕೊಳ್ಳಲು ಸ್ಥಳ ಹುಡುಕುತ್ತಾ, ಕೊನೆಗೆ ಎದುರಿಗಿನ ಮೂಲೆಯನ್ನು ಕಂಡುಕೊಳ್ಳುತ್ತಿದ್ದ. ಅಲ್ಲಿ, ಹೋಗಿ ಗೋಡೆಗೆ ಅತುಕೊಂಡು, ಆತ ಗಂಟೆಗಟ್ಟಲೆ

ಪ್ರಾಣವನ್ನು ಕೈಯಲ್ಲಿ ಹಿಡಿದುಕೊಂಡು ನಿಲ್ಲಬೇಕಾಗುತ್ತಿತ್ತು. ಎದುರಿಗೆ, ಎರಡೇ ಹೆಜ್ಜೆ ಮುಂದೆ, ಆ ಕರಡಿ ಕೋಪೋದ್ರೇಕಿತವಾಗಿ, ಗರ್ಜಿಸುತ್ತಾ, ನೆಗೆದಾಡುತ್ತಾ, ಹಿಂಗಾಲುಗಳ ಮೇಲೆ ಮೆಟ್ಟನಿಂತುಕೊಂಡು ಮುಂಗಾಲುಗಳನ್ನು ಮುಂದೂಡಿ ಆತನನ್ನು ಸೆರೆಹಿಡಿಯಲು ಯತ್ನಿಸುತ್ತಾ, ಹಗ್ಗವನ್ನು ಕಟ್ಟಿ ಬಿಡಿಸಿಕೊಂಡು ಆತನ ಮೇಲೆರಗಲು ಸರ್ವಪ್ರಯತ್ನ ಮಾಡುತ್ತಿದ್ದಿತ್ತು. ಇಂತಹ ಅತಿ ಕ್ರೂರ, ಸಂದಿಗ್ಧ ಪರಿಸ್ಥಿತಿಯಲ್ಲಿ ಆ ಬಡಪಾಯಿ ಒಮ್ಮೊಮ್ಮೆ ಮೂರು–ನಾಲ್ಕು ಗಂಟೆಗಳವರೆಗೂ ನಿಲ್ಲಬೇಕಾಗುತ್ತಿತ್ತು. ಪೆಟ್ರೋವಿಚ್, ಇದನ್ನೆಲ್ಲಾ ಹೊರಗೆ ನಿಂತು ನೋಡುತ್ತಾ ಮನಸ್ಸು ತಣಿಯುವ ತನಕ ಆನಂದ ಪಡುತ್ತಿದ್ದ. ಈ ರಷ್ಯನ್ 'ಸಂಭಾವಿತ' ಸಾಮಂತ ಪ್ರಭುವಿನ 'ಉನ್ನತ' ಮಟ್ಟದ ಮನರಂಜನ ಕಾರ್ಯಕ್ರಮಗಳು ಇಂಥವಾಗಿದ್ದುವು!

ಫ್ರೆಂಚ್ ಶಿಕ್ಷಕ ದಿ–ಫಾರ್ಗ್ ಬಂದ ಕೆಲವು ದಿನಗಳಾದ ಮೇಲೆ ಪೆಟ್ರೋವಿಚ್‌ಗೆ ಇದ್ದಕ್ಕಿದ್ದಂತೆಯೇ ಆತನ ನೆನಪಾಯಿತು. ಹೊಸಬನೊಬ್ಬ ಬಂದಿರುವಾಗ ಕರಡಿಯ ಕೋಣೆಯ ರುಚಿಯನ್ನು ಅವನಿಗೆ ಏಕೆ ತೋರಿಸಬಾರದು ಎನಿಸಿತು ಅವನಿಗೆ. ಹಾಗೆ ನಿರ್ಧರಿಸಿ, ಅದಕ್ಕಾಗಿಯೇ ಒಂದು ದಿನ ಬೆಳಿಗ್ಗೆ ಆ ಶಿಕ್ಷಕನಿಗೆ ಹೇಳಿಕಳುಹಿಸಿದ. ಅವನನ್ನು ಕರೆದುಕೊಂಡು ಸುರಂಗ ಮಾರ್ಗಗಳಂತೆ ಕತ್ತಲೆಮಯವಾಗಿದ್ದ ಹಾದಿಯ ಮೂಲಕ ಹೋದ. ಸ್ವಲ್ಪ ಹೊತ್ತು ನಡೆದ ಮೇಲೆ ಅಲ್ಲಿಯೇ ಇದ್ದ ಒಂದು ಕೋಣೆಯ ಬಾಗಿಲು ಕೂಡಲೇ ತೆರೆಯಲ್ಪಟ್ಟಿತು. ಇಬ್ಬರು ಸೇವಕರು ಆ ಶಿಕ್ಷಕನನ್ನು ಒಳಕ್ಕೆ ತಳ್ಳಿ, ಹೊರಗಿನಿಂದ ಬೀಗ ಹಾಕಿಕೊಂಡರು. ದಿಗ್ಭ್ರಾಂತನಾಗಿ, ಗಾಬರಿಯಿಂದ ಆ ಶಿಕ್ಷಕ ಸ್ವಲ್ಪ ಹೊತ್ತು ಹಾಗೇ ನಿಂತುಕೊಂಡಿದ್ದು, ಕಣ್ಣು ಬಿಟ್ಟು ನೋಡುತ್ತಾನೆ—ಹತ್ತಿರದಲ್ಲೇ ಅವನ ಮುಂದೆ ಸರಪಳಿಯಿಂದ ಕಟ್ಟಿದ ಕರಡಿಯೊಂದು ಬುಸುಗುಟ್ಟುತ್ತಾ, ಮೂಸಿನೋಡುತ್ತಾ ಅವನನ್ನೇ ದುರುಗುಟ್ಟಿಕೊಂಡು ನೋಡುತ್ತಿದೆ! ಅನಂತರ ಅದು ಹಿಂಗಾಲುಗಳ ಮೇಲೆ ಎದ್ದು ನಿಂತು, ಸರಪಣಿಯನ್ನು ಎಳೆದುಕೊಳ್ಳುತ್ತಾ ಮುಂದೆ ಬಂದು ಅವನ ಮೇಲೆ ಹಾರಲು ಹವಣಿಸಿತು.... ಆ ಫ್ರೆಂಚ್ ಶಿಕ್ಷಕ ತುಂಬ ಧೈರ್ಯಶಾಲಿ. ಸ್ವಲ್ಪವೂ ಭಯಪಡದೆ, ಹಿಮ್ಮೆಟ್ಟದೆ, ಆ ಕರಡಿ ತನ್ನ ಮೇಲೆ ಹಾರಿ ಬೀಳುವ ಸಮಯವನ್ನೇ ಕಾದು ನೋಡುತ್ತಿದ್ದ. ಕರಡಿ ಸಮೀಪಕ್ಕೆ ಬಂತು. ಕೂಡಲೇ

ಆತ ಕಿಸೆಯಿಂದ ಸಣ್ಣ ಪಿಸ್ತೂಲೊಂದನ್ನು ಹೊರತೆಗೆದು, ಆ ಹಸಿದ ಕರಡಿಯ ಕಿವಿಗೆ ನೇರವಾಗಿ ಹಿಡಿದು, ಗುಂಡು ಹಾರಿಸಿದ. ಕರಡಿ ಸತ್ತು ಬಿದ್ದಿತು. ಕೋಣೆಯ ಬಾಗಿಲು ತೆರೆಯಲ್ಪಟ್ಟಿತು. ಹೊರಗೆ ನಿಂತಿದ್ದವರೆಲ್ಲಾ ಕೋಣೆಯೊಳಕ್ಕೆ ಓಡಿ ಬಂದರು. ಪೆಟ್ರೋವಿಷ್‌ನೂ ಒಳಬಂದು, ತನ್ನ ವಿನೋದಕ್ರೀಡೆ ಹೀಗೆ ಕೊನೆಗೊಂಡುದನ್ನು ಕಂಡು ಆಶ್ಚರ್ಯ ಚಕಿತನಾದ.

ದಿ–ಫಾರ್ಗ್‌ನಿಗೆ ಯಾರೋ ಮುಂಚಿತವಾಗಿಯೇ ಈ ಕರಡಿಯ ಗುಟ್ಟನ್ನು ತಿಳಿಸಿರಬೇಕೆಂದು ಪೆಟ್ರೋವಿಷ್‌ಗೆ ಶಂಕೆ ಬಂತು. ಆತನನ್ನೇ ಕೇಳಬೇಕೆಂದು ಇಚ್ಛಿಸಿದ. ಯಾರು ಆತನಿಗೆ ಆ ಗುಟ್ಟನ್ನು ಬಿಟ್ಟುಕೊಟ್ಟದ್ದು? ಆತ ಏತಕ್ಕಾಗಿ ಪಿಸ್ತೂಲನ್ನು ಕಿಸೆಯಲ್ಲಿಟ್ಟುಕೊಂಡಿದ್ದ?

—ಪೆಟ್ರೋವಿಷ್‌ಗೆ ಸಂಪೂರ್ಣವಾಗಿ ಮಾಹಿತಿ ಬೇಕಾಗಿತ್ತು. ದ್ವಿಭಾಷಿಯಾಗಿ ವರ್ತಿಸಲು ಮಾಷಾಳಿಗೆ ಹೇಳಿಕಳುಹಿಸಿದ. ಆಕೆಯೂ ಘಟನೆ ಜರುಗಿದ ಸ್ಥಳಕ್ಕೆ ಆತುರದಿಂದ ಬಂದಳು–ತಂದೆಯ ಮಾತುಗಳನ್ನು ಭಾಷಾಂತರಿಸಿ, ಆ ಫ್ರೆಂಚ್ ಶಿಕ್ಷಕನಿಗೆ ತಿಳಿಸಿದಳು.

"ನನಗೆ ಕರಡಿಯ ವಿಷಯ ಯಾರೂ ಹೇಳಿರಲಿಲ್ಲ. ಮತ್ತೆ, ಪಿಸ್ತೂಲು—ಅದನ್ನು ನಾನು ಯಾವಾಗಲೂ ನನ್ನ ಹತ್ತಿರ ಇಟ್ಟುಕೊಂಡೇ ಇರುತ್ತೇನೆ. ಪರರು ನನ್ನನ್ನು ನಿಂದಿಸುವುದನ್ನಾಗಲೀ, ಅಣಕಿಸುವುದನ್ನಾಗಲೀ ನಾನು ಸಹಿಸೆ. ಅವರನ್ನು ವಿಚಾರಣೆಗೆ ಗುರಿಮಾಡಿ, ಸಮಾಧಾನಕರವಾದ ಉತ್ತರ ಪಡೆಯುವಷ್ಟು ತಾಳ್ಮೆಯೂ ನನಗಿರುವುದಿಲ್ಲ. ಪಿಸ್ತೂಲೇ ಅಂತಹವರಿಗೆ ಉತ್ತರ–ಅದು ನನ್ನ ಬಳಿ ಯಾವಾಗಲೂ ಇದ್ದೇ ಇರುತ್ತದೆ" ಎಂದು ದಿ–ಫಾರ್ಗ್ ಉತ್ತರವಿತ್ತ.

ಇಂತಹ ಸ್ವಾಭಿಮಾನದ, ನಿರ್ಭೀತ ಉತ್ತರ ಕೇಳಿ ಮಾಷಾ ಚಕಿತಳಾಗಿ ಆತನನ್ನೊಮ್ಮೆ ದೃಷ್ಟಿಸಿ ನೋಡಿ, ಆತನ ಮಾತುಗಳನ್ನು ಭಾಷಾಂತರಿಸಿ ತಂದೆಗೆ ಹೇಳಿದಳು. ಕಿರಿಲ್ಲಾ ಪೆಟ್ರೋವಿಷ್ ಮರುಮಾತಾಡದೆ, ಸೇವಕರತ್ತ ತಿರುಗಿ, ಆ ಸತ್ತ ಕರಡಿಯನ್ನು ತೆಗೆದುಕೊಂಡು ಹೋಗಿ ಚರ್ಮ ಸುಲಿಯಬೇಕೆಂದು ಆಜ್ಞೆಯಿತ್ತ. ಆಮೇಲೆ ನೆರೆದಿದ್ದ ಮನೆಮಂದಿಯವರ ಕಡೆ ತಿರುಗಿ, 'ಈತ ತುಂಬ ಬುದ್ಧಿವಂತನೆಂದು ತೋರುತ್ತೆ. ಅಲ್ಲವೇ? ಅಂಜುಬುರುಕನಂತೂ ಅಲ್ಲ. ನಾನು ದೃಢವಾಗಿ ಹೇಳಬಲ್ಲೆ' ಎಂದ. ಈ

ಘಟನೆ ಜರುಗಿದನಂತರ, ಪೆಟ್ರೋವಿಷ್‌ನಲ್ಲಿ ಫ್ರೆಂಚ್ ಶಿಕ್ಷಕನ ಬಗ್ಗೆ ತುಂಬ ವಿಶ್ವಾಸ ಬೆಳೆಯಿತು. ಪುನಃ ಆತನನ್ನು ಪರೀಕ್ಷಿಸುವ, ಕೆಣಕುವ ಗೋಜಿಗೆ ಹೋಗಲಿಲ್ಲ.

ಈ ಘಟನೆ ಜೇರೆಲ್ಲರಿಗಿಂತ ಹೆಚ್ಚಾಗಿ ಮರಯ್ಯಾ ಪೆಟ್ರೋವಿಷ್‌ಳ ಮೇಲೆ ಮಹತ್ವರಿಣಾಮ ಬೀರಿತು. ಸತ್ತ ಕರಡಿಯ ಪಕ್ಕದಲ್ಲಿ ಪ್ರಶಾಂತ ವಾಗಿ ನಿಂತು ಅವಳ ಪ್ರಶ್ನೆಗಳಿಗೆ ಉತ್ತರವೀಯುತ್ತಿದ್ದ ದಿ–ಫಾರ್ಗ್‌ನ ಮೂರ್ತಿ ಚಿತ್ರ ಸದಾ ಆಕೆಯ ಕಣ್ಣು ಮುಂದೆ ಬಂದು ನಿಲ್ಲುತ್ತಿತ್ತು. ಆತ ಆಕೆಯ ಮನಸ್ಸನ್ನು ಸೆರೆಹಿಡಿದಿದ್ದ. ಈಗ ಅವಳಿಗೆ ಅರಿವಾಯಿತು–ಎದೆ ಗಾರತನ, ಘನತೆ, ಆತ್ಮಾಭಿಮಾನ, ಇವು ಕೇವಲ ಶ್ರೀಮಂತಜನರಿಗೇ ಮಿಾಸ ಲಾದ ಲಕ್ಷಣಗಳೇನಲ್ಲ ಎಂದು. ಅಂದಿನಿಂದ ಮಷಾ ಆ ಯುವಕ–ಶಿಕ್ಷಕ ನಲ್ಲಿ ವಿಶೇಷ ಮನ್ನಣೆ–ಗೌರವ ತೋರಿಸತೊಡಗಿದಳು. ಆಕೆ ಆತನಲ್ಲಿಟ್ಟದ್ದ ವಿಶ್ವಾಸವೂ ದಿನೇ ದಿನೇ ವೃದ್ಧಿಯಾಗಿ, ಕೊನೆಗೆ ಅವರಿಬ್ಬರ ಮಧ್ಯೆ ನಿಕಟ ಬಾಂಧವ್ಯ ಬೆಳೆಯಿತು. ಮಾಷಾಳಿಗೆ ಕೋಮಲ ಕಂಠವಿದ್ದಿತು, ಮತ್ತು ಒಳ್ಳೆಯ ಸಂಗೀತಗಾರಳಾಗುವ ಲಕ್ಷಣ ಪಡೆದಿದ್ದಳು. ದಿ–ಫಾರ್ಗ್ ಆಕೆಗೆ ಸಂಗೀತಪಾಠ ಹೇಳಿಕೊಡಲು ಒಪ್ಪಿಕೊಂಡ. ಇಷ್ಟಾದ ಮೇಲೆ, ಇದರ ಪರಿ ಣಾಮ ಏನಾಯಿತೆಂಬುದನ್ನು ಊಹಿಸಲು ನಮ್ಮ ಓದುಗರಿಗೆ ಅಷ್ಟೇನೂ ಕಷ್ಟವಲ್ಲ–ಮಾಷಾ, ಆತನ ಪ್ರೇಮಬಂಧನದಲ್ಲಿ ಸಿಕ್ಕಿಬಿದ್ದಳು. ತನಗೇ ಅರಿ ವಿಲ್ಲದಂತೆಯೇ ಬಂದಿಯಾದಳು.

# ಭಾಗ ಎರಡು

## ೧

ಸಾರ್ವತ್ರಿಕ ರಜಾ ಪ್ರಾರಂಭವಾಗಿ, ನಗರಗಳಲ್ಲಿದ್ದವರು ಹಳ್ಳಿಗಳಿಗೆ ಬರ ಲುಪಕ್ರಮಿಸಿದರು. ಪೆಟ್ರೋವಿಷ್‌ನ ಜಮೀನ್ದಾರಿ-ಹಳ್ಳಿಗೂ ಅನೇಕ ಮಂದಿ ಅತಿಥಿಗಳು ಆಗಮಿಸಿದರು. ಕೆಲವರು ಆತನ ಮನೆಯಲ್ಲೇ ಒಂದು ಪಾರ್ಶ್ವ ದಲ್ಲಿ ಬೀಡುಬಿಟ್ಟರು. ಮತ್ತೆ ಕೆಲವರು, ಪಾರುಪತ್ತೆಗಾರನ ಮನೆಯಲ್ಲೂ, ಇನ್ನು ಕೆಲವರು ಪಾದ್ರಿಯ ಮನೆಯಲ್ಲೂ ತಂಗಿದ್ದರು. ಅಲ್ಲಿಗೂ ಕೆಲವರಿಗೆ ವಸತಿ ಸಾಲದೆ ಹೋಗಿ, ಹಣವಂತರಾದ ರೈತರ ಮನೆಗಳಲ್ಲೂ ಸ್ಥಳ ಹುಡುಕಿಕೊಂಡರು. ಕುದುರೆಯ ಲಾಯಗಳು ಗಾಡಿಯೆಳೆಯುವ ಕುದುರೆ ಗಳಿಂದ ತುಂಬಿದ್ದುವು. ಅಂಗಳದಲ್ಲಿ ಮತ್ತು ಷೆಡ್‌ಗಳಲ್ಲಿ, ಎಲ್ಲಿ ನೋಡಿ ದರಲ್ಲಿ, ವಿವಿಧವಾದ ಗಾಡಿಗಳು ಕಾಣಬರುತ್ತಿದ್ದುವು.

ಪ್ರಾತಃಕಾಲ ಒಂಬತ್ತು ಗಂಟೆಗೆ ಸರಿಯಾಗಿ ಪ್ರಾರ್ಥನೆಗೋಸ್ಕರ ಕ್ರಿಸ್ತ ದೇವಾಲಯದ ಗಂಟೆ ಬಾರಿಸಿತು. ಎಲ್ಲರೂ ದೇವಾಲಯದ ಕಡೆ ಹೊರಟರು. ಆ ದೇವಾಲಯವನ್ನು ಕಿರಿಲ್ಲಾ ಪೆಟ್ರೋವಿಷ್ ಕಟ್ಟಿ ಸಿದ್ದು. ಆತ ದಾನವಾಗಿತ್ತ ವಸ್ತು-ವಾಹನಗಳಿಂದ ಪ್ರತಿವರ್ಷಕ್ಕೊಮ್ಮೆ ಅದು ಶೋಭಾಯಮಾನವಾಗಿ ಕಾಣಿಸಿಕೊಳ್ಳುತ್ತಿತ್ತು. ಶ್ರೀಮಂತ ಉಪಾಸ ಕರ ಸಂಖ್ಯೆಯೇ ಜಾಸ್ತಿಯಾಗಿದ್ದು ದೇವಾಲಯ ತುಂಬಿದ್ದರಿಂದ, ಸಾಧಾ ರಣ ರೈತರು, ಒಳಗೆ ಸ್ಥಳಾವಕಾಶ ಪಡೆಯಲಾಗದೆ, ಹೊರ ಅಂಗಳದಲ್ಲೋ ಪ್ರಾಕಾರದಲ್ಲೋ ನಿಂತು ಪ್ರಾರ್ಥನೆ ಸಲ್ಲಿಸಬೇಕಾಯಿತು. ಪ್ರಾರ್ಥನೆ ಇನ್ನೂ ಶುರುವಾಗಿರಲಿಲ್ಲ. ಪೆಟ್ರೋವಿಷ್‌ನ ಆಗಮನಕ್ಕಾಗಿಯೇ ಎಲ್ಲರೂ ಕಾದು ನಿಂತಿದ್ದರು. ಕೊನೆಗೆ ಆರು ಕುದುರೆಗಳಿಂದ ಎಳೆಯಲ್ಪಟ್ಟ ಕೋಚ್ ಒಂದರಲ್ಲಿ ಪೆಟ್ರೋವಿಷ್ ಬಂದಿಳಿದು ತನಗಾಗಿ ಕಾದಿರಿಸಿದ್ದ ಸ್ಥಳಕ್ಕೆ ಮಗ ಳೊಡನೆ ಠೀವಿಯಿಂದ ಹೋಗಿ ನಿಂತ. ನೆರೆದಿದ್ದ ಗಂಡಸರು-ಹೆಂಗಸರೆಲ್ಲರ ದೃಷ್ಟಿ ಆಕೆಯ ಕಡೆಗೆ ಹರಿಯಿತು. ಗಂಡಸರು ಆಕೆಯ ಸೌಂದರ್ಯವನ್ನು ಕಂಡು ಮುಗ್ಧರಾದರೆ, ಹೆಂಗಸರು ಆಕೆ ಧರಿಸಿದ್ದ ಪೋಷಾಕಿನ ಬೆಡಗನ್ನು ಕಂಡು ಬೆರಗಾದರು. ಪಾರ್ಥನೆ ಪ್ರಾರಂಭವಾಯಿತು. ಚರ್ಚಿಗೆ ಸಂಬಂಧಿ

ಸಿದ ಸಂಗೀತ ಮಂಡಲಿ ವಾದ್ಯಗಳನ್ನು ನುಡಿಸತೊಡಗಿತು. ಕಿರಿಲ್ಲಾ ಪೆಟ್ರೋವಿಚ್‌ನೂ ಮೇಲುಸ್ವರದಲ್ಲಿ, ಅತ್ತ–ಇತ್ತ ನೋಡದೆ, ತದೇಕ ಧ್ಯಾನದಲ್ಲಿ ಮಗ್ನನಾಗಿ, ಧ್ವನಿಗೂಡಿಸಿದ. ಪ್ರಾರ್ಥನೆಯನಂತರ, ಚರ್ಚಿನ ಮುಖ್ಯಪಾದ್ರಿ, ತನ್ನ ಉಪದೇಶ ವಾಣಿಯಲ್ಲಿ, 'ಈ ನಮ್ಮ ದೇವಾಲಯದ ಸಂಸ್ಥಾಪಕ'ರ ಬಗ್ಗೆ ಒತ್ತಿ ಹೇಳಿದಾಗ, ಪೆಟ್ರೋವಿಚ್ ನಿಂತಲ್ಲೇ ಬಾಗಿ ಹೆಮ್ಮೆಯಿಂದ ನಮ್ರತೆ ಸೂಚಿಸುತ್ತಾ, ಅವರ ಕೃತಜ್ಞತೆಗಳನ್ನು ಸ್ವೀಕರಿಸಿದ.

ಪ್ರಾರ್ಥನಾ ಕೂಟ ಮುಗಿಯಿತು. ಪವಿತ್ರವಾದ 'ಕ್ರಾಸ್' ಇದ್ದ ಜಾಗಕ್ಕೆ ಪೆಟ್ರೋವಿಚ್‌ನೇ ಮೊದಲು ಹೋದ. ಅನಂತರ ಎಲ್ಲರೂ ಆತನನ್ನು ಹಿಂಬಾಲಿಸಿದರು. ನೆರೆಹೊರೆಯ ಜಮೀನ್ದಾರರು ಆತನಿಗೆ ಗೌರವ ಸಲ್ಲಿಸಿದರು. ಹೆಂಗಸರೆಲ್ಲರೂ ಮಾಷಾಳನ್ನು ಸುತ್ತುವರೆದು, ಅವಳ ಮೇಲೆ ಪ್ರೀತಿಯ ಮಳೆಗರೆದರು. ತದನಂತರ ಪೆಟ್ರೋವಿಚ್, ಚರ್ಚಿನಿಂದ ಹೊರಬಂದು, ಗಾಡಿಯೊಳಗೆ ಕೂಡುತ್ತಾ, ಅಲ್ಲಿ ನೆರೆದಿದ್ದವರನ್ನೆಲ್ಲಾ ತನ್ನ ಮನೆಗೆ ಭೋಜನಕ್ಕೆ ಆಹ್ವಾನಿಸಿ, ಮನೆಗೆ ತೆರಳಿದ. ಅತಿಥಿಗಳೂ ತಮ್ಮ ತಮ್ಮ ಗಾಡಿಗಳಲ್ಲಿ ಆತನ ಹಿಂದೆ ಹೊರಟರು. ಮನೆಯಲ್ಲಿ ಎಲ್ಲ ಕೋಣೆಗಳೂ ಅತಿಥಿಗಳಿಂದ ತುಂಬಿದ್ದುವು. ಇನ್ನೂ ಅಧಿಕ ಸಂಖ್ಯೆಯಲ್ಲಿ ಅತಿಥಿ–ಅಭ್ಯಾಗತರು ಆಗಮಿಸುತ್ತಲೇ ಇದ್ದರು. ಕೊನೆ ಕೊನೆಯಲ್ಲಿ ಬಂದವರಿಗೆ, ಆ ಗುಂಪಿನ ಮಧ್ಯೆ ಜಾಗ ಬಿಡಿಸಿಕೊಂಡು ತಮ್ಮ ದಾತೃ ಪೆಟ್ರೋವಿಚ್‌ನ ಬಳಿ ಸಾರಿ ಆತನ ಕೃಪಾ ದೃಷ್ಟಿ ಸಂಪಾದಿಸುವುದೂ ತುಂಬ ದುಸ್ತರವಾಗಿತ್ತು. ಸ್ತ್ರೀಯರೆಲ್ಲರೂ ತಮ್ಮ ತಮ್ಮ ಅಂತಸ್ತುಗಳಿಗೆ ತಕ್ಕಂತೆ ಗಾಂಭೀರ್ಯ–ಪ್ರೌಢಿಮೆಗಳನ್ನು ಪ್ರದರ್ಶಿಸುತ್ತಾ, ಅರ್ಧವೃತ್ತಾಕಾರದಲ್ಲಿ ಕುಳಿತಿದ್ದರು. ಅವರು ತೊಟ್ಟಿದ್ದ ಉಡುಪು ಪುರಾತನ ಮಾದರಿಯದಾಗಿದ್ದಿತು. ನವೀನ ಸಂಪ್ರದಾಯಕ್ಕನುಗುಣವಾಗಿರದಿದ್ದರೂ, ಮುತ್ತು–ಹವಳಗಳಿಂದ ಕಾಂತಿಯುತವಾಗಿ, ಅವು ಬಹು ಬೆಲೆಬಾಳುವ ಅರಿವೆಗಳಾಗಿದ್ದುವು. ಗಂಡಸರು ವೋಡ್ಕಾ ಮತ್ತು ಭೋಜ್ಯ ವಸ್ತುಗಳನ್ನಿರಿಸಿದ್ದ ಮೇಜುಗಳ ಸುತ್ತ ನೆರೆದು ತಮ್ಮ ತಮ್ಮಲ್ಲೇ ಬಿರುಸಿನ ವಾಗ್ವಾದಗಳಲ್ಲಿ ತೊಡಗಿದ್ದರು. ದೊಡ್ಡ ಹಜಾರದಲ್ಲಿ ಸುಮಾರು ಎಂಬತ್ತು ಮಂದಿ ಕುಳಿತು ಊಟಮಾಡುವಂತೆ ವ್ಯವಸ್ಥೆ ಮಾಡಲಾಗಿತ್ತು. ಸೇವಕರು ಮೇಜುಗಳ ಮೇಲೆ ವೋಡ್ಕಾ ಮತ್ತು ಮದ್ಯದ ಸೀಸೆಗಳನ್ನು ತಂದಿಡುತ್ತಾ, ಬಟ್ಟೆಯ ಸುಕ್ಕು ಸರಿಪಡಿಸುತ್ತಾ, ಸದ

ಗರದಿಂದ ಓಡಾಡುತ್ತಿದ್ದರು. ಕೊನೆಗೆ, ಭೋಜನಕ್ಕೆ ಎಲ್ಲವನ್ನೂ ಬಡಿಸಿ ಸಿದ್ಧವಾದಾಯಿತೆಂದು ಬಟ್ಲರ್ ಪ್ರಕಟಿಸಿದ. ಕಿರಿಲ್ಲಾ ಪೆಟ್ರೋವಿಷ್, ಅಗ್ರಸ್ಥಾನದಲ್ಲಿ ಕುಳಿತ. ಅವನನಂತರ ಸ್ತ್ರೀಯರು ಅವರವರ ಸಾಮಾಜಿಕ ಅಂತಸ್ತು, ಹಿರಿಮೆಗಳಿಗೆ ತಕ್ಕಂತೆ ಶ್ರೀಮದ್ಗಾಂಭೀರ್ಯದಿಂದ ತಮ್ಮ ಜಾಗಗಳಲ್ಲಿ ಕುಳಿತರು. ಯುವತಿಯರೆಲ್ಲಾ, ಹೆದರಿದ ಚಿಗರೆಗಳ ಗುಂಪಿನಂತೆ, ಒಬ್ಬರಿಗೊಬ್ಬರು ತಗುಲಿಕೊಂಡು ಒತ್ತಾಗಿ, ಗುಂಪಾಗಿ ಒಂದು ಕಡೆ ಕುಳಿತರು. ಅವರ ಎದುರಿಗೆ ಪುರುಷರು ಕುಳಿತರು. ಆ ಮೇಜಿನ ಕಟ್ಟಕಡೆಯಲ್ಲಿ, ಫ್ರೆಂಚ್ ಶಿಕ್ಷಕ ಮತ್ತು ಅವನ ಶಿಷ್ಯ ಬಾಲಕ ಸಾಷಾ ಕುಳಿತರು.

ಪರಿಚಾರಕರು, ಅತಿಥಿಗಳ ಕೀರ್ತಿ–ಪ್ರತಿಷ್ಠೆಗಳಿಗನುಸಾರವಾಗಿ ಬಡಿಸತೊಡಗಿದರು. ಅವರಿಗೆ ಪರಿಚಯವಿರದಿದ್ದವರ ವಿಷಯದಲ್ಲಿ 'ಲವಾಟರ್‌ನ ಪದ್ಧತಿ'*ಯನ್ನು ಅನುಸರಿಸಿದರು. ಅವರ ಪದ್ಧತಿ ಬಹು ಮಟ್ಟಿಗೆ ಫಲಪ್ರದವಾಯಿತು. ಯಾವ ವಿಧವಾದ ಮನಸ್ತಾಪಗಳಿಗೂ ಎಡೆಕೊಡಲಿಲ್ಲ. ತಟ್ಟೆ–ಚಮಚ–ಲೋಟಾಗಳ ಟಣಟಣ ಸದ್ದು ಅತಿಥಿಗಳ ಮಾತುಕತೆಗಳ ಶಬ್ದದೊಂದಿಗೆ ಮಿಳಿತವಾಗಿ ಗೊಂದಲವೆಬ್ಬಿಸಿತ್ತು. ಕಿರಿಲ್ಲಾ ಪೆಟ್ರೋವಿಷ್, ಪ್ರಸನ್ನಚಿತ್ತನಾಗಿ, ಅತಿಥಿಗಳತ್ತ ತನ್ನ ಕೃಪಾಪೂರ್ಣ ನೋಟ ಬೀರುತ್ತಾ, ಬಹು ಶ್ರದ್ಧೆಯಿಂದ ಅತಿಥಿ ಸತ್ಕಾರ ಮಾಡುವ ಉದಾರಿಯೊಬ್ಬ ಅನುಭವಿಸುವಂತಹ ಸಂತೃಪ್ತ ಸಂತೋಷವನ್ನು ವ್ಯಕ್ತಪಡಿಸುತ್ತಿದ್ದ....ಅಷ್ಟು ಹೊತ್ತಿಗೆ ಆರು ಕುದುರೆಗಳಿಂದ ಎಳೆಯಲ್ಪಟ್ಟ ಗಾಡಿಯೊಂದು ಮನೆಯ ಮುಂದಿನ ಅಂಗಳದಲ್ಲಿ ಬಂದು ನಿಂತಿತು.

"ಯಾರು, ಈಗ ಬಂದವರು ?" ಪೆಟ್ರೋವಿಷ್ ವಿಚಾರಿಸಿದ.

"ಅವರು ಆಂತಾನ್ ಪವ್‌ನುಟಿಷ್‌ರವರು" ಎಂದು ಅತಿಥಿಗಳ ಗುಂಪಿನಿಂದ ಅನೇಕ ಸ್ವರಗಳು ಒಟ್ಟಿಗೆ ಉತ್ತರಿಸಿದುವು.

ಬಾಗಿಲು ತೆರೆಯಿತು. ಆಂತಾನ್ ಪವ್‌ನುಟಿಷ್ ಒಳಬಂದ. ವಯಸ್ಸು ಐವತ್ತು. ದಷ್ಟಪುಷ್ಟಾಕೃತಿಯಾದ ಮನುಷ್ಯ. ಸಿಡುಬಿನ ಕಲೆಗಳಿಂದ ತುಂಬಿದ ದುಂಡಾದ ಮುಖ. ಮೂರು ಭಾಗವಾಗಿ ಒಡೆದ ಗಲ್ಲ. ಹುಸಿ

---

* 'ಮುಖ ನೋಡಿ ಮಣೆ ಹಾಕುವ ಪದ್ಧತಿ.'— ಲವಾಟರ್ ಎಂಬಾತ ಹದಿನೆಂಟನೆಯ ಶತಮಾನದಲ್ಲಿ ಸ್ವೀಡನ್ನಿನಲ್ಲಿ ಜೀವಿಸುತ್ತಿದ್ದ. ಆತ ಮುಖ ಲಕ್ಷಣ ಶಾಸ್ತ್ರಜ್ಞನೆಂದು ಹೆಸರುಗಳಿಸಿದ್ದ.

ನಗೆ ಬೀರುತ್ತಾ, ಹೊತ್ತಾದುದಕ್ಕೆ ಕ್ಷಮೆ ಯಾಚಿಸುವವನಂತೆ ಎಲ್ಲರ ಕಡೆಗೂ ನೋಡುತ್ತಾ, ಒಳಹೊಕ್ಕ.

"ಹೊಸದಾಗಿ ಒಂದು ಆಸನವನ್ನು ಇಲ್ಲಿ ತಂದು ಹಾಕಿ" ಎಂದು ಪೆಟ್ರೋವಿಚ್, ಸೇವಕರಿಗೆ ಆಜ್ಞೆಯಿತ್ತು, ಪವ್‌ನುಟಿಚ್‌ನ ಕಡೆ ತಿರುಗಿ, "ಇಲ್ಲಿ ಬನ್ನಿ, ಅಂತಾನ್ ಪವ್‌ನುಟಿಚ್, ಕುಳಿತುಕೊಳ್ಳಿ. ಈಗ ಹೇಳಿ– ನಮ್ಮ ಪ್ರಾರ್ಥನಾ ಕೂಟಕ್ಕೂ ಬರದೆ, ಊಟಕ್ಕೂ ಇಷ್ಟು ಹೊತ್ತಾಗಿ ಬರುತ್ತಿರುವ ನಿಮ್ಮ ವರ್ತನೆಯು ಅರ್ಥವಾದರೂ ಏನೋಂತ. ನಿಮ್ಮಂತ ದೈವಭೀರು ಮತ್ತು ಭೋಜನಪ್ರಿಯರನ್ನು ನಾನು ಕಂಡೇ ಇಲ್ಲ. ಹಾಗಿರುವಾಗ, ಇದೇಕೆ ಈ ಸಾರಿ ಹೀಗಾಯಿತು?" ಎಂದ.

ಪವ್‌ನುಟಿಚ್, ತನ್ನ ಆಸನದಲ್ಲಿ ಕುಳಿತುಕೊಂಡು, 'ನ್ಯಾಪ್‌ಕಿನ್'ನ ತುದಿಯನ್ನು ತನ್ನ ಬಟಾಣಿ–ಹಸುರಿನ ಕೋಟಿನ 'ಬಟನ್‌ಹೋಲ್'ಗೆ ಸಿಕ್ಕಿಸುತ್ತಾ, ಧೈರ್ಯದಿಂದ ವಿವರಣೆಯಿತ್ತ : "ಮಹಾಪರಾಧವಾಯಿತು. ಮನ್ನಿಸಬೇಕು. ಅದು ನನ್ನ ತಪ್ಪೂ ಅಲ್ಲ, ಪೆಟ್ರೋವಿಚ್. ನಾನೇನೋ ಹೊತ್ತಿಗೆ ಸರಿಯಾಗಿಯೇ ಹೊರಟೆ. ಆದರೆ ಇನ್ನೂ ನಾಲ್ಕು–ಐದು ಮೈಲಿ ಬಂದಿರಲಿಲ್ಲ, ಗಾಡಿಯ ಮುಂದಿನ ಚಕ್ರದ ಕಬ್ಬಿಣದ ಬಿಲ್ಲು ಇಬ್ಭಾಗವಾಗಿ ಮುರಿದು ಹೋಯಿತು. ಅದೃಷ್ಟಕ್ಕೆ ನಾನು ಹಳ್ಳಿಯಿಂದ ಬಹು ದೂರವೇನೂ ಬಂದಿರಲಿಲ್ಲ ಆದರೂ ನಮ್ಮ ಸೇವಕರು ಹಳ್ಳಿಗೆ ಹೋಗಿ, ಕಮ್ಮಾರನನ್ನು ಹುಡುಕಿಕರ ತಂದು ಎಲ್ಲವನ್ನೂ ಸರಿಪಡಿಸುವ ಹೊತ್ತಿಗೆ ಸರಿಯಾಗಿ ಮೂರು ಗಂಟೆಗಳ ಕಾಲ ಹಿಡಿಯಿತು. ಏನು ಮಾಡುವುದು, ಬೇರೆ ಮಾರ್ಗವೇ ಇರಲಿಲ್ಲ. ಇದಾದ ಮೇಲೆ, ಹತ್ತಿರದ ಅಡ್ಡದಾರಿ ಹಿಡಿದು, ಆ ಬರ್ಚ್‌ಮರಗಳಿರುವ ಅರಣ್ಯ ಮಾರ್ಗದಲ್ಲಿ ಬಾರಿಣವೆಂದು ಯೋಚಿಸಿದೆ. ಆದರೆ ತುಂಬ ಹೆದರಿಕೆಯಾಯಿತು. ಅದಕ್ಕೋಸ್ಕರವೇ ಬಳಸಿಕೊಂಡು ತಡವಾಗಿ ಬರಬೇಕಾಯಿತು."

"ಓಹೋ, ಹಾಗಾದರೆ ನೀವೊಬ್ಬರು ಅಂಜುಕುಳಿ ಎಂದ ಹಾಗಾಯಿತು! ಸರಿ, ಸರಿ. ಅದು ಏನದು ಹೆದರಿಕೆ? ಯಾರ ಹೆದರಿಕೆ? ಯಾರ ಹೆದರಿಕೆ?" ಎಂದು ಪೆಟ್ರೋವಿಚ್ ಗೇಲಿ ಮಾಡುತ್ತಾ, ಮಾತಿನ ಮಧ್ಯೆ ನುಡಿದ.

"ಯಾರ ಹೆದರಿಕೆ ಅಂತೀರಾ ಪೆಟ್ರೋವಿಚ್? ಯಾಕೆ, ದುಬ್ರೋ

ವ್‌ಸ್ಕಿಯದಲ್ಲದೆ ಮತ್ಯಾರದು! ನೀವು ಎಲ್ಲಿದ್ದೀರಿ ಅಂತ ನಿಮಗೇ ಅರಿವಾಗುವುದಕ್ಕೆ ಮುನ್ನವೇ ನೀವು ಅವನ ಮುಂಗಮುಷ್ಟಿಯಲ್ಲಿ ಸಿಕ್ಕಿಬಿದ್ದಿರುತ್ತೀರ! ಯಾಕೆ, ಇದನ್ನೇನು ಹೊಸದಾಗಿ ಹೇಳಬೇಕೆ? ಎಲ್ಲರಿಗೂ ಅವನ ಸ್ವಭಾವ, ಚಾಳಿ, ಗೊತ್ತೇ ಇದೆ. ಅವನು ಯಾವ ಪ್ರಯಾಣಿಕನನ್ನೂ ಸುಲಭವಾಗಿ ಮುಂದಕ್ಕೆ ಹೋಗುವುದಕ್ಕೆ ಬಿಡುವುದೇ ಇಲ್ಲವಲ್ಲ! ನನ್ನಮೇಲಂತೂ ಅವನ ವಕ್ರದೃಷ್ಟಿ ಕೇಂದ್ರೀಕೃತವಾಗಿದೆ."

"ಯಾಕೆ, ಯಾಕಪ್ಪಾ, ನಿಮ್ಮ ಮೇಲೆ ಅವನ ಕಣ್ಣು?"

"ಯಾಕೆ ನಿಮಗೆ ಚೆನ್ನಾಗಿ ಗೊತ್ತೇ ಇರಬೇಕಲ್ಲ, ಪೆಟ್ರೋವಿಷ್. ಇವ್ಯಾತಕ್ಕೆ–ಅವನ ಗತಿಸಿದ ತಂದೆ ಆಂದ್ರಿ ದುಬ್ರೋವ್‌ಸ್ಕಿಯ ಮೇಲೆ ನಾವು ಮೊಖದ್ದಮೆ ಹೂಡಲಿಲ್ಲವೇ! ಈಗ ಇವನು ಸೇಡು ತೀರಿಸಿಕೊಳ್ಳುತ್ತಿದ್ದಾನೆ. ಆ ಮೊಖದ್ದಮೆಯಲ್ಲಿ, ನಿಮ್ಮ ಮನಸ್ಸಂತೋಷ ಪಡಿಸಲೋಸುಗ....ಅಲ್ಲ. ಅಲ್ಲ....ನಾನು ಹೇಳುವುದು ಏನೂಂದರೆ....ನನ್ನ ಅಂತರಾತ್ಮ ನಿರ್ದೇಶಿಸಿದಂತೆ ಮತ್ತೆ ನ್ಯಾಯ ನಿಷ್ಠೆಗನುಗುಣವಾಗಿ, 'ದುಬ್ರೋವ್‌ಸ್ಕಿ, ಕಿಸ್ತೆನೆವ್‌ಕಾ ಹಳ್ಳಿಯ ನ್ಯಾಯವಾದ ಮಾಲೀಕನಲ್ಲ; ಪೆಟ್ರೋವಿಷ್ ಔದಾರ್ಯದಿಂದ ಆ ಹಕ್ಕನ್ನು ಅನುಭವಿಸುತ್ತಿದ್ದಾನೆ' ಅಂತ ನಾನು ಸಾಕ್ಷ್ಯ ಹೇಳಲಿಲ್ಲವೇ? ಆಂದ್ರಿ ದುಬ್ರೋವ್‌ಸ್ಕಿ ತೀರಿ ಹೋದ. (ದೇವರು ಅವನ ಆತ್ಮಕ್ಕೆ ಶಾಂತಿಯನ್ನೀಯಲಿ!) ಅವನೇ ನನ್ನ ಮೇಲೆ ಮುಯ್ಯಿ ತೀರಿಸಿಕೊಳ್ಳಲು ಪಣ ತೊಟ್ಟಿದ್ದ. ಈಗ ಅವನ ಮಗ ತಂದೆಯ ಆ ಪ್ರತಿಜ್ಞೆಯನ್ನು ಪೂರೈಸುತ್ತಾನೆ. ಇದುವರೆವಿಗೇನೋ ದೇವರು ನನ್ನ ಮೇಲೆ ಕೃಪೆದೋರಿದ್ದಾನೆ. ಈ ದುಬ್ರೋವ್‌ಸ್ಕಿಯ ಕಡೆಯವರು ಇಲ್ಲಿಯ ತನಕ ಎಲ್ಲೋ ಒಂದು ಸಾರಿ ನನ್ನ ಹಗೇವು ಒಂದಕ್ಕೆ ಮುತ್ತಿಗೆ ಹಾಕಿ ಸ್ವಲ್ಪ ದಾನ್ಯ ದೋಚಿಕೊಂಡು ಹೋಗಿದ್ದಾರೆ, ಅಷ್ಟೆ. ಆದರೆ ಒಂದಲ್ಲ ಒಂದು ದಿನ ನನ್ನ ಮನೆಯನ್ನೂ ಕೊಳ್ಳೆ ಹೊಡೆದೇ ಹೊಡೆಯುತ್ತಾರೆ. ನೋಡ್ತಿರಿ ಬೇಕಾದರೆ, ಅವರು ಹಾಗೆ ಮಾಡ್ತಾರೋ ಇಲ್ಲವೋ ಅನ್ನೋದನ್ನ!"

"ಹೌದು, ಹೌದು. ದೇವರಿಗೂ ಚೆನ್ನಾಗಿ ಗೊತ್ತಿದೆ, ನಿಮ್ಮ ಮನೆ ಲೂಟಿಮಾಡಲು ಬಹಳ ಯೋಗ್ಯವಾದುದು ಅಂತ," ಎಂದು ಕಣ್ಣು ಮಿಟುಕಿಸುತ್ತಾ ಹೇಳಿದ ಪೆಟ್ರೋವಿಷ್. "ಒಳ್ಳೆ ಭದ್ರವಾಗಿರುವ ನಿಮ್ಮ ಖಜಾನೆ, ಮೇಲಂಚಿನ ತನಕ ನಗನಾಣ್ಯಗಳಿಂದ ಭರ್ತಿಯಾಗಿರಬೇಕಲ್ಲವೆ?—ನಾನು ಅವನ್ನು ತೋರಿಸಬಲ್ಲೆ ಬೇಕಾದರೆ."

“ಅಯ್ಯೋ, ಅಷ್ಟೇನಿಲ್ಲ ಪೆಟ್ರೋವಿಚ್. ಹಿಂದೆ, ತುಂಬಿದಂತಿರುತ್ತಿತ್ತು. ಈಗ ಎಲ್ಲ ಬರಿದಾಗಿಬಿಟ್ಟಿದೆ.”

“ಓಹೋ, ಅದೆಲ್ಲಾ ಏನು ಹೇಳಬೇಕಾಗಿಲ್ಲ, ಪವ್‌ನುಟೆಷ್! ನಿಮ್ಮ ವಿಷಯ ನಮಗೆಲ್ಲ ಚೆನ್ನಾಗಿ ಗೊತ್ತೇ ಇದೆ.–ನಿಮ್ಮ ಹತ್ತಿರ ಅಷ್ಟೊಂದು ಹಣ ಇದೆಯಲ್ಲ, ಅದನ್ನು ಹೇಗಪ್ಪ ಖರ್ಚು ಮಾಡುತ್ತೀರಾ? ನೀವು ಒಬ್ಬರೇ ಹಂದಿಯ ಹಾಗೆ ತಿಂದುಕೊಂಡು ಜೀವನ ಸಾಗಿಸುತ್ತಿದ್ದೀರೇ ಹೊರತು, ಅತಿಥಿಗಳನ್ನೇನೂ ಕರೆದು ಊಟ ಹಾಕುವುದಿಲ್ಲ. ರೈತರಿಂದಲೂ ರಕ್ತ ಹೀರಿ ಹಿಪ್ಪೆಕಾಯಿ ಮಾಡಿ ಸುಲಿಗೆ ಸುಲಿಯುತ್ತೀರ. ಹಾಗೆ ಸಂಪಾಯವಾದ ಹಣವನ್ನು ಕೂಡಿಹಾಕುವ ಯೋಚನೆಯಲ್ಲದೆ, ಖರ್ಚು ಮಾಡುವ ಯೋಚನೆಯೇ ನಿಮಗೆ ಹೊಳೆಯುವುದಿಲ್ಲ.”

ಪವ್‌ನುಟೆಷ್ ಬಲವಂತ ನಗೆ ಬೀರುತ್ತಾ, ಗೊಣಗುಟ್ಟಿದ; “ಆಗಲಿ, ಆಗಲಿ. ನಿಮ್ಮ ಕಾಲ ಬಂದಿದೆ, ನೀವು ಹಾಸ್ಯ ಮಾಡುತ್ತೀರ! ನಮ್ಮ ಇಂದಿನ ದುರವಸ್ಥೆ ಹೇಳತೀರದು. ನಾವಂತೂ ಪೂರ್ತಿಯಾಗಿ ನಾಶವಾಗಿ ಹೋದೆವು.”

ಹಾಗೆಂದು, ಅಂತಾನ್ ಪವ್‌ನುಟೆಷ್ ಒಂದು ಮೀನಿನ ಸಿಹಿ ತುಣುಕನ್ನು ನುಂಗುತ್ತಾ, ಪೆಟ್ರೋವಿಚ್‌ನ ಅಣಕುಮಾತನ್ನೂ ನುಂಗಿದ!

ಪೆಟ್ರೋವಿಚ್, ಆತನನ್ನು ಅಲ್ಲಿಗೇ ಬಿಟ್ಟುಕೊಟ್ಟು, ಅದೇ ಹೊಸದಾಗಿ ನೇಮಿತವಾಗಿದ್ದ ಫೌಜುದಾರನತ್ತ ತಿರುಗಿದ. ಆತ, ಅವನ ಮನೆಗೆ ಅತಿಥಿಯಾಗಿ ಹಿಂದೆಂದೂ ಬಂದಿರಲಿಲ್ಲ. ಆತ, ಊಟದ ಮೇಜಿನ ತುದಿಯಲ್ಲಿ, ಶಿಕ್ಷಕ ದಿ–ಫಾರ್ಗ್‌ನ ಪಕ್ಕದಲ್ಲಿ ಬಿಮ್ಮನೆ ಕುಳಿತಿದ್ದ.

“ಏನು, ಮಾನ್ಯ ಫೌಜುದಾರರೇ, ದುಬ್ರೋವ್‌ಸ್ಕಿಯನ್ನು ನೀವು ಹಿಡಿಯುತ್ತೀರೋ, ಇಲ್ಲವೋ?”

ಫೌಜುದಾರ ಹಲ್ಲುಕಿಸಿಯುತ್ತಾ ಬಾಗಿ, ತನ್ನ ಗುಲಾಮ ಪ್ರವೃತ್ತಿಯನ್ನು ಪ್ರದರ್ಶಿಸುತ್ತಾ, ತೊದಲುತ್ತಾ, ಮೆಲ್ಲಗೆ ಉಸುರಿದ: “ಪ್ರಯತ್ನಿಸುತ್ತೇವೆ, ಮಹಾಪ್ರಭು.”

“ಹಾಮ್, ನೀವು ಪ್ರಯತ್ನಿಸಿದಿರಿ, ಅದು ಆಯಿತು! ಈಗ ಎಷ್ಟೋ ದಿನಗಳಿಂದ ಪ್ರತಿಯೊಬ್ಬರೂ ಪ್ರಯತ್ನಿಸುತ್ತಲೇ ಇದ್ದಾರೆ. ಅದರ ಕಾಸಿನ ಪ್ರಯೋಜನವಾಗಿಲ್ಲ. ಅಷ್ಟರ ಮೇಲೆ, ನೀವಾದರೂ ಯಾಕೆ ಅವನನ್ನು

ಹಿಡೀತೀರ! ಅವನು ದರೋಡೆ ಮಾಡುತ್ತಿದ್ದಷ್ಟೂ ನಿಮಗೆ ಒಳ್ಳೆ ಚಿನ್ನದ ಗಣಿಯೇ ಸಿಕ್ಕಹಾಗೆ!—ಎಲ್ಲಿಂದಲಾದರೂ ದರೋಡೆಯ ಸುದ್ದಿ ಬಂತೂ ಅಂದರೆ ಸಾಕು, ಅಲ್ಲಿಗೆ ಹೋಗುವುದಕ್ಕೆ ನಿಮಗೆ ಪ್ರಯಾಣದ ಖರ್ಚು, ಬಿಟ್ಟಿ ಕುದುರೆಗಳು, ವಿಚಾರಣೆಯ ನೆಪದಲ್ಲಿ ದೊರಕುವ ಹಣ—ಇವೆಲ್ಲವೂ ನಿಮ್ಮ ಜೇಬುಗಳನ್ನು ಭರ್ತಿಮಾಡುತ್ತವೆ! ಹೀಗಾಗಿ ದುಬ್ರೋವ್‌ಸ್ಕಿ ವಾಸ್ತವವಾಗಿ ನಿಮಗೆ ಅತ್ಯುಪಕಾರಿಯಾಗಿದ್ದಾನೆ. ಅಂಥವನನ್ನು ನೀವೇಕೆ ಹಿಡಿದು ನಾಶಮಾಡುತ್ತೀರ! ನಾನು ಹೇಳೋದು ನಿಜ ಅಲ್ವೇ ಫೌಜುದಾರರೇ?"

"ಹೌದು ಮಹಾಪ್ರಭು. ತಾವು ಹೇಳಿದ್ದು ನಿಜ" ಎಂದು ಫೌಜುದಾರ ಗಾಬರಿಯಿಂದ ಬೇಗ ಹೇಳಿಬಿಟ್ಟ.

ಅತಿಥಿಗಳೆಲ್ಲಾ ಅವನ ಮೂರ್ಖತನವನ್ನು ಕಂಡು ಗಟ್ಟಿಯಾಗಿ ನಗತೊಡಗಿದರು.

ಪೆಟ್ರೋವಿಚ್ ಹೇಳಿದ: "ನನಗೇನೋ ನಮ್ಮ ಈ ಫೌಜುದಾರರನ್ನು ಕಂಡರೆ ಬಹಳ ಇಷ್ಟ. ಅವರ ಪ್ರಾಮಾಣಿಕತೆಯನ್ನು ನಾನು ತುಂಬ ಮೆಚ್ಚಿಕೊಂಡಿದ್ದೇನೆ. ಆದರೂ, ನಮ್ಮ ಹಿಂದಿನ ಫೌಜುದಾರರಾಗಿದ್ದ ತಾರಾಸ್ ಅಲೆಕ್ಸೆಯಿವಿಚ್‌ರನ್ನು ಕಳೆದುಕೊಂಡಿದ್ದು, ಭಾರಿ ನಷ್ಟವಾಯಿತು. ತುಂಬಲಾಗದ ತೆರವೇ ಸರಿ. ಅಂತಹ ದಕ್ಷ ಫೌಜುದಾರರನ್ನು ಅಂದು ಹಾಗೆ ಮನೆಯಲ್ಲಿ ಕೂಡಿಹಾಕಿ ಸುಟ್ಟುಹಾಕದೆ ಇದ್ದಿದ್ದರೆ, ನಮ್ಮ ಜಿಲ್ಲೆಯಲ್ಲಿ ಸದಾ ನೆಮ್ಮದಿ ನೆಲಸಿರುತ್ತಿತ್ತು. ಅದು ಹೋಗಲಿ, ದುಬ್ರೋವ್‌ಸ್ಕಿಯ ಈಚೆಗಿನ ಸುದ್ದಿ ಏನು? ಎಲ್ಲಿ ಕಾಣಿಸಿಕೊಂಡಿದ್ದ ಆತ ಇತ್ತೀಚೆಗೆ?"

"ನಮ್ಮ ಮನೆಗೆ ಬಂದುಬಿಟ್ಟಿದ್ದ, ಪೆಟ್ರೋವಿಚ್ ಮಹಾಶಯ! ಕಳೆದ ಮಂಗಳವಾರ ನನ್ನೊಂದಿಗೆ ಊಟಕ್ಕೂ ಉಳಿದುಕೊಂಡಿದ್ದ" ಎಂದು ಒಬ್ಬ ಹೆಂಗಸಿನ ಆಳವಾದ ಧ್ವನಿ ಉತ್ತರಿಸಿತು.

ಎಲ್ಲರ ಕಣ್ಣುಗಳೂ ಅಲ್ಲಿಯೇ ಕುಳಿತಿದ್ದ ನೇರನುಡಿಯ ಸರಳಸ್ವಭಾವದ ವಿಧವೆ, ಅನ್ನಾಸಾವಿಷ್ನಾಳತ್ತ ಹೊರಳಿದುವು. ಆಕೆ ತನ್ನ ನಿಷ್ಕಪಟ ಹೃದಯ ಮತ್ತು ಕಾರುಣ್ಯ ಮನೋವೃತ್ತಿಯಿಂದಾಗಿ ಎಲ್ಲರ ವಿಶ್ವಾಸಕ್ಕೂ ಪಾತ್ರಳಾಗಿದ್ದಳು. ಆಕೆ ಏನು ವಿವರಣೆ ಕೊಡುವಳು ಎಂದು ಎಲ್ಲರೂ ಕಾತರರಾಗಿ ಕಾಯುತ್ತಿದ್ದರು.

"ಈಗ್ಗೆ ಮೂರು ವಾರಗಳ ಕೆಳಗೆ, ನನ್ನ ಮಗ ವಾನ್ಯೂಷಾಗೆ ಹಣ ಕಳುಹಿಸಹೋಹುಗ, ನಮ್ಮ ಮನೆವಾರ್ತೆಯವನನ್ನು ಅಂಚೆ ಕಚೇರಿಗೆ ಕಳುಹಿಸಿದೆ. ಹೆಚ್ಚು ದುಡ್ಡು ಕಳುಹಿಸಿ, ಮುದ್ದಿಸಿ, ನನ್ನ ಮಗನನ್ನು ಹಾಳು ಮಾಡ್ತಿದ್ದೀನಿ ಅಂತ ಅನ್ನಬೇಡಿ. ಹೆಚ್ಚು ಹಣ ಕಳುಹಿಸಬೇಕೆಂದು ನನಗೆ ಇಷ್ಟವಿದ್ದರೂ ನನ್ನ ಕೈಲಿ ಎಲ್ಲಿ ಸಾಧ್ಯ ಹೇಳಿ. ಆದರೂ, ನಿಮಗೇ ಚೆನ್ನಾಗಿ ಗೊತ್ತಿದೆ. ಪಾಪ, ಮಗು ರಕ್ಷಣಾದಳದಲ್ಲಿ ಅಧಿಕಾರಿಯಾಗಿದ್ದಾನೆ. ಚೆನ್ನಾಗಿ ಬಟ್ಟೆ-ಬರೆ ಹಾಕಿಕೊಂಡು ಜುಮ್ಮಂತ ಇರಬೇಡವೇ. ಅದಕ್ಕೇ ನನಗೆ ಬರೋ ಅಲ್ಪ ಆದಾಯದಲ್ಲೇ ಎಷ್ಟು ಸಾಧ್ಯವೋ ಅಷ್ಟನ್ನು ನನ್ನ ವಾನ್ಯೂಷಾಗೆ ಕಳುಹಿಸಿಕೊಡುತ್ತೇನೆ. ಹಾಗೆಯೇ, ಅಂದು ಎರಡು ಸಾವಿರ ರೂಬಲ್ಲುಗಳನ್ನು ಕಳುಹಿಸಿದ್ದೆ. ಅಲ್ಲಿಗೂ ದುಬ್ರೋವ್‌ಸ್ಕಿಯ ಹೆದರಿಕೆ ಏದೇ ಏದೇ ಮನಸ್ಸಿಗೆ ಬಂತು. "ನಗರ ಹತ್ತಿರದಲ್ಲೇ ಇದೆ—ಏಳು ಫರ್ಲಾಂಗುಗಳು ತಾನೆ! ದೇವರಿದ್ದಾನೆ. ನನಗೆ ಸಹಾಯ ಮಾಡುತ್ತಾನೆ" ಅಂತ ಅಂದುಕೊಂಡು ಕಳುಹಿಸಿಕೊಟ್ಟೆ. ಸಾಯಂಕಾಲವಾಯಿತು. ಮನೆವಾರ್ತೆಯವನು ಹಿಂದಿರುಗಿದ. ಅವನ ಮುಖವೆಲ್ಲ ಬಿಳಚಿಕೊಂಡಿತ್ತು. ಬಟ್ಟೆ ಚಿಂದಿಚಿಂದಿಯಾಗಿತ್ತು. ಕುದುರೆ ಗಾಡಿಯನ್ನು ತೆಗೆದುಕೊಂಡು ಹೋಗಿದ್ದವನು ಪಾದಚಾರಿಯಾಗಿ ವಾಪಸಾಗಿದ್ದ. ನನಗೆ ಉಸಿರೇ ಹೋದಂತಾಯಿತು. 'ಏನು ಏನು ಸಮಾಚಾರ? ಏನಾಯಿತು ನಿನಗೆ?' ಅಂತ ಕೇಳಿದೆ. ಅವನು ಹೇಳಿದ: 'ಅಯ್ಯೋ, ಏನು ಹೇಳೋಣ ತಾಯಿ. ಆ ಖದೀಮರು ನನ್ನಲ್ಲಿದ್ದ ಹಣವನ್ನೆಲ್ಲ ದೋಚಿಬಿಟ್ಟರು. ನನ್ನನ್ನು ಇನ್ನೇನು ಕೊಂದುಬಿಡುವುದರಲ್ಲಿದ್ದರು. ಅವರ ಜೊತೆಯಲ್ಲಿದ್ದ ದುಬ್ರೋವ್‌ಸ್ಕಿ ಕರುಣೆತೋರಿ ಬಿಡಿಸಿದ. ನನ್ನ ಹತ್ತಿರ ಇದ್ದ ಹಣವನ್ನೆಲ್ಲ ಕಸಿದುಕೊಂಡು, ಕುದುರೆಗಾಡಿಗಳನ್ನೂ ಕಿತ್ತುಕೊಂಡುಬಿಟ್ಟರು.' ಇದನ್ನು ಕೇಳಿ ನನಗೆ ದಂಗು ಬಡಿದಂತಾಯಿತು. ಅಯ್ಯೋ ದೇವರೇ, ಇನ್ನು ನನ್ನ ವಾನ್ಯೂಷಾ ದುಡ್ಡಿಗೆ ಏನು ಮಾಡ್ತಾನೆ ಅಂತ ನನಗೆ ತುಂಬ ವ್ಯಸನವಾಯಿತು, ಪೇಚಾಟಕ್ಕಿಟ್ಟುಕೊಂಡಿತು. ಆದರೆ ಬೇರೆ ಏನೂ ಮಾಡುವ ಹಾಗೇ ಇರಲಿಲ್ಲ, ದಿಕ್ಕೇ ತೋಚಲಿಲ್ಲ. ಒಂದು ದಮ್ಮಡಿಯನ್ನೂ ಕಳಿಸಲಾಗಲಿಲ್ಲ. ಎಲ್ಲ ಸಮಾಚಾರಗಳನ್ನೂ ವಿಶದವಾಗಿ ತಿಳಿಸಿ, ಕೇವಲ ಕಾಗದ ಬರೆದು ಸುಮ್ಮನಾದೆ.

"ಒಂದು ವಾರ ಕಳೆಯಿತು, ಎರಡು ವಾರ ಆಯಿತು. ಆಗ ಒಂದು ದಿನ ಇದ್ದಕ್ಕಿದ್ದಂತೆ ನನ್ನ ಮನೆಯ ಮುಂದೆ ಎಲ್ಲಿಂದಲೋ ಒಂದು ಗಾಡಿ ಬಂದು ನಿಲ್ಲುತ್ತೆ! ಸೇನಾಪತಿಯಂತಿದ್ದವರು ಒಬ್ಬರು ಗಾಡಿಯಿಂದಿಳಿದು ಬಂದು ನನ್ನ ನೋಡಬೇಕು ಅಂತಾರೆ. 'ತುಂಬ ಸಂತೋಷ' ಅಂತ ನಾನು ಹೇಳ್ತೀನಿ. ಮೂವತ್ತೈದು ವಯಸ್ಸಿನ, ಕಂದು ಬಣ್ಣದ, ಕರಿಕೂದಲಿನ, ಗಡ್ಡ–ಮೀಸೆ ಬಿಟ್ಟಿದ್ದ, ಕುಲ್ನೆವ್*ನ ಪ್ರತಿರೂಪವೋ ಎನ್ನುವಂತಿದ್ದ ಒಬ್ಬ ಮನುಷ್ಯ ಒಳಕ್ಕೆ ಬರುತ್ತಾರೆ. ಕೀರ್ತಿಶೇಷರಾದ ನನ್ನ ಪತಿ ಇವಾನ್ ಆಂದ್ರಿಯವಿಚ್‌ರ ಹಳೆಯ ಸ್ನೇಹಿತರೆಂದೂ, ಸೈನ್ಯದಲ್ಲಿ ಒಡನಾಡಿಗಳಾಗಿದ್ದರೆಂದೂ ತಮ್ಮನ್ನು ತಾವೇ ಪರಿಚಯ ಮಾಡಿಕೊಂಡರು. ಎಲ್ಲಿಗೋ ಪ್ರಯಾಣ ಹೊರಟವರು ಆ ಊರಿನ ಮೂಲಕ ಹೋಗಬೇಕಾಗಿ ಬಂತೆಂದೂ, ನಾನು ಅಲ್ಲಿರುವುದನ್ನು ತಿಳಿದು, ತಮ್ಮ ಹಳೆಯ ಸ್ನೇಹಿತನ ವಿಧವೆ–ಪತ್ನಿಯನ್ನು ಕಂಡು ಹೋಗೋಣವೆಂದು ಬಂದರೆಂದೂ ತಿಳಿಸಿದರು. ನನ್ನ ಮನೆಯಲ್ಲಿ ಎಷ್ಟು ಸಾಧ್ಯವೋ ಅಷ್ಟು ಸತ್ಕಾರ ನೀಡಿ, ಆತನ ಮುಂದೆ ಊಟ–ತಿಂಡಿ ಮತ್ತು ವೋಡ್ಕಾ ತಂದಿಟ್ಟೆ. ಹಾಗೇ ಅದೂ–ಇದೂ ಮಾತನಾಡುತ್ತಾ, ದುಬ್ರೋವ್‌ಸ್ಕಿಯ ಪ್ರಸ್ತಾಪ ಬಂತು. ನಾನು ಅದೇ ತಾನೇ ಅನುಭವಿಸಿದ್ದ ದುರದೃಷ್ಟ ಸಂಗತಿಯನ್ನು ಹೇಳಿಕೊಂಡೆ. ಅದನ್ನು ಕೇಳಿ ಆತ ಹುಬ್ಬು ಗಂಟಿಕ್ಕಿದ. 'ಇಲ್ಲೇನೋ ವಿಚಿತ್ರ ನಡೆದಿದೆ. ದುಬ್ರೋವ್‌ಸ್ಕಿ, ಹಾಗೆ ಕಂಡಾಪಟ್ಟೆ ಎಲ್ಲರ ಮೇಲೂ ಬೀಳುವುದಿಲ್ಲ; ತನ್ನ ಕೋಪ ಕೆರಳಿಸಿದ ಕೆಲವೇ ಶ್ರೀಮಂತರ ಮೇಲೆ ಮಾತ್ರ ಕೈಮಾಡುತ್ತಾನೆ; ಅದೂ ಅವರ ಎಲ್ಲವನ್ನೂ ಸಂಪೂರ್ಣವಾಗಿ ಕಸಿದುಕೊಳ್ಳದೆ ತನ್ನ ಪಾಲು ಎಷ್ಟೋ ಅಷ್ಟು ಮಾತ್ರ ತೆಗೆದುಕೊಳ್ಳುತ್ತಾನೆ–ಅಂತ ನಾನು ಕೇಳಿದ್ದೇನಲ್ಲ. ಅಲ್ಲದೆ, ಆತ ಕೊಲೆಮಾಡುತ್ತಾನೆ ಅಂತ ಇದುವರೆವಿಗೂ ಯಾರೂ ತಪ್ಪು ಹೊರಿಸಿಲ್ಲವಲ್ಲ! ಇಲ್ಲೇನೋ ಮೋಸ ನಡೆದಿದೆ. ದಯವಿಟ್ಟು ನಿಮ್ಮ ಆ ಮನೆವಾರ್ತೆಯವನಿಗೆ ಹೇಳಿಕಳುಹಿಸಿ.' ಎಂದರು. ನಾನು ಆ ಮನೆವಾರ್ತೆಯವನಿಗೆ ಹೇಳಿಕಳುಹಿಸಿದೆ. ಆತ ಬಂದ. ಸೇನಾಪತಿಯನ್ನು ಕಂಡದ್ದೇ ತಡ, ಗಾಬರಿಯಿಂದ

* ಕುಲ್ನೆವ್ ಎಂಬುವನು, ೧೮೦೮–೯ರ ಸ್ವೀಡನ್ ಮೇಲಿನ ಯುದ್ಧದಲ್ಲಿ ತುಂಬ ಹೆಸರುಗಳಿಸಿದ ಒಬ್ಬ ರಷ್ಯನ್ ಸೇನಾಪತಿ.

ಅವಾಕ್ಕಾಗಿ ನಿಂತ. 'ಎಲ್ಲಿ, ಹೇಳಣ್ಣ ನೋಡೋಣ, ಹೇಗೆ ದುಬ್ರೋವ್‌ಸ್ಕಿ ನಿನ್ನನ್ನು ಸುಲಿಗೆ ಮಾಡಿದ, ಹೇಗೆ ನಿನ್ನನ್ನು ನೇಣುಹಾಕಬೇಕೊಂತಿದ್ದ ಆನೋವನ್ನ' ಎಂದರು ಆತ.

"ನನ್ನ ಮನೆವಾರ್ತೆಯವನು ಹೆದರಿಕೆಯಿಂದ ನಡುಗುತ್ತಾ ಅವರ ಕಾಲುಗಳ ಮೇಲೆ ಬಿದ್ದ. 'ಕ್ಷಮಿಸಿಬಿಡಿ, ನಮ್ಮೊಡೆಯ—ಯಾವುದೋ ಕೆಟ್ಟ ಭೂತ ನನ್ನನ್ನು ಪ್ರೇರೇಪಿಸಿತು—ನಾನು ಸುಳ್ಳು ಹೇಳಿಬಿಟ್ಟೆ' ಎಂದು ಗೋಗರೆದ. 'ಹಾಗಾದರೆ ಅಂದು ಏನೇನು ಆಯಿತು ಅನ್ನೋದನ್ನ ನಿನ್ನ ಒಡತಿಗೆ ವಿವರವಾಗಿ ತಿಳಿಸು. ನಾನು ಕೇಳುತಿರುತ್ತೇನೆ.' ಎಂದು ಗದರಿಸುವ ಧ್ವನಿಯಲ್ಲಿ ಆತ ಎಂದರು. ನನ್ನ ಮನೆವಾರ್ತೆಯವನಿಗೆ ನಾಲಗೆ ಸೇದಿ ಹೋದಂತಾಗಿ, ಪಿಳಿಪಿಳಿ ಕಣ್ಣು ಬಿಡುತ್ತಾ, ಅವಸ್ಥೆಯಿಂದ ಸುಸ್ಥಿತಿಗೆ ಬರಲಾಗದೆ ಒದ್ದಾಡುತ್ತಿದ್ದ. 'ಎಲ್ಲಿ ಹೇಳು. ನೀನು ದುಬ್ರೋವ್‌ಸ್ಕಿಯನ್ನು ಎಲ್ಲಿ ಕಂಡಿದ್ದು?' ಎಂದು ಆತ ಪುನಃ ಪ್ರಶ್ನಿಸಿದರು. 'ಆ ಎರಡು ಬರ್ಚ್‌ಮರಗಳು – ಆ ಮೂಲೆಯಲ್ಲಿವೆಯಲ್ಲ ಎರಡು ಮರಗಳು – ಅಲ್ಲಿ.' 'ಆಮೇಲೆ....ಏನು ಕೇಳಿದ ದುಬ್ರೋವ್‌ಸ್ಕಿ ನಿನ್ನನ್ನು?' 'ನಾನು ಯಾರ ಸೇವಕ, ಎಲ್ಲಿಗೆ ಹೋಗುತ್ತಿದ್ದೇನೆ, ಏತಕ್ಕೆ ಹೋಗುತ್ತಿದ್ದೇನೆ, ಅಂತ ಕೇಳಿದರು.' 'ಸರಿ, ಸರಿ. ಆಮೇಲೆ?' 'ಆಮೇಲೆ ನನ್ನ ಹತ್ತಿರವಿದ್ದ ಕಾಗದ ಮತ್ತು ಹಣವನ್ನು ಕೇಳಿದರು.' 'ಸರಿ.' 'ನಾನು ಕಾಗದ ಮತ್ತು ಹಣವನ್ನು ಅವರಿಗೆ ಒಪ್ಪಿಸಿದೆ.' 'ಅವರು ಅವುಗಳನ್ನು ತಾವೇ ಇಟ್ಟುಕೊಂಡುಬಿಟ್ಟರೋ? ಏನು ಹೇಳಿದರು, ನಿನಗೆ?' 'ತಪ್ಪಾಯ್ತು ಪ್ರಭು, ಮನ್ನಿಸಿಬಿಡಿ.' 'ಅದು ಸರಿ. ನಾನು ಕೇಳಿದ್ದಕ್ಕೆ ಮೊದಲು ಉತ್ತರ ಹೇಳು. ಆಮೇಲೆ ಅವರು ಏನು ಮಾಡಿದರು?' 'ಕಾಗದ ಮತ್ತು ಹಣವನ್ನು ವಾಪಸು ಕೊಟ್ಟರು. ಆಮೇಲೆ, ನಿನ್ನ ದಾರಿ ನೀನು ಹಿಡಿದುಕೊಂಡು ಹೋಗು, ಹಣವನ್ನು ಜೋಪಾನವಾಗಿ ಅಂಚೆ ಕಚೇರಿಗೆ ಮುಟ್ಟಿಸು, ಅಂತ ಅಂದರು.' 'ಮತ್ತೆ, ನೀನು ಏನು ಮಾಡಿದೆ?' 'ಕಾಲಿಗೆ ಬಿದ್ದೆ, ಮಹಾಸ್ವಾಮಿ, ಮಾಫು ಮಾಡಿ.' 'ಆಗಲಿ, ಆಗಲಿ. ನಾನು ನಿನ್ನನ್ನು ವಿಚಾರಿಸಿಕೊಳ್ಳುತ್ತೇನೆ.' ಎಂದು ನಿಷ್ಠುರವಾಗಿ ನುಡಿದು, ನನ್ನ ಕಡೆ ತಿರುಗಿ, 'ಇನ್ನು ನೀವು ಈ ಕೊರಮನ ಪೆಟ್ಟಿಗೆ ಹುಡುಕಿಸಿ—ಇವನನ್ನು ನನ್ನ ವಶಕ್ಕೆ ಕೊಟ್ಟುಬಿಡಿ, ಸರಿಯಾದ ಪಾಠ ಕಲಿಸ್ತೇನೆ. ದುಬ್ರೋವ್‌ಸ್ಕಿ, ಹಿಂದೆ ತಾನೇ ರಕ್ಷಣಾ ಶಾಖೆಯ

ಅಧಿಕಾರಿಯಾಗಿದ್ದ. ಆತ ತನ್ನ ಸಹೋದ್ಯೋಗಿಗೇ ಕೇಡು ಬಯಸಿ–ಅನ್ನೋ ದನ್ನ ಎಲ್ಲರಿಗೂ ಶ್ರುತಪಡಿಸುತ್ತೇನೆ' ಅಂದರು. ಆ ದೊಡ್ಡ ಮನುಷ್ಯ ಯಾರು ಎಂಬುದು ಆಗ ನನಗೆ ಹೊಳೆಯಿತು. ಅವರೊಂದಿಗೆ, ನನ್ನ ಮನೆ ವಾರ್ತೆಯವನ ಮೋಸಕಾರ್ಯದ ಸತ್ಯಾಸತ್ಯತೆಯ ಬಗ್ಗೆ ಚರ್ಚಿಸಲು ಕಾರಣವೇ ಇರಲಿಲ್ಲ. ಅವರ ಕಡೆಯ ಸೇವಕರು ಮನೆವಾರ್ತೆಯವನನ್ನು ಬಂಧಿಸಿ ಗಾಡಿಯೊಳಕ್ಕೆ ತಳ್ಳಿ, ಅವನ ಮನೆಯನ್ನು ಜಪ್ತಿ ಮಾಡಿ, ಹಣ ವನ್ನು ಹೊರತೆಗೆದರು. ಆ ಸೇನಾಪತಿಗಳು ಅಂದು, ಊಟ ಮಾಡಿಕೊಂಡು, ತಕ್ಷಣವೇ ಹೊರಟುಹೋದರು. ಮನೆವಾರ್ತೆಯವನನ್ನು ತಮ್ಮೊಂದಿಗೇ ಕೊಂಡೊಯ್ದರು. ಮಾರನೆಯ ದಿನ, ಅವನನ್ನು ಸಾಯುವನಸಿಗೂ ಚೆನ್ನಾಗಿ ಥಳಿಸಿ, ಓಕ್ ಮರವೊಂದಕ್ಕೆ ಕಟ್ಟಿ ಹಾಕಿದ್ದುದು ಕಂಡು ಬಂತು."

ಎಲ್ಲರೂ, ಅದರಲ್ಲೂ ಪ್ರಾಯಸ್ಥ ಯುವತಿಯರು, ಅನ್ನಾಸಾವಿಷ್ನಾಳ ಕಥೆಯನ್ನು ಮಂತ್ರಮುಗ್ಧರಾದವರಂತೆ ಕೇಳಿದರು. ಅವರಲ್ಲಿ ಬಹುಮಂದಿ ದುಬ್ರೋವ್‌ಸ್ಕಿಯನ್ನು ಒಂದು ಅದ್ಭುತ–ರಮ್ಯ ಕಥಾನಕದ ನಾಯಕನಂತೆ ಪರಿಗಣಿಸಿ ಒಳಗೊಳಗೇ ಆತನಿಗಾಗಿ ಮೆಚ್ಚುಗೆ ಮತ್ತು ವಿಶ್ವಾಸಗಳನ್ನು ವ್ಯಕ್ತಪಡಿಸುತ್ತಿದ್ದರು. ಅದರಲ್ಲೂ ಶ್ರೀಮತಿ ರಾಡ್‌ಕ್ಲಿಫ್‌ಳ ರೋಮಾಂಚಕ ರಹಸ್ಯಮಯ ಕಾದಂಬರಿಗಳನ್ನೇ ಓದಿ ಸದಾ ಹಗಲುಗನಸುಗಳ ಸಾಮ್ರಾಜ್ಯ ದಲ್ಲಿ ಸ್ವೇಚ್ಛೆಯಾಗಿ ವಿಹರಿಸುತ್ತಿದ್ದ ಮರಯ್ಯಾ ಕಿರಿಲ್ಲೋವ್ನಾಳ ಮೇಲೆ ಕಥೆ ವಿಶೇಷವಾಗಿ ಪರಿಣಾಮ ಬೀರಿತು.

"ಹಾಗಾದರೆ, ನಿನ್ನ ಮನೆಗೆ ಬಂದಿದ್ದವರು ದುಬ್ರೋವ್‌ಸ್ಕಿ ಅಂತಲೇ ನಿನ್ನ ಅಭಿಪ್ರಾಯ, ಅನ್ನಾಸಾವಿಷ್ನಾ?" ಎಂದ ಕಿರಿಲ್ಲಾ ಪೆಟ್ರೋವಿಚ್. "ನೀನು ತುಂಬ ತಪ್ಪು ತಿಳಿದುಕೊಂಡಿದ್ದೀಯ. ನಿನ್ನ ಬಳಿಗೆ ಅವತ್ತು ಬಂದಿದ್ದವರು ಯಾರು ಅಂತ ನನಗೆ ಗೊತ್ತಿರದಿದ್ದರೂ, ಅವರು ದುಬ್ರೋ ವ್‌ಸ್ಕಿಯಂತೂ ಅಲ್ಲ ಅನ್ನೋದು ಖಚಿತ."

"ದುಬ್ರೋವ್‌ಸ್ಕಿ ಅಲ್ಲ ಅಂತೀರಾ, ಯಜಮಾನರೇ? ಮುಖ್ಯ ರಸ್ತೆ ಗಳಲ್ಲೆಲ್ಲಾ ಓಡುತ್ತಾ, ದಾರಿ ಮಧ್ಯದಲ್ಲೇ ಪ್ರಯಾಣಿಕರನ್ನು ಹಿಡಿದು, ಶೋಧನೆಗೆ ಗುರಿ ಮಾಡುವವನು ಅವನಲ್ಲದೆ ಮತ್ತೆ ಯಾರು ಅಂತ?"

"ಅದೇನೋ ನನಗೆ ತಿಳಿಯದು. ಆದರೆ ದುಬ್ರೋವ್‌ಸ್ಕಿಯಂತೂ ಅಲ್ಲ ಅಂತ ನಾನು ಧೈರ್ಯವಾಗಿ ಹೇಳಬಲ್ಲೆ. ಅವನು ಚಿಕ್ಕ ಮಗುವಾಗಿ

ದ್ದಾಗ ನೋಡಿದ ಜ್ಞಾಪಕ ನನಗೆ. ನಾನು ಊಹಿಸುವ ಮಟ್ಟಿಗೆ, ಈಗ ಅವನ ಕೂದಲೇನೋ ಕಪ್ಪಗಾಗಿರಬಹುದು, ಆದರೆ ಅವನು ಸುಂದರವಾಗಿದ್ದ, ಗುಂಗುರುಕೂದಲಿನ ಹುಡುಗನಾಗಿದ್ದ. ಒಂದು ವಿಷಯ ಮಾತ್ರ ನನಗೆ ಚೆನ್ನಾಗಿ ಗೊತ್ತು; ನಮ್ಮ ಮಾಷಾಳಿಗಿಂತ ಅವನು ವಯಸ್ಸಿನಲ್ಲಿ ಐದುವರ್ಷ ದೊಡ್ಡವನು. ಆದ್ದರಿಂದ ಈಗ ಅವನಿಗೆ ಇಪ್ಪತ್ತೈದು ವಯಸ್ಸಾಗಿರಬೇಕೇ ಹೊರತು, ಮೂವತ್ತೈದಲ್ಲ."

"ನೀವು ಹೇಳಿದ್ದು ಸತ್ಯವಾದ ಮಾತು, ಮಹಾಪ್ರಭು" ಎಂದು ಫೌಜುದಾರ ಬಾಯಿಹಾಕಿದ. "ವ್ಲಾಡಿಮಿರ್ ದುಬ್ರೋವ್‌ಸ್ಕಿಯ ರೂಪು ಲಕ್ಷಣಗಳನ್ನು ವಿವರಿಸುವ ಪಟ್ಟಿಯೊಂದು ನನ್ನಲ್ಲಿದೆ. ಅದರಲ್ಲೂ, ಅವನು ಇಪ್ಪತ್ತುಮೂರು ವಯಸ್ಸಿನ ಯುವಕ ಎಂದೇ ನಮೂದಾಗಿದೆ."

"ಆಹ್ಹಾ....ಎಲ್ಲಿ, ಅದನ್ನು ಓದು. ನಾವೆಲ್ಲ ಕೇಳಿ ತಿಳಿಕೊಳ್ತೀವೆ. ಅವನ ಲಕ್ಷಣಗಳೇನು ಅಂತ ನಾವೆಲ್ಲ ತಿಳಕೊಂಡಿರೋದೇ ಮೇಲು; —ಯಾವತ್ತಾದರೂ ಅವನು ನಮ್ಮ ಕಣ್ಣಿಗೆ ಬಿದ್ದೇ ಬೀಳುತ್ತಾನೆ. ಆಗ, ಜೈಸೇಜ್ಞಿಯಿದ್ದಲ್ಲಿ, ನಮ್ಮ ಕೈತಪ್ಪಿಸಿಕೊಂಡು ಹೋಗದಂತೆ ಮಾಡಬಹುದು."

ಫೌಜುದಾರ ಜೇಬಿನಿಂದ ಕಮಟು ಹಿಡಿದ ಹಾಳೆಯೊಂದನ್ನು ಹೊರ ತೆಗೆದು, ಬಹು ಮುಖ್ಯವಾದ ಪ್ರಕಟಣೆಯನ್ನು ಹೊರಗೆಡಹುವವನಂತೆ, ಅದನ್ನು ಬಿಚ್ಚಿ, ಸಿಳ್ಳುಹಾಕಿಕೊಂಡು ಹಾಡುವ ಧ್ವನಿಯಲ್ಲಿ ಓದತೊಡಗಿದ:

"ವ್ಲಾಡಿಮಿರ್ ದುಬ್ರೋವ್‌ಸ್ಕಿಯ ಲಕ್ಷಣಗಳು, ಆತನ ಹಿಂದಿನ ಸೇವಕರು ಇತ್ತ ಸಾಕ್ಷ್ಯವನ್ನನುಸರಿಸಿ ರಚಿಸಿದುದು:

"ವಯಸ್ಸು ಇಪ್ಪತ್ತುಮೂರು; ಮಧ್ಯಸ್ಥ ಎತ್ತರ; ಮೋಪಾಗಿ ಕತ್ತರಿಸಿದ ತಲೆಗೂದಲು; ಗಡ್ಡವಿಲ್ಲ; ಕಂದುಬಣ್ಣದ ಕಣ್ಣುಗಳು; ನಯವಾದ ಕೂದಲು; ನೀಳವಾದ ಮೂಗು; ವಿಶೇಷ ಲಕ್ಷಣಗಳು: ಯಾವುವೂ ದೊರೆತಿಲ್ಲ."

"ಅಷ್ಟೇನೇ?" ಪೆಟ್ರೋವಿಚ್ ಕೇಳಿದ.

"ಅಷ್ಟೇ, ಸ್ವಾಮಿ." ಎಂದು ಫೌಜುದಾರ ಹಾಳೆಯನ್ನು ಮಡಿಸಿ, ಕಿಸೆಯಲ್ಲಿ ಸೇರಿಸಿದ.

"ನಾನು ನಿನ್ನನ್ನು ಅಭಿನಂದಿಸುತ್ತೇನಯ್ಯ. ಎಂತಹ ಪ್ರಮುಖ ವಿಷಯಗಳನ್ನು ಸಂಗ್ರಹಿಸಿದ್ದೀಯ! ನೀನಿತ್ತ ವಿವರಣೆಯನ್ನು ಕೇಳಿದ

ಮೇಲೆ ದುಬ್ರೋವ್‌ಸ್ಕಿಯನ್ನು ಎಷ್ಟು ಸುಲಭವಾಗಿ ಕಂಡುಹಿಡಿಯಬಹುದು! ಈಗ ನಮ್ಮಲ್ಲಿ ಯಾರು ಮಧ್ಯಸ್ಥ ಎತ್ತರದವರಾಗಿಲ್ಲ, ಯಾರಿಗೆ ನಯವಾದ ಕೂದಲಿಲ್ಲ, ಯಾರಿಗೆ ನೀಳವಾದ ಮೂಗು ಮತ್ತು ಕಂದುಬಣ್ಣದ ಕಣ್ಣುಗಳಿಲ್ಲ! ನೀನು ದುಬ್ರೋವ್‌ಸ್ಕಿಯೊಂದಿಗೆ ಮೂರು ಘಂಟೆ ಹೊತ್ತು ಮಾತನಾಡು, ನಿನ್ನೊಡನೆ ಮಾತನಾಡಲಿಕ್ಕೆ ದೇವರು ಯಾರನ್ನ ಕಳುಹಿಸಿದ್ದ ಅನ್ನೋದನ್ನ ನೀನೇನಾದರೂ ಊಹಿಸಿದ್ದೇ ಆದಲ್ಲಿ, ನೀನು ಕೇಳಿದ್ದನ್ನು ನಾನು ಕೊಟ್ಟುಬಿಡ್ತೇನಯ್ಯ. ಆಹಾ, ನೀವು ಪೋಲಿಸ್ ಜನರೆಲ್ಲ ಎಂಥ ಮೇಧಾವಿಗಳಯ್ಯ!"

ಫೌಜುದಾರ ಮುಖ ಅಂಗೈ ಅಗಲ ಮಾಡಿಕೊಂಡ. ಮಾತಿಲ್ಲದೆ, ಮುಂದಿದ್ದ ಬೇಯಿಸಿದ ಬಾತುಕೋಳಿ ಮತ್ತು ಪಲ್ಯವನ್ನು ತಿನ್ನತೊಡಗಿದ. ಅಷ್ಟು ಹೊತ್ತಿಗಾಗಲೇ, ಪರಿಚಾರಕರು ಒಂದಾದಮೇಲೊಂದರಂತೆ ಭಕ್ಷ್ಯಗಳನ್ನೆಲ್ಲಾ ಬಡಿಸಿ ಮುಗಿಸಿದ್ದರು. ಇನ್ನು ಕುಡಿತ. ಬಟ್ಟಲುಗಳು ಬರಿದಾಗುವುದೇ ತಡ, ಪುನಃ ಪುನಃ ವೋಡ್ಕಾ ತಂದು ತುಂಬುತ್ತಿದ್ದರು. ಕೌಕಾಷಿಯನ್ ಮದ್ಯವನ್ನೇ, ಶಂಪೇನ್ ಹೆಸರಿನಲ್ಲಿ, ಪ್ರತಿಯೊಬ್ಬ ಅತಿಥಿಗೂ ಮನಸ್ಸು ಪ್ರೀತಿಯಾಗುವಂತೆ ಬಡಿಸಲಾಯಿತು. ಮದ್ಯದ ಬಾಟಲುಗಳ ಕಾರ್ಕುಗಳನ್ನು ತೆಗೆಯುವಾಗ ಉಂಟಾದ ಕೀರಲು ಶಬ್ದ ಎಲ್ಲೆಲ್ಲೂ ಕೇಳಿಬರುತ್ತಿತ್ತು. ಮಿತಿಮೀರಿ ಮಧ್ಯಪಾನ ಮಾಡಿದ ಆ ಅತಿಥಿಗಳಿಗೆ ಚೆನ್ನಾಗಿ ಅಮಲೇರಿತು. ಕೆನ್ನೆಗಳಲ್ಲಿ ಕೆಂಪಡರಿತು. ಮಾತುಗಳೂ ಬರಬರುತ್ತ ತಾರಕ್ಕೇರಿದುವು. ಮೋಜು ಹೆಚ್ಚಾದಂತೆಲ್ಲ, ಸನ್ನಿವೇಶ, ಸಂಬಂಧಗಳ ಪರಿಜ್ಞಾನವೇ ಇಲ್ಲದಂತಹ ಮಾತುಕತೆಗಳೂ ಹೆಚ್ಚಾದುವು.

ಪೆಟ್ರೋವಿಷ್ ಮಾತು ಮುಂದುವರೆಸಿದ: "ಅವೆಲ್ಲಾ ಸರಿ, ಹೋಗಲಿ ಬಿಡಿ. ತೀರಿಹೋದ ತಾರಾಸ್ ಅಲೆಕ್ಸೆಯಿವಿಷ್‌ನಂತಹ ಫೌಜುದಾರರನ್ನು ಇನ್ನು ನಾವು ಕಾಣುವುದಕ್ಕೆ ಸಾಧ್ಯವೇ ಇಲ್ಲ. ಅವನು ಯಾವ ಕೆಲಸವನ್ನೂ ಮಾಡದೆ ಇರುತ್ತಿರಲಿಲ್ಲ. ಯಾವ ವಸ್ತುವೂ ಅವನ ಸೂಕ್ಷ್ಮ ಕಣ್ಣುಗಳಿಂದ ತಪ್ಪಿಸಿಕೊಂಡು ಹೋಗಲು ಸಾಧ್ಯವಿರಲಿಲ್ಲ. ಯಾವ ಕಾರ್ಯವನ್ನು ಕೈಕೊಂಡರೂ, ತಪ್ಪಿಲ್ಲದೆ ಬಹು ಚಾಕಚಕ್ಯತೆಯಿಂದ ಸಾಧಿಸುತ್ತಿದ್ದ. ಅಂತಹ ದಕ್ಷ ಅಧಿಕಾರಿಯನ್ನು ಅವರು ಸುಟ್ಟುಹಾಕಿ ಬಿಟ್ಟರಲ್ಲ! ನಿಜವಾಗಲೂ ಅದು ಶೋಚನೀಯವೇ ಸರಿ. ಅವನೇನಾದರೂ ಬದುಕಿದ್ದಿದ್ದರೆ

ಆ ಕಳ್ಳರ ಗುಂಪಿನ ಒಂದು ನರಪಿಳ್ಳೆಗೂ ಅವನ ಹಿಡಿತದಿಂದ ನುಸುಳಿಕೊಂಡು ಹೋಗಲಾಗುತ್ತಿರಲಿಲ್ಲ. ಪ್ರತಿಯೊಬ್ಬನನ್ನೂ ಹಿಡಿದು ಹಾಕಿಬಿಡುತ್ತಿದ್ದ. ದುಬ್ರೋವ್‌ಸ್ಕಿಯಾದರೂ ಸರಿಯೆ, ಹೀಗೆ ಲಂಚ ಕೊಟ್ಟು ಸ್ವಾತಂತ್ರ್ಯಕೊಂಡು ಓಡಾಡುವುದಕ್ಕೆಲ್ಲಿ ಆಗುತ್ತಿತ್ತು. ತಾರಾಸ್ ಅಲೆಕ್ಸೆಯಿವಿಷ್‌ನೂ ಲಂಚವನ್ನೇನೋ ತೆಗೆದುಕೊಳ್ಳುತ್ತಿದ್ದ. ಆದರೆ ಲಂಚ ಕೊಟ್ಟ ಆಸಾಮಿಯನ್ನು ಹಿಡಿಯದೆ ಬಿಡುತ್ತಿರಲಿಲ್ಲ. ಅದೇ ಅವನಲ್ಲಿದ್ದ ಬುದ್ಧಿವಂತಿಕೆ. ಈಗಿನ ಪೋಲೀಸ್ ಅಧಿಕಾರಿಗಳಾರಲ್ಲೂ ಆ ಚಾಣಾಕ್ಯತನ ಇಲ್ಲ. ಇನ್ನೇನು ಮಾಡೋದು, ನಾನೇ ಈ ಪ್ರಕರಣದಲ್ಲಿ ಕೈಹಾಕಿ, ನನ್ನ ಜವಾನರ ಸಹಾಯದಿಂದಲೇ ಆ ದುಷ್ಟರ ಪಡೆಯನ್ನು ಹಿಡಿದು ಹಾಕಬೇಕು ಅಂತ ಕಾಣುತ್ತೆ. ಪ್ರಯೋಗಾರ್ಥವಾಗಿ, ಮೊದಲು ಆಯುಧಪಾಣಿಗಳಾದ ಇಪ್ಪತ್ತು ಮಂದಿಯನ್ನು ನೇಮಕಮಾಡುತ್ತೇನೆ. ಅಷ್ಟೇ ಸಾಕು, ಅವರು ದೌರ್ಜನ್ಯಕಾರರನ್ನೆಲ್ಲಾ ನಿರ್ಮೂಲ ಮಾಡಿ ತೋಪಿನ ಮಧ್ಯೆ ಹಾದು ಹೋಗುವಾಗ ಆ ಹಾದಿಯನ್ನು ಸುಗಮವನ್ನಾಗಿ ಮಾಡುವರು. ನನ್ನ ಚಾಕರರಲ್ಲಿ ಪುಕ್ಕಲುತನವೆಂಬುದು ಇಲ್ಲವೇ ಇಲ್ಲ. ಅವರಲ್ಲಿ ಯಾವನಾದರೂ ಸರಿಯೇ, ಒಬ್ಬಂಟಿಗನಾಗಿಯೇ ಕರಡಿಯೊಡನೆ ಹೋರಬಲ್ಲ. ಅಂಥಾದ್ದರಲ್ಲಿ ಅವರು ಈ ಕಳ್ಳರ ಗುಂಪಿಗೆ ಅಂಜುತ್ತಾರೆಯೆ?"

'ಕರಡಿ' ಎಂಬ ಶಬ್ದ ಕೇಳಿದ ಕೂಡಲೇ, ಆಂತಾನ್ ಪವ್‌ನುಟಿಷ್‌ಗೆ, ಪೆಟ್ರೋವಿಷ್‌ನ ಮನೆಯಲ್ಲಿದ್ದ ಕರಡಿಯ ಜ್ಞಾಪಕ ಬಂತು. ಪೆಟ್ರೋವಿಷ್ ಯಾವ ರೀತಿ ಅದರಿಂದ ಮನೋರಂಜನೆ ಪಡೆಯುತ್ತಿದ್ದ ಎಂಬುದನ್ನು ಆತ ಕಣ್ಣಾರೆ ಕಂಡಿದ್ದ. ಅಷ್ಟೇ ಏಕೆ, ಆತನೇ ಒಮ್ಮೆ ಆ ಕ್ರೂರ ಹಾಸ್ಯಕ್ಕೆ ಆಹುತಿಯಾಗಿ, ಕರಡಿಯಿಂದ ಪರಚಿಸಿಕೊಂಡು ವೇದನೆಯನ್ನು ಅನುಭವಿಸಿದ್ದ. ಆದ್ದರಿಂದ ಆ ಹಳೆಯ ಸ್ನೇಹಿತ—ಕರಡಿಯ ನೆನಪು ಈಗ ಬಂದಿತು. ಕೂಡಲೇ, "ಅಂದಹಾಗೆ, ನಿಮ್ಮ ಕರಡಿ ಹೇಗಿದೆ, ಪೆಟ್ರೋವಿಷ್?" ಎಂದು ಕೇಳಿದ.

"ಕರಡಿ ಬ್ರೂಯಿನ್‌ನ ವಿಷಯವೇ ನೀವು ಕೇಳುವುದು—ಅದು ಸತ್ತು ಎಷ್ಟೋ ಕಾಲವಾಯಿತು. ಅದು ಶತ್ರುವಿನ ಕೈಯಲ್ಲಿ ವೀರಮರಣ ಪಡೆಯಿತು. ಅಲ್ಲಿ ನೋಡಿ, ಅಲ್ಲಿದ್ದಾರೆ, ಅದನ್ನು ಗೆದ್ದವರು" ಎನ್ನುತ್ತಾ

ಪೆಟ್ರೋವಿಷ್, ದಿ–ಫಾರ್ಗ್‌ನತ್ತ ಬೊಟ್ಟು ಮಾಡಿ ತೋರಿಸಿದ. ·ಅವರು, ನಿಮ್ಮ ಪರವಾಗಿ—ಹಾಗೆ ಹೇಳಬಹುದು ತಾನೆ, ಮರೆತಿಲ್ಲ ಅಲ್ಲವೇ ಆ ಪ್ರಸಂಗವನ್ನ!—ನಿಮ್ಮ ಪರವಾಗಿ ಅವರು ಕರಡಿಯ ಮೇಲೆ ಸೇಡು ತೀರಿಸಿಕೊಂಡರು.”

“ಹೌದು, ಹಾಗೇ ಅನ್ನಬಹುದು” ಎನ್ನುತ್ತಾ ತಲೆಯ ಹಿಂಬದಿಯನ್ನು ಕೆರೆದುಕೊಳ್ಳುತ್ತಾ ಪವ್‌ನುಟಿಷ್ ಹೇಳಿದ? “ಹೌದು, ನನಗೆ ಚೆನ್ನಾಗಿ ಜ್ಞಾಪಕವಿದೆ. ಹಾಗಾದರೆ, ಬ್ರೂಯಿನ್ ಸತ್ತಿತು ಅನ್ನಿ. ಅಯ್ಯೋ ಪಾಪ! ದುಃಖವಾಗುತ್ತೆ. ಬಡಪಾಯಿ ಬ್ರೂಯಿನ್! ಎಂತಹ ಉಲ್ಲಾಸಕರವಾದ ಪ್ರಾಣಿಯಾಗಿತ್ತು. ಯಾಕೆ ಆ ಮಹಾಶಯರು ಅದನ್ನು ಕೊಂದದ್ದು ?”

ಕಿರಿಲ್ಲಾ ಪೆಟ್ರೋವಿಷ್, ಕಪಟ ಉತ್ಸಾಹ ತೋರುತ್ತಾ, ಫ್ರೆಂಚ್ ಶಿಕ್ಷಕನ ಸಾಹಸದ ಕಥೆಯನ್ನು ಬಣ್ಣಿಸತೊಡಗಿದ. ತಾನೇ ನಿರ್ಮಿಸಿದ ವಾತಾವರಣ, ತನ್ನದೇ ಆದ ವಸ್ತುಗಳೆಂದರೆ ಪೆಟ್ರೋವಿಷ್‌ನಿಗೆ ಇಲ್ಲದ ಜಂಬ. ಬೇರಾರೂ ಕಾಣದ ಸೊಗಸನ್ನು ತಾನು ಕರಡಿಯಲ್ಲಿ ಕಂಡುಕೊಂಡು, ಹೊಸ ರೀತಿಯಲ್ಲಿ ಅದರ ಉಪಯೋಗ ಪಡೆಯುತ್ತಿದ್ದುದು ಆತನಿಗೆ ಏನೋ ಕೋಡು ಬೆಳೆದಂತಾಗಿದ್ದಿತು. ಅಂತಹ ಕರಡಿಯನ್ನು ಕೊಂದು ಹಾಕಿದುದು, ಮನಸ್ಸಿಗೆ ಸ್ವಲ್ಪ ಕಸವಿಸಿಯಾಗಿದ್ದರೂ, ವಿಧಿಯಿಲ್ಲದೆ, ಶಿಕ್ಷಕನ ಸಾಮರ್ಥ್ಯವನ್ನು ಕೊಂಡಾಡಿ ಮಾತನಾಡಲೇಬೇಕಾಯಿತು. ಅತಿಥಿಗಳು, ಬ್ರೂಯಿನ್‌ನ ವಧೆಯ ಕಥೆಯನ್ನು ಉಸಿರು ಹಿಡಿದುಕೊಂಡು ಕೇಳಿದರು. ಎಲ್ಲರ ದೃಷ್ಟಿಯೂ ದಿ–ಫಾರ್ಗ್‌ನತ್ತ ಸರಿದುವು. ಆತನಾದರೋ, ತನ್ನ ಸಾಹಸದ ಬಗ್ಗೆಯೇ ಎಲ್ಲರೂ ಮಾತನಾಡಿಕೊಳ್ಳುತ್ತಿದ್ದಾರೆ ಎಂಬುದನ್ನೂ ಗಮನಿಸದೆ, ತನ್ನ ಪಕ್ಕದಲ್ಲೇ ಕುಳಿತಿದ್ದ ಶಿಷ್ಯನೊಂದಿಗೆ ಚೇಷ್ಟೆಯಲ್ಲಿ ಮಗ್ನನಾಗಿ ಮೌನದಿಂದ ಕುಳಿತಿದ್ದ.

ಮೂರು ಗಂಟೆಗಳವರೆಗೆ ನಡೆದ ಭೋಜನಕೂಟ ಕೊನೆಗೊಂಡಿತು. ಪೆಟ್ರೋವಿಷ್ ‘ನ್ಯಾಪ್‌ಕಿನ್’ನ್ನು ಮೇಜಿನ ಮೇಲೆ ಇಟ್ಟು ಎದ್ದನು. ಎಲ್ಲರೂ ಎದ್ದು ದಿವಾನಖಾನೆಗೆ ಹೋದರು. ಅಲ್ಲಿ ಕಾಫಿ, ಇಸ್ಪೀಟು ಮತ್ತು ಕುಡಿತ ಅವರಿಗಾಗಿ ಕಾದಿದ್ದುವು.

# ೨

ಸಂಜೆ ಏಳಾಯಿತು. ಅತಿಥಿಗಳಲ್ಲಿ ಕೆಲವರು ತಮ್ಮ ಮನೆಗಳಿಗೆ ಹಿಂದಿರುಗಲು ಅನುವಾದರು. ಆದರೆ ಸುರಾಪಾನದಿಂದ ಮತ್ತನಾಗಿದ್ದ ಪೆಟ್ರೋವಿಷ್, ಬಾಗಿಲು ಮುಚ್ಚ ಹೇಳಿ, ಎಲ್ಲರೂ ಅಂದಿನ ರಾತ್ರಿಯನ್ನು ತನ್ನ ಗೃಹದಲ್ಲೇ ಕಳೆಯಬೇಕೆಂದು ಅಪ್ಪಣೆಯಿತ್ತನು. ಅಷ್ಟು ಹೊತ್ತಿಗೆ ವಾದ್ಯಗೋಷ್ಠಿ ಪ್ರಾರಂಭವಾಯಿತು. ನೃತ್ಯ ಮಂದಿರದ ಬಾಗಿಲು ತೆರೆಯಿತು. ಸಾಮೂಹಿಕ ನೃತ್ಯ ಕ್ರೀಡೆ ಆರಂಭವಾಯಿತು. ಪೆಟ್ರೋವಿಷ್ ತನ್ನ ಹಲವು ಆಪ್ತ ಮಿತ್ರರೊಂದಿಗೆ ಅಲ್ಲೇ ಮೂಲೆಯೊಂದರಲ್ಲಿ ಕುಳಿತು, ಒಂದಾದ ಮೇಲೊಂದು ಲೋಟ ಮದ್ಯಪಾನ ಮಾಡುತ್ತಾ, ತನಗಿಂತ ಎಳೆವಯಸ್ಸಿನ ಯುವಕ, ಯುವತಿಯರು ನೃತ್ಯಕೇಳಿಯಲ್ಲಿ ತೊಡಗಿರುವುದನ್ನು ವೀಕ್ಷಿಸುತ್ತಿದ್ದ. ವೃದ್ಧ ಮಹಿಳೆಯರು ಇಸ್ಪೀಟು ಆಟವಾಡುತ್ತಿದ್ದರು. ಸೈನ್ಯವಿಭಾಗಗಳು ಬೀಡು ಬಿಟ್ಟಿರದ ಪ್ರದೇಶಗಳಲ್ಲೆಲ್ಲಾ ಸಾಧಾರಣವಾಗಿ ನೃತ್ಯಕೂಟಗಳಲ್ಲಿ ಪುರುಷರಿಗಿಂತ ಸ್ತ್ರೀಯರ ಸಂಖ್ಯೆಯೇ ಅಧಿಕವಾಗಿರುತ್ತಿತ್ತು. ಅಂತೆಯೇ ಅಲ್ಲೂ ಸ್ತ್ರೀಯರೇ ಹೆಚ್ಚಾಗಿದ್ದರು. ನೃತ್ಯಕ್ಕೆ ಯೋಗ್ಯರೆಂದು ತೋರಿದ ಪುರುಷರನ್ನೆಲ್ಲಾ ಆಗಲೇ ಸೇರಿಸಿಕೊಳ್ಳಲಾಗಿತ್ತು. ಪುರುಷರಲ್ಲೆಲ್ಲ ಆ ಫ್ರೆಂಚ್ ಶಿಕ್ಷಕನೇ ಬಹು ತೇಜೋವಂತನಾಗಿ ಕಂಗೊಳಿಸುತ್ತಿದ್ದ. ಎಲ್ಲರಿಗಿಂತ ಹೆಚ್ಚಾಗಿ ನರ್ತಿಸಿದ್ದು ಆತನೇ. ಎಲ್ಲ ಹುಡುಗಿಯರಿಗೂ ಅವನ ಮೇಲೇ ಕಣ್ಣು. ಅವನೇ ನೃತ್ಯದಲ್ಲಿ ಜೊತೆಗಾರನಾಗಬೇಕೆಂದು ಪ್ರತಿಯೊಬ್ಬ ಯುವತಿಯ ಹಂಬಲ. ಅವನೊಡನೆ 'ವಾಲ್ಟ್ಸ' ನೃತ್ಯವಾಡಲು ಬಲು ಸೊಗಸೆಂದು ಅವರು ಕಂಡುಕೊಂಡರು. ಆತ ಮತ್ತು ಮರಯ್ಯ ಕಿರಿಲ್ಲೋವ್ನಾ ಜೋಡಿಯಾಗಿ ಅನೇಕ ಬಾರಿ ನರ್ತನ ಮಾಡಿದರು. ನರ್ತಿಸುತ್ತ, ಅವರು ಕೋಣೆಯನ್ನು ಒಂದೊಂದು ಬಾರಿ ಸುತ್ತುಹಾಕಿಕೊಂಡು ಬಂದಾಗಲೂ, ಉಳಿದ ಯುವತಿಯರು ಅವರತ್ತ ಈರ್ಷೆಯಿಂದ ನೋಡುತ್ತಿದ್ದರು. ಈ ನೃತ್ಯ ಸಮಾರಂಭ ಮಧ್ಯರಾತ್ರಿಯವರೆಗೆ ಸಾಗಿತು. ಅಷ್ಟು ಹೊತ್ತಿಗೆ ಪೆಟ್ರೋವಿಷ್‌ಗೆ ಆಯಾಸವಾಯಿತು. ನೃತ್ಯ ನಿಲ್ಲಿಸಿ

ಎಲ್ಲರೂ ರಾತ್ರಿ ಭೋಜನಕ್ಕೆ ತೆರಳಬೇಕೆಂದು ಸೂಚಿಸಿ, ತಾನು ಮಲಗಲಿಕ್ಕೆ ಹೋದ.

ಪೆಟ್ರೋವಿಷ್ ಇಲ್ಲದಿದ್ದುದು ಉಳಿದವರಿಗೆ ಹೆಚ್ಚು ಸ್ವಾತಂತ್ರ್ಯ ಜೀವಕಳೆ ದೊರಕಿದಂತಾಯಿತು. 'ಸಭ್ಯ' ಪುರುಷರು ಸ್ತ್ರೀಯರ ಪಕ್ಕದಲ್ಲೇ ಕೂಡುವ ಧೈರ್ಯ ಮಾಡಿದರು. ಹುಡುಗಿಯರ ಪಿಸುಮಾತು, ಮತ್ತು ಕೇಕೆಗಳೂ ಹೆಚ್ಚಾದುವು. ವೃದ್ಧ ಮಹಿಳೆಯರು ಮೇಜಿನ ಆಚೆ ಈಚೆ, ದೂರ ದೂರವಾಗಿ ಕುಳಿತಿದ್ದರೂ, ಕುಳಿತಲ್ಲಿಂದಲೇ ಗಟ್ಟಿಯಾಗಿ ಲಲ್ಲೆ ಹೊಡೆಯುತ್ತಿದ್ದರು. ಪುರುಷರೂ ಮಿತಿಮೀರಿ ಮದ್ಯಪಾನ ಮಾಡುತ್ತಾ, ವಾದಿಸುತ್ತಾ, ಗಹಗಹಿಸಿ ನಗುತ್ತಾ, ಆನಂದದ ಪರಮಾವಧಿಯನ್ನು ಮುಟ್ಟಿದ್ದರು. ಒಂದು ಮಾತಿನಲ್ಲಿ ಹೇಳುವುದಾದರೆ, ಅಂದಿನ ರಾತ್ರಿಯ ಭೋಜನಕೂಟ ಅತ್ಯಂತ ಸಂತೋಷಕರವಾಗಿದ್ದಿತು, ಮತ್ತು ಚಿರಸ್ಮರಣೀಯವಾದ ಸುಖ ನೆನಪುಗಳನ್ನು ಅತಿಥಿಗಳಲ್ಲಿ ಮೂಡಿಸಿತು.

ಹೀಗೆ ಎಲ್ಲರೂ ಸಂತೋಷದಲ್ಲಿ ಮಗ್ನರಾಗಿರುವಾಗ, ಒಬ್ಬ ಮಾತ್ರ– ಆಂತಾನ್ ಪವ್‌ನುಟಿಷ್ ಮಾತ್ರ – ಜೋಲುಮೋರೆ ಹಾಕಿಕೊಂಡು ಒಂಟಿಯಾಗಿ ಕುಳಿತಿದ್ದ. ಅನ್ಯಮನಸ್ಕನಾಗಿ, ಅತೀವಬೇಸರದಿಂದ ಊಟ ಮಾಡುತ್ತಿದ್ದ. ಅವನ ಮನಸ್ಸಿನಲ್ಲಿ ಏನೋ ಕಳವಳ, ಅಶಾಂತಿಯ ಬಿರುಗಾಳಿ ಎದ್ದಂತೆ ಕಾಣುತ್ತಿತ್ತು. ಕಳ್ಳಕಾಕರರ ಬಗ್ಗೆ ಆಡಿದ ಮಾತುಗಳು ಅವನ ಮನಸ್ಸಿನಲ್ಲಿ ವಿಪರೀತ ಗೊಂದಲವನ್ನೆಬ್ಬಿಸಿದ್ದುವು. ಈ ಭೀತಿ–ಕಳವಳಕ್ಕೆ ಸಾಕಷ್ಟು ಕಾರಣಗಳಿದ್ದುವೆಂಬುದನ್ನು ನಾವು ಶೀಘ್ರದಲ್ಲೇ ಅರಿಯುವೆವು.

ದೇವರಾಣೆಯಿಟ್ಟು, ತನ್ನ ಖಜಾನೆ ಬರಿದೆಂದು ಆಂತಾನ್ ಪವ್‌ನುಟಿಷ್ ಹೇಳಿದಾಗ, ಆತ ಸುಳ್ಳು ಹೇಳಿ ಯಾರನ್ನೂ ವಂಚಿಸಿರಲಿಲ್ಲ. ಖಜಾನೆ ನಿಜಕ್ಕೂ ಖಾಲಿಯಾಗಿಯೇ ಇತ್ತು. ಆದರೆ, ಹಿಂದೆ ಅದರಲ್ಲಿ ತುಂಬಿದ್ದ ಹಣವನ್ನು ಈಗ ಆತ ತನ್ನ ಮೇಲಂಗಿಯ ಒಳಗೆ ಎದೆಗೆ ಹೊಂದಿಕೊಂಡಂತೆ ತೊಟ್ಟಿದ್ದ ಚರ್ಮದ ಚೀಲವೊಂದಕ್ಕೆ ವರ್ಗಾಯಿಸಿದ್ದ. ಇತ್ತೀಚೆಗೆ ಅವನು ತುಂಬ ಸಂಶಯಗ್ರಸ್ತನಾಗಿದ್ದ. ಎಲ್ಲರೂ, ತನ್ನ ಖಜಾನೆಯನ್ನು ಲೂಟಿ ಮಾಡಲು ಹೊಂಚುಹಾಕುತ್ತಿರುವರೆಂಬ ಭೀತಿ ಅವನನ್ನು ನಿರಂತರವಾಗಿ ಕಾಡುತ್ತಿತ್ತು. ಆದ್ದರಿಂದ ಹಣವೆಲ್ಲ ತನ್ನ ಹತ್ತಿರವೇ ಇದ್ದರೆ ಸುರಕ್ಷಿತ

ವೆಂದು ಬಗೆದು ಈ ತಂತ್ರವನ್ನು ಕಂಡುಹಿಡಿದಿದ್ದ. ಎಲ್ಲ ವಿಧವಾದ ಮುನ್ನೆಚ್ಚರಿಕೆಗಳನ್ನೂ ತೆಗೆದುಕೊಂಡು ಹಣವನ್ನು ಸರ್ಪದಂತೆ ಕಾಯುತ್ತಿದ್ದ. ಈಗ ಈ ಪರಸ್ಥಳದಲ್ಲಿ ತಂಗಬೇಕಾಗಿ ಬಂತಲ್ಲ! ಅದೂ, ಕಳ್ಳಕಾಕರು ಸುಲಭವಾಗಿ ನುಗ್ಗಬಹುದಾದ ಯಾವುದೋ ಮೂಲೆಯ ಕೋಣೆಯಲ್ಲಿ ಮಲಗಬೇಕಾಗಿಬಂದಲ್ಲಿ! ಆತನಿಗೆ ಭಯ ಹೆಚ್ಚಾಗಿ, ಯಾರಾದರೂ ಧೈರ್ಯಸ್ಥ ಮತ್ತು ನಂಬಿಕಸ್ಥ ಸಂಗಡಿಗರನ್ನು ಗೊತ್ತು ಮಾಡಿಕೊಳ್ಳಬೇಕೆಂದು ಯೋಚಿಸಿದ. ವಾಸ್ತವವಾಗಿಯೇ, ಅವನ ಕಣ್ಣು ದಿ–ಫಾರ್ಗ್‌ನ ಮೇಲೆ ಬಿದ್ದಿತು. ಹೊರಗಡೆಯ ನೋಟಕ್ಕೇ ಎದ್ದು ಕಾಣುತ್ತಿದ್ದ ಆತನ ಅಂಗಸೌಷ್ಠವ; ಆತ ಕರಡಿಯೊಡನೆ ಹೋರಾಡಿದಾಗ ತೋರಿದ ಧೈರ್ಯದ ಬಗ್ಗೆ ಅವೇ ತಾನೇ ಕೇಳಿದ ವರ್ಣನೆ–ಇವು ಆತನನ್ನೇ ಅಂದು ರಾತ್ರಿ ತನ್ನ ಜೊತೆಗಾವಲಿಗೆ ಇಟ್ಟುಕೊಳ್ಳಬೇಕೆಂದು ಪವ್‌ನುಟಿಷ್ ನಿರ್ಧರಿಸಲು ಕಾರಣಗಳಾದುವು. ಅವನು ಕರಡಿಯೊಡನೆ ಹೋರಾಡಿದ ವರ್ಣನೆಯನ್ನು ನೆನಪಿಗೆ ತಂದುಕೊಂಡು ಪವ್‌ನುಟಿಷ್ ಮತ್ತೊಮ್ಮೆ ಬೆಚ್ಚಿಬಿದ್ದ. ಊಟ ಮುಗಿದ ಮೇಲೆ ಅತಿಥಿಗಳೆಲ್ಲ ಎದ್ದರು. ಪವ್‌ನುಟಿಷ್, ಫ್ರೆಂಚ್ ಶಿಕ್ಷಕನ ಸುತ್ತಲೂ ಅಡ್ಡಾಡುತ್ತ ಆಗಾಗ್ಗೆ ಗಂಟಲು ಸರಿಮಾಡಿಕೊಳ್ಳುವಂತೆ ಕೆಮ್ಮುತ್ತ, ಸಮಯ ಸಿಕ್ಕ ಕೂಡಲೇ ಹೀಗೆ ಕೇಳಿದ: "ಹಂ.... ಈ ರಾತ್ರಿಯನ್ನು ನಾನು ನಿಮ್ಮ ಮನೆಯಲ್ಲಿ ಕಳೆಯಲು ಅವಕಾಶವಿದೆಯೇ, ಮಹಾಶಯ? ಯಾಕೆ ಅಂದರೆ—"

"ಏನು? ಏನು ತಮ್ಮ ಅಭೀಷ್ಟ?" ಎಂದ ದಿ–ಫಾರ್ಗ್, ಅತಿ ವಿನಯದಿಂದ ಅವನ ಮಾತುಗಳನ್ನೇ ಆಲಿಸಿ ಕೇಳುವವನಂತೆ ಬಾಗುತ್ತಾ.

"ಓಹ್, ಎಂತಹ ಅನ್ಯಾಯ ಸ್ವಾಮಿ—ನೀವಿನ್ನೂ ರಷ್ಯನ್ ಕಲಿತೇ ಇಲ್ಲವಲ್ಲ!" ಎಂದು, ಫ್ರೆಂಚ್ ಭಾಷೆಯಲ್ಲಿ ಪುನಃ ಹೇಳಿದ:" ನಾನು ಇಂದು ನಿಮ್ಮ ಮನೆಯಲ್ಲಿ ಮಲಗಬೇಕೆಂದು ಇಚ್ಛಿಸುತ್ತೇನೆ, ಅಪ್ಪಣೆ ಕೊಡುವಿರಾ ಎಂದು ಕೇಳಿದೆ. ಈಗ ಅರ್ಥವಾಯಿತೆ?"

"ಓಹೋ, ಅಗತ್ಯವಾಗಿ ಆಗಬಹುದು. ತಮಗೆ ಏನೇನು ವ್ಯವಸ್ಥೆ ಮಾಡಬೇಕೋ, ಎಲ್ಲಕ್ಕೂ ಆಜ್ಞೆಯೀಯುವುದಾದರೆ...."

ಅಂತಾನ್ ಪವ್‌ನುಟಿಷ್, ಫ್ರೆಂಚ್ ಭಾಷೆಯಲ್ಲಿ ತನಗಿರುವ ಸಾಮರ್ಥ್ಯವನ್ನು ತಾನೇ ಮೆಚ್ಚಿಕೊಂಡು ಸೂಕ್ತವಾದ ಆಜ್ಞೆಗಳನ್ನೀಯಲು ಕೂಡಲೇ ಮುಂದಾದ.

ಅತಿಥಿಗಳೆಲ್ಲ ತಮಗೆ ಕಿರವು ಮಾಡಿ ಕೊಟ್ಟಿದ್ದ ಕೋಣೆಗಳಿಗೆ ಮಲಗ ಲಿಕ್ಕೆ ಹೋಗುವ ಮುನ್ನ ಒಬ್ಬರೊಬ್ಬರಿಗೆ ಸದಾಶಯಗಳನ್ನು ಹೇಳುತ್ತಿದ್ದರು. ಆಂತಾನ್ ಪವ್‌ನುಟಿಷ್, ಫ್ರೆಂಚ್ ಶಿಕ್ಷಕನೊಂದಿಗೆ ಆತನ ಕೋಣೆಗೆ ಹೊರಟ. ಅದು ಕಗ್ಗತ್ತಲಿನ ರಾತ್ರಿಯಾಗಿತ್ತು. ದಿ–ಫಾರ್ಗ್, ಲಾಟೀ ನೊಂದನ್ನು ಹಚ್ಚಿ, ದಾರಿಯ ಉದ್ದಕ್ಕೂ ಬೆಳಕು ಚೆಲ್ಲುತ್ತಾ, ಮುಂದೆ ನಡೆದ. ಆಂತಾನ್ ಪವ್‌ನುಟಿಷ್, ಹಸನ್ಮುಖಿಯಾಗಿ, ಹಣ ಇನ್ನೂ ಸುರಕ್ಷಿತವಾಗಿದೆಯೆಂದು ತನ್ನನ್ನು ತಾನೇ ಸಮಾಧಾನಪಡಿಸಿಕೊಳ್ಳಲು, ಆಗೊಮ್ಮೆ–ಈಗೊಮ್ಮೆ ಅಂಗಿಯ ಒಳಗೆ ತೊಟ್ಟಿದ್ದ ಹಣತುಂಬಿದ ಚರ್ಮದ ಚೀಲವನ್ನು ತನ್ನ ಎದೆಗೆ ಒತ್ತಿ ನೋಡಿಕೊಳ್ಳುತ್ತಾ, ಆತನನ್ನು ಹಿಂಬಾಲಿ ಸಿದ.

ಕೋಣೆಯೊಳ ಹೊಕ್ಕಮೇಲೆ, ಶಿಕ್ಷಕ ಮೇಣದ ಬತ್ತಿಯನ್ನು ಹತ್ತಿ ಸಿದ. ಇಬ್ಬರೂ ಉಡುಪು ಬಿಚ್ಚಿ, ರಾತ್ರಿಯುಡುಪನ್ನು ಧರಿಸುವ ಏರ್ಪಾಟು ಮಾಡಿದರು. ಪವ್‌ನುಟಿಷ್ ಪೋಷಾಕು ಬದಲಿಸುವ ನೆಪದಲ್ಲಿ ರೂಮಿನ ಸುತ್ತ ಅಡ್ಡಾಡುತ್ತಾ, ರೂಮಿನ ಬಾಗಿಲಿಗೆ ಹಾಕಿದ್ದ ಬೀಗ, ಕಿಟಕಿ, ಮೊದ ಲಾದವುಗಳ ಭದ್ರಾಭದ್ರತೆಯನ್ನು ಪರೀಕ್ಷಿಸಿದ. ಬಾಗಿಲಿಗೆ ಒಂದೇ ಒಂದು ಚಿಲಕವಿದ್ದಿತು. ಕಿಟಕಿಗಳಿಗೆ, ಚಳಿಗಾಲದಲ್ಲಿ ಹಾಕುತ್ತಿದ್ದ ಎರಡು ಪದರದ ಗಾಜಿನ ಹಲಗೆಗಳನ್ನು ಇನ್ನೂ ಜೋಡಿಸಿರಲಿಲ್ಲ. ಪವ್‌ನುಟಿಷ್, ತುಂಬ ಅಸಮಾಧಾನಗೊಂಡು ತಲೆಯಲ್ಲಾಡಿಸಿದ. ಈ ಲೋಪದೋಷಗಳನ್ನು ದಿ–ಫಾರ್ಗ್‌ನಿಗೆ ತಿಳಿಸಿ, ಟೀಕಿಸಿ, ಸರಿಪಡಿಸಬೇಕೆನಿಸಿತು. ಆದರೆ, ಅಂತಹ ಕ್ಲಿಷ್ಟ ವಿವರಣೆಗಳನ್ನು ವ್ಯಕ್ತಪಡಿಸಲು, ಅವನಿಗೆ ಬರುತ್ತಿದ್ದ ಹರಕು–ಮುರುಕ ಫ್ರೆಂಚ್ ತೀರ ಅಸಮರ್ಥವಾಯಿತು. ಶಿಕ್ಷಕನಿಗೆ ಪವ್‌ನುಟಿಷ್ ಹೇಳಿದ್ದು ಏನೆಂದು ಅರ್ಥವಾಗಲಿಲ್ಲ. ಆದ್ದರಿಂದ ಗೊಣಗಾಡುವುದನ್ನು ನಿಲ್ಲಿಸಿ, ಪವ್‌ನುಟಿಷ್, ಶಿಕ್ಷಕನ ಹಾಸಿಗೆಯ ಎದುರಿನಲ್ಲಿದ್ದ ಹಾಸಿಗೆಯ ಮೇಲೆ ಉರುಳಿಕೊಂಡ, ಅನಂತರ ಶಿಕ್ಷಕನೂ ತನ್ನ ಹಾಸಿಗೆಯಲ್ಲಿ ಮಲಗಿ, ಮೇಣದ ಬತ್ತಿಯನ್ನು ಊದಿ ಆರಿಸಿದ.

"ಅಯ್ಯೋ, ದೀಪ ಯಾಕೆ ಆರಿಸಿಬಿಟ್ಟಿರಿ? ನಾನು ಈ ಕತ್ತಲಕೋಣೆ ಯಲ್ಲಿ ನಿದ್ದೆ ಮಾಡಲಾರೆ." ಎಂದು ಪವ್‌ನುಟಿಷ್, ಫ್ರೆಂಚ್‌ಭಾಷೆಯಲ್ಲಿ ತನಗಿದ್ದ ಪಾಂಡಿತ್ಯವನ್ನೆಲ್ಲಾ ಖರ್ಚುಮಾಡಿ, ಗಾಬರಿಯಿಂದ, 'ಆರಿಸು'

ಕ್ರಿಯಾ ಪದವನ್ನು ರಷ್ಯನ್ ಭಾಷೆಯಲ್ಲಿ ನಡಸುವಂತೆ ಧಾತುರೂಪ ನಡಸಿ, ಕೂಗಿಕೊಂಡ.

ದಿ-ಫಾರ್ಗ್‌ನಿಗೆ ಅವನ ಪ್ರತಿಭಟನೆ ಅರ್ಥವಾಗಲಿಲ್ಲ. ಆತ ಪದ್ಧತಿಯಂತೆ ಶುಭ ಕೋರಿ ಮಲಗಿದ.

"ಪಾಪಿಷ್ಠ ಪರಕೀಯ! ದೀಪ ಯಾತಕ್ಕೆ ಆರಿಸಬೇಕಾಗಿತ್ತು? ಅವನಿಗೇನವರಿಂದ ಹೆಚ್ಚು ತೊಂದರೆ—ದೀಪ ಇಲ್ಲದೆ ನನಗೆ ನಿದ್ದೆಯೇ ಬರುವುದಿಲ್ಲವಲ್ಲ!" ಎಂದು ಕಂಬಳಿಯನ್ನು ಮೈತುಂಬ ಹೊದ್ದುಕೊಳ್ಳುತ್ತಾ, ಪವ್ ಸುಟಿಷ್ ಗೊಣಗಿಕೊಂಡು ಮಲಗಿದ. ಸ್ವಲ್ಪಹೊತ್ತಿನನಂತರ ಪುನಃ "ಸ್ವಾಮಿ! ಮಹಾಶಯ! ನಾನು ನಿಮ್ಮೊಂದಿಗೆ ಸ್ವಲ್ಪ ಮಾತನಾಡಬೇಕಾಗಿದೆ" ಎಂದು ಕೂಗಿ ಹೇಳಿದ. ಆದರೆ ಆ ಫ್ರೆಂಚ್ ಶಿಕ್ಷಕ ಯಾವ ಉತ್ತರವನ್ನೂ ಕೊಡದೆ ಮಲಗಿ ಗೊರಕೆ ಹೊಡೆಯಲು ಪ್ರಾರಂಭಿಸಿದ.

"ಗೊರಕೆ ಹೊಡೆಯುತ್ತಿದ್ದಾನೆ, ಕತ್ತೆಭಡವಾ! ನಾನು ಇಲ್ಲಿ ಕಣ್ಣೂ ಮುಚ್ಚದೆ ಬಿದ್ದುಕೊಂಡಿದ್ದೇನೆ. ಯಾವ ಗಳಿಗೆಯಲ್ಲಾದರೂ ಸರಿ, ಕಳ್ಳರು ಬೀಗ ಹಾಕದ ಬಾಗಿಲಿನಿಂದಲೋ, ಅಥವಾ ಕಿಟಕಿ ಹತ್ತಿಯೋ, ಒಳಬಂದರೂ ಬರಬಹುದು—ಗುಂಡು ಹೊಡೆದರೂ ಈ ಪ್ರಾಣಿ ಏನೂ ಜಪ್ಪಯ್ಯ ಅನ್ನೋದಿಲ್ಲ," ಎಂದು ಯೋಚಿಸಿದ ಪವ್‌ಸುಟಿಷ್. ವಿಪರೀತ ಗಾಬರಿಯಾಯಿತು.

"ಛೀ, ಪುಣ್ಯಾತ್ಮನೇ!....ಅಯ್ಯೋ ನಿನಗೆ ಪಿಶಾಚಿ ಹಿಡಿಯ! ನಾಶವಾಗಿ ಹೋಗು."

ಪವ್‌ಸುಟಿಷ್ ನಿರಾಶನಾಗಿ ಕೊನೆಗೆ ಸುಮ್ಮನಾಗಬೇಕಾಯಿತು. ಹೆಚ್ಚು ಹೆಚ್ಚಾಗುತ್ತಿದ್ದ ಆಯಾಸ ಮತ್ತು ಕುಡಿತದ ಅಮಲು ನಿಧಾನವಾಗಿ ಹೆದರಿಕೆಯನ್ನು ಹೊಡೆದೋಡಿಸಿದುವು. ಅವನೂ ಗೊರಕೆ ಹೊಡೆಯುತ್ತಾ ಸ್ವಲ್ಪ ಸಮಯದಲ್ಲೇ ಗಾಢ ನಿದ್ರಾಸಕ್ತನಾದ.

ವಿಚಿತ್ರ ರೀತಿಯಲ್ಲಿ ಎಚ್ಚರಗೊಳ್ಳುವುದು ಆತನಿಗಾಗಿ ಕಾದಿತ್ತು. ನಿದ್ದೆಯ ಆ ತನ್ಮಯಾವಸ್ಥೆಯಲ್ಲಿದ್ದಾಗ ಯಾರೋ ತನ್ನ ಅಂಗಿಯ ಕಾಲರ್‌ನ್ನು ಮೆಲ್ಲಗೆ ಎಳೆದು ಬಿಚ್ಚುತ್ತಿದ್ದಂತೆ ಭಾಸವಾಯಿತು, ಗಾಬರಿಯಿಂದ ಕಣ್ಣು ಬಿಟ್ಟ. ಶರದೃತುವಿನ ಮಸುಕು ಮಸುಕಾದ ಬೆಳಕಿನಲ್ಲಿ ತನ್ನ ಮುಂದೆ ದಿ–ಫಾರ್ಗ್ ನಿಂತಿರುವುದು ಅವನಿಗೆ ಗೋಚರವಾಯಿತು. ದಿ—

ಫಾರ್ಗ್‌ನ ಒಂದು ಕೈಲಿ ಕಿಸೆ-ಪಿಸ್ತೂಲಿದ್ದಿತು. ಇನ್ನೊಂದು ಕೈ, ಪವ್‌ನುಟಿಷ್ ತೊಟ್ಟಿದ್ದ ಚರ್ಮದ ಅಂಗಿಯ ಗಂಟನ್ನು ಬಿಚ್ಚುತ್ತಿದ್ದಿತು. ಅಂತಾನ್ ಪವ್‌ನುಟಿಷ್‌ಗೆ ದಂಗು ಬಡಿದಂತಾಯಿತು.

ಭಯಗೊಂಡು ಕಂಪಿಸುವ ಧ್ವನಿಯಲ್ಲಿ ಕೂಗಿಕೊಂಡ : "ಇದು ಏನು? ಏನು ಮಹಾಸ್ವಾಮಿ, ಏನು ಮಾಡುತ್ತಿದ್ದೀರ?"

"ಹುಷ್! ಮಾತಾಡಬೇಡ! ನಾಲಗೆ ಬಿಗಿಹಿಡಿ, ಇಲ್ಲದಿದ್ದರೆ ನಾಶವಾಗೋದು ಖಂಡಿತ. ತಿಳಿ-ನಾನೇ ದುಬ್ರೋವ್‌ಸ್ಕಿ," ಎಂದು ಆ ಶಿಕ್ಷಕ ಸ್ವಚ್ಛವಾದ ರಷ್ಯನ್ ಭಾಷೆಯಲ್ಲಿ ಹೇಳಿದ.

## ೩

ಮೇಲೆ ಹೇಳಿದ ಘಟನೆಗಳು ಹೇಗೆ ಆದುವೆಂಬುದನ್ನು ಅರಿಯಲು ಅವುಗಳ ಹಿನ್ನೆಲೆಯಾಗಿ ಜರುಗಿದ ಕೆಲವು ವಿದ್ಯಮಾನಗಳನ್ನು ವಿವರಿಸುವುದು ಅವಶ್ಯ. ಇದುವರೆಗೂ ಅವುಗಳ ಬಗ್ಗೆ ಹೇಳಲು ನಮಗೆ ಅವಕಾಶ ಸಿಕ್ಕಿರಲಿಲ್ಲ. ಈಗ ಅವುಗಳ ವಿವರಣೆಯನ್ನು ಓದುಗರ ಮುಂದಿಡಲು ಅಪ್ಪಣೆ ಬೇಡುತ್ತೇವೆ.

"X" ಎಂಬ ಸ್ಥಳದ ಅಂಚೆ ಕಚೇರಿಯ ಬಗ್ಗೆ ನಾವು ಈಗಾಗಲೇ ಪ್ರಸ್ತಾಪ ಮಾಡಿದ್ದೇವಷ್ಟೆ-ಅಲ್ಲಿಯ ಪೋಸ್ಟ್ ಮಾಸ್ತರರ ಮನೆಯ ಮೂಲೆಯೊಂದರಲ್ಲಿ ಆಗಂತುಕ-ಪ್ರಯಾಣಿಕನೊಬ್ಬ ಕುಳಿತಿದ್ದ ಆತನ ಮುಖದಲ್ಲಿ ಕಂಡು ಬರುತ್ತಿದ್ದ ಸೌಮ್ಯತೆ ಮತ್ತು ತಾಳ್ಮೆ, ಆತ ಸಮಾಜದ ಗಣ್ಯ ವ್ಯಕ್ತಿಯೆಂದಾಗಲೀ ಅಥವಾ ಅನ್ಯದೇಶೀಯನೆಂದಾಗಲೀ ತೋರಿಸುವಂತಿರಲಿಲ್ಲ. ಅಲ್ಲಿನ ಪೋಸ್ಟ್ ಮಾಸ್ತರರ ದೃಷ್ಟಿಯಲ್ಲಿ ಆತ ಯಾವ ಹಕ್ಕುಗಳಿಗೂ ಭಾದ್ಯನಲ್ಲದ ಸರ್ವೇ ಸಾಮಾನ್ಯ ವ್ಯಕ್ತಿಯಾಗಿದ್ದ. ಆತ ತನ್ನೊಂದಿಗೆ ತಂದಿದ್ದ ಗಾಡಿಯೂ ಚಿಕ್ಕದಾಗಿದ್ದು ಸಾಮಾನ್ಯ ದರ್ಜೆಯದಾಗಿತ್ತು. ಚಕ್ರಗಳಿಗೆ ಎಣ್ಣೆ ಹಾಕಿ, ಒರಸಿಡಲು ಬಂಡಿಯನ್ನು ಹೊರ ಅಂಗಳದಲ್ಲಿ ನಿಲ್ಲಿಸಿದ್ದ. ಅದರಲ್ಲಿ, ಅದರ ಮಾಲೀಕನ ಬಡತನಕ್ಕೆ ಸಾಕ್ಷಿಯೋ ಎಂಬಂತೆ, ಒಂದು ಬಟ್ಟೆಗಳಿಡುವ, ಸಣ್ಣ, ತೊಗಲಿನ ಪೆಟ್ಟಿಗೆಯಿದ್ದಿತು. ಆ ಆಗಂತುಕ ಮನೆಯ ಒಳಬಂದವನೇ, ಕಾಫಿ ಅಥವಾ ಟೀ ಏನನ್ನೂ ಕೇಳದೆ ಕಿಟಕಿಯ

ಬಳಿ ಕುಳಿತು ಆಚೆ ಕಡೆಗೆ ನೋಡುತ್ತಾ, ಶಿಳ್ಳು ಹಾಕುತ್ತಾ ಇದ್ದ. ಮನೆಯ ಅತ್ತ ಗೋಡೆಯ ಅತ್ತ ಕಡೆ ಕೆಲಸ ಮಾಡುತ್ತಿದ್ದ ಪೋಸ್ಟ್ ಮಾಸ್ತರನ ಪತ್ನಿಗೆ ಆತನ ವರ್ತನೆ ಕಂಡು ರೋಸಿಹೋಯಿತು.

"ಈ ಸಿಳ್ಳೇಕ್ಯಾತನನ್ನು ಯಾಕೆ ದೇವರು ನಮ್ಮ ಬಳಿಗೆ ಕಳುಹಿಸಿದನೋ! ಸಿಳ್ಳು ಹಾಕುತ್ತಿದ್ದಾನೆ, ಈ ಪಾಪಿ ಪರದೇಶಿ! ಅವನ ಕರುಳು ಕೊಳೆತು ಹೋಗ!" ಎಂದು ಮೆಲುಧ್ವನಿಯಲ್ಲಿ ಗೊಣಗುಟ್ಟಿದಳು.

"ಏಕೆ ಸಿಳ್ಳು ಹಾಕಬಾರದು? ನಿನಗೇನು ತೊಂದರೆ? ಅವನಿಗೆ ಬೇಕಾದರೆ ಸಿಳ್ಳು ಹಾಕಿಕೊಳ್ಳಲಿ," ಎಂದರು ಪತಿ, ಪೋಸ್ಟ್ ಮಾಸ್ತರು.

"ಏನಾಗುತ್ತೆ ಅಂದಿರಾ? ನಿಮಗೇನು ಗೊತ್ತಿಲ್ವೆ—ಅಪಶಕುನ, ನಮ್ಮ ಭಾಗ್ಯವೆಲ್ಲ ನಾಶವಾಗಿಹೋಗುತ್ತೆ, ಅಂತ?" ಎಂದಳು ಆತನ ಭಾರ್ಯೆ, ರೇಗುತ್ತಾ.

"ಭಾಗ್ಯ ನಾಶವಾಗಿ ಹೋಗುತ್ತೈ? ಸಿಳ್ಳು ಹಾಕಿಬಿಟ್ಟರೆ ನಮ್ಮ ಭಾಗ್ಯದ ಲಕ್ಷ್ಮಿ ಅದೃಶ್ಯಳಾಗಿಬಿಡುತ್ತಾಳೆ ಅಂತಲೇ ನಿನ್ನ ತಿಳಿವಳಿಕೆ? ಅಯ್ಯೋ, ಪಖೋಮೋವ್ನಾ, ಸಿಳ್ಳು ಹಾಕಲಿ, ಬಿಡಲಿ, ನಮ್ಮ ಹಣೆ ಬರಹ ಬದಲಾಗದು—ನಮಗೆ ಯಾವತ್ತಿಗೂ ದುಡ್ಡು ಕೈಹತ್ತೊಲ್ಲ!"

"ದಪ್ಪನನ್ನು ಕಳಿಸಿಬಿಡೀಂಪ್ರೆ, ಆಚೆಗೆ. ಯಾಕೆ ಅವನನ್ನು ಇನ್ನೂ ಇಟ್ಟುಕೊಂಡಿರೋದು? ಕುದುರೆಗಳನ್ನು ಬೇಗ ಒದಗಿಸಿ ಕಳಿಸಿಬಿಡಿ—ತೊಲಗಿ ಹೋಗಲಿ, ಪಿಶಾಚಿ!"

"ಅವನಿಗೇನು ಅವಸರ, ಕಾದು ಬಿದ್ದಿರಲಿ, ಪಖೋಮೋವ್ನಾ! ನಮ್ಮ ಲಾಯದಲ್ಲಿರೋದೆಲ್ಲ ಮೂರೇ ಸಾರೋಟು. ನಾಲ್ಕನೆಯದು ಇದೇ ತಾನೇ ಬಂದು, ಕುದುರೆಗಳು ವಿಶ್ರಾಂತಿ ಪಡೆಯುತ್ತಿವೆ. ಯಾವ ಘಳಿಗೆಯಲ್ಲಾದರೂ ಸರಿ, ಯಾರಾದರೂ ಗಣ್ಯ ಪ್ರಯಾಣಿಕರು ಬರಬಹುದು. ಈ ಫ್ರೆಂಚ್ ಮನುಷ್ಯನಿಗೋಸ್ಕರ ಕತ್ತು ಕುಯ್ದುಕೊಳ್ಳಲು ನನಗಿಷ್ಟವಿಲ್ಲ. ಆಕೋ, ಅಲ್ನೋಡು, ನಾನು ಹೇಳಿದ ಹಾಗೇ ಆಯಿತು—ಯಾರೋ ಕುದುರೆಗಳನ್ನು ನಾಗಾಲೋಟದಿಂದ ಓಡಿಸುತ್ತಾ ಇತ್ತ ಕಡೆಗೇ ಬರುತ್ತಿದ್ದಾರೆ. ಅಬ್ಬ, ಎಷ್ಟು ವೇಗವಾಗಿ ಹೊಡೆಯುತ್ತಿದ್ದಾರೆ! ಯಾರೋ ಮುಖ್ಯ ದಳಪತಿಯಾಗಿದ್ದರೂ ಇರಬಹುದು!"

ಅಷ್ಟು ಹೊತ್ತಿಗೆ ಸಾರೋಟೊಂದು ಮನೆಯ ಪ್ರಾಂಗಣದ ಮುಂಭಾಗ

ದಲ್ಲಿ ಬಂದು ನಿಂತಿತು. ಸೇವಕನೊಬ್ಬ ಗಾಡಿಯ ಹಿಂಬದಿಯಿಂದ ಕೆಳಕ್ಕೆ ಧುಮುಕಿ, ಮುಂದೆ ಬಂದು ಬಾಗಿಲು ತೆರೆದ. ಒಂದು ನಿಮಿಷದನಂತರ ಸೈನ್ಯದ ನಿಲುವಂಗಿಯನ್ನು ತೊಟ್ಟು, ಬಿಳಿಯ, ಗೋಪುರದಂತಿದ್ದ ಟೋಪಿಯನ್ನು ಧರಿಸಿದ್ದ ಯುವಕ ವ್ಯಕ್ತಿಯೊಬ್ಬರು ಗಾಡಿಯಿಂದಿಳಿದು ಪೋಸ್ಟ್‌ಮಾಸ್ತರರ ಬಳಿ ಸಾರಿದರು. ಅವರ ಹಿಂದೆಯೇ ಸೇವಕನೊಬ್ಬ ಹಣದ ಪೆಟ್ಟಿಗೆಯನ್ನು ಹೊತ್ತು ತಂದು ಕಿಟಕಿಯ ಕಟಕಟೆಯ ಮೇಲಿಟ್ಟ.

"ಕುದುರೆಗಳು!" ಎಂದ ಆ ಅಧಿಕಾರಿ, ಅಧಿಕಾರವಾಣಿಯಿಂದ.

"ಆಗೋ, ಈ ಗಳಿಗೆಯಲ್ಲೆ!" ಎಂದು ಪೋಸ್ಟ್‌ಮಾಸ್ತರ್ ಉತ್ತರಿಸಿದ. "ದಯವಿಟ್ಟು ತಮ್ಮ ಅಧಿಕಾರದ ಅಂತಸ್ತನ್ನು ತಿಳಿಸೋಣವಾಗಲಿ."

"ಅಧಿಕಾರವೂ ಇಲ್ಲ, ಸುಡುಗಾಡೂ ಇಲ್ಲ. ನಾನು—ಗೆ ಪ್ರಯಾಣ ಹೊರಟಿದ್ದೇನೆ. ನಾನು ಯಾರು ಅಂತ ನಿನಗೆ ಗೊತ್ತಿಲ್ವೆ?"

ಒಂದು ನಿಮಿಷ ಪೋಸ್ಟ್‌ಮಾಸ್ತರರಿಗೆ ದಿಗ್ಭ್ರಮೆ ಹಿಡಿದಂತಾಯಿತು. ಅನಂತರ, ಕುದುರೆಗಳನ್ನು ಜಾಗ್ರತೆ ಸಿದ್ಧಪಡಿಸುವಂತೆ ಹೇಳಲು ಸಾರಥಿಯತ್ತ ಓಡಿದ. ಆ ನವ ಯುವಕ ಕೊಠಡಿಯಲ್ಲಿ ಅತ್ತಿಂದಿತ್ತ ಸ್ವಲ್ಪ ಹೊತ್ತಿನವರೆಗೆ ಅಡ್ಡಾಡುತ್ತಿದ್ದು, ಅನಂತರ ಅಡ್ಡಗೋಡೆಯ ಮತ್ತೊಂದು ಪಾರ್ಶ್ವಕ್ಕೆ ಹೋಗಿ, ಪೋಸ್ಟ್‌ಮಾಸ್ತರನ ಹೆಂಡತಿಯನ್ನು, 'ಹೊರಗಡೆ ಕುಳಿತಿರುವ ಆ ಆಗಂತುಕ ಯಾರು?' ಎಂದು ಪಿಸುಮಾತಿನಲ್ಲಿ ಕೇಳಿದ.

"ದೇವರಿಗೇ ಗೊತ್ತು! ಯಾರೋ ಫ್ರಾನ್ಸ್ ದೇಶದವನು ಎಂದು ಕಾಣುತ್ತೆ. ಹೀಗೇ ಸಿಳ್ಳುಹಾಕುತ್ತಾ ಈಗ ಸುಮಾರು ಐದುಗಂಟೆಗಳಿಂದ ಕುದುರೆಗಳಿಗಾಗಿ ಕಾಯುತ್ತಾ ಕೂತಿದ್ದಾನೆ. ಆ ಕೆಟ್ಟ ಮೋರೆಯವನನ್ನು ಕಂಡು ನನಗೆ ಬೇಸರವಾಗಿ ಬಿಟ್ಟಿದೆ" ಎಂದಳು ಆ ಸದ್ಗೃಹಿಣಿ.

ಆ ಯುವಕ ಆಗಂತುಕನ ಬಳಿಹೋಗಿ, ಫ್ರೆಂಚ್ ಭಾಷೆಯಲ್ಲಿ ಮಾತನಾಡಿಸಿದ: "ತಾವು ಎಲ್ಲಿಗೆ ಪ್ರಯಾಣ ಹೊರಟಿರುವುದು ಅಂತ ಕೇಳಬಹುದೆ?"

"ಇದೇ ಮುಂದಿನ ನಗರಿಗೆ. ಅಲ್ಲಿಂದ ಒಬ್ಬ ಜಮೀನ್ದಾರನ ಮನೆಗೆ ಹೋಗಬೇಕಾಗಿದೆ. ನನ್ನನ್ನು ಶಿಕ್ಷಕನನ್ನಾಗಿ ಗೊತ್ತುಮಾಡಿಕೊಂಡಿರುವುದಾಗಿ ಅವರು ಕಾಗದ ಬರೆದಿದ್ದಾರೆ. ಇವತ್ತಿನೊಳಗೆ ನನ್ನ ಪ್ರಯಾಣದ ಗುರಿ ಸ್ಥಾನವನ್ನು ಮುಟ್ಟುವೆನೆಂದು ಭಾವಿಸಿದ್ದೆ. ಆದರೆ ನಮ್ಮ ಪೋಸ್ಟ್

ಮಾಸ್ತರ್ ಮಹಾಶಯರು ಬೇರೆ ರೀತಿ ತೀರ್ಮಾನಿಸಿರುವಂತೆ ಕಾಣುತ್ತೆ. ಈ ದೇಶದಲ್ಲಿ ಕುದುರೆಗಳನ್ನು ಒದಗಿಸಿಕೊಳ್ಳುವುದು ಬಲು ಕಷ್ಟ, ಸ್ವಾಮಿ," ಎಂದು ಆ ಫ್ರೆಂಚ್ ಆಗಂತುಕ ಉತ್ತರವಿತ್ತ. "ಈ ಸ್ಥಳೀಯ ಜಮೀನ್ದಾರರುಗಳಲ್ಲಿ ಯಾರ ಬಳಿಗೆ ನೀವು ಹೋಗುತ್ತಿರುವುದು?"

"ಪೆಟ್ರೋವಿಚ್ ಮಹಾಶಯನಲ್ಲಿಗೆ."

"ಪೆಟ್ರೋವಿಚ್? ಯಾರು ಪೆಟ್ರೋವಿಚ್ ಅನ್ನೋರು?"

"ಬಹು ಚೆನ್ನಾಯ್ತು, ಸ್ವಾಮಿ! ಅವರ ಹೆಸರು ಕೇಳಿಲ್ವೆ ನೀವು? ....ನಾನೇನೋ ಅವರ ವಿಷಯದಲ್ಲಿ ಒಳ್ಳೆ ಅಭಿಪ್ರಾಯಗಳನ್ನೇನೂ ಕೇಳಿಲ್ಲ. ಅವರೊಬ್ಬರು ದುರಹಂಕಾರಿ, ದರ್ಪಿಷ್ಠ ಜಮೀನ್ದಾರರು; ಮನೆಗೆಲಸದವರನ್ನೆಲ್ಲಾ ಅತಿ ಕ್ರೌರ್ಯದಿಂದ ಕಾಣುತ್ತಾರೆ—ಅಂತ ಎಲ್ಲರೂ ಹೇಳುತ್ತಾರೆ. ಯಾರೂ ಅವರ ಮನೆಯಲ್ಲಿ ಹೆಚ್ಚು ದಿನ ಇರೋಲ್ಲ, ಅವರ ಹೆಸರು ಕೇಳುತ್ತಲೇ ಎಲ್ಲರೂ ನಡುಗುತ್ತಾರೆ. ಶಿಕ್ಷಕರ ಬಗ್ಗೆಯೂ ಅವರು ಯಾವ ತರದ ಮರ್ಯಾದೆಯನ್ನೂ ತೋರಿಸುವುದಿಲ್ಲ (ಇದು ಅವರಿಗೆ ಸ್ವಾಭಾವಿಕವಾಗಿ ಬಂದದ್ದು) ಮತ್ತು ಈಗಾಗಲೇ ಇಬ್ಬರನ್ನು ಛಡಿ ಏಟು ಕೊಟ್ಟು ಕೊಂದು ಹಾಕಿದ್ದಾರೆ!–ಅಂತಲೂ ಹೇಳುತ್ತಾರೆ."

"ಮತ್ತೆ ನೀವು ಅಂತಹ ಪೈಶಾಚಿಕ ಜಮೀನ್ದಾರನಲ್ಲಿಗೆ ಶಿಕ್ಷಕರಾಗಿ ಹೋಗಬೇಕೆಂದು ಮನಸ್ಸು ಮಾಡಿದ್ದೀರಲ್ಲಾ!"

"ಏನು ಮಾಡುವುದು, ಸ್ವಾಮಿ? ಅವರು ಒಳ್ಳೆಯ ಸಂಬಳ ಕೊಡಲು ಒಪ್ಪಿದ್ದಾರೆ—ವರ್ಷಕ್ಕೆ ಖರ್ಚು ಜಾತಾ ಮೂರು ಸಾವಿರ ರೂಬಲ್ಲುಗಳು. ಯಾರಿಗೆ ಗೊತ್ತು, ನನ್ನ ಅದೃಷ್ಟ ಒಳ್ಳೆಯದಾಗಿದ್ದು, ಬೇರೆ ಶಿಕ್ಷಕರಿಗೆ ಬಂದ ಪಾಡು ನನಗೆ ಬರದಿರಬಹುದು. ನನಗೊಬ್ಬ ವಯಸ್ಸಾದ ತಾಯಿಯಿದ್ದಾಳೆ. ನನ್ನ ಸಂಬಳದಲ್ಲಿ ಅರ್ಧವನ್ನು ಅವಳಿಗೆ ಕಳುಹಿಸಿಬಿಡುತ್ತೇನೆ. ಉಳಿದದ್ದನ್ನು ಕೂಡಿಹಾಕುತ್ತೇನೆ. ಇನ್ನು ಐದು ವರ್ಷಗಳಲ್ಲಿ ಸಾಕಷ್ಟು ಹಣ ಸಂಗ್ರಹವಾಗುತ್ತೆ, ನನ್ನ ಭವಿಷ್ಯತ್ತಿಗೆ ಸಾಕಷ್ಟು ಹಣ ಕೂಡಿದ ಮೇಲೆ, ಕೆಲಸಕ್ಕೆ ತಿಲಾಂಜಲಿಯಿತ್ತು ಸೇವಾಮುಕ್ತನಾಗುತ್ತೇನೆ. ಆಮೇಲೆ ಪ್ಯಾರಿಸ್ಸಿಗೆ ಹೋಗಿ ಆ ಹಣವನ್ನು ಹಾಕಿ ಹೊಸ ಉದ್ಯಮ ಪ್ರಾರಂಭಿಸುತ್ತೇನೆ."

"ಜಮೀನ್ದಾರ ಪೆಟ್ರೋವಿಚ್‌ನ ಮನೆಯಲ್ಲಿ ಯಾರಿಗಾದರೂ ನಿಮ್ಮ ಮುಖ ಪರಿಚಯವಿದೆಯೆ?"

"ಇಲ್ಲ, ಯಾರ ಪರಿಚಯವೂ ಇಲ್ಲ. ಮಾಸ್ಕೋನಲ್ಲಿರುವ ಅವರ ಗೆಳೆಯರೊಬ್ಬರ ಮೂಲಕ ನನಗೆ ಕರೆಕಳುಹಿಸಿದರು. ಆ ಗೆಳೆಯರ ಮನೆಯಲ್ಲಿ ನಮ್ಮ ದೇಶೀಯರೇ ಒಬ್ಬರು ಮುಖ್ಯ ಅಡುಗೆಯವರಾಗಿ ಇದ್ದಾರೆ. ಅವರು ನನ್ನ ಹಿತೈಷಿಗಳು. ನನ್ನ ಹೆಸರನ್ನು ಶಿಫಾರಸು ಮಾಡಿದರು. ನೋಡಿ, ಮಿಠಾಯಿ ಮಾಡುವ ಮತ್ತು ಮಾರುವ ವೃತ್ತಿಯ ವಿದ್ಯಾಭ್ಯಾಸ ನನಗೆ ದೊರೆತದ್ದು; ಉಪಾಧ್ಯಾಯ ವೃತ್ತಿಗಲ್ಲವೇ ಅಲ್ಲ! ಆದರೆ ನಿಮ್ಮ ದೇಶದಲ್ಲಿ ಉಪಾಧ್ಯಾಯ ವೃತ್ತಿ ತುಂಬ ಲಾಭದಾಯಕವೆಂದು ಕೇಳಿ...."

ಶಿಕ್ಷಕ ತನ್ನ ಕಥೆಯನ್ನು ಹೇಳುತ್ತಿದ್ದ ಹಾಗೆಯೇ, ಆ ಯುವಕ ಅಧಿಕಾರಿ ಏನೋ ಯೋಚನೆಯಲ್ಲಿ ಮಗ್ನನಾಗಿರುವಂತೆ ತೋರಿಬಂತು.

ಸ್ವಲ್ಪ ಹೊತ್ತಿನಮೇಲೆ, ಭಾವಸಮಾಧಿಯಿಂದ ಎಚ್ಚೆತ್ತವನಂತೆ, "ಇಲ್ಲಿ ಕೇಳಿ" ಅಂತ ಆ ಶಿಕ್ಷಕನ ಕಡೆಗೆ ತಿರುಗಿ ಆತನ ವಾಕ್‌ಪ್ರವಾಹವನ್ನು ತಡೆಗಟ್ಟಿ ಹೇಳಿದ! "ಈಗ ನಿಮಗೆ ಇಲ್ಲೇ ಹತ್ತು ಸಾವಿರ ರೂಬಲ್ಲುಗಳನ್ನು ಹಣದ ರೂಪದಲ್ಲೇ ಕೊಟ್ಟರೆ, ನೀವು ಈ ಶಿಕ್ಷಕ ವೃತ್ತಿಯನ್ನು ಬಿಟ್ಟುಕೊಟ್ಟು ಈ ಕೂಡಲೇ ಪ್ಯಾರಿಸ್ಸಿಗೆ ಹಿಂತಿರುಗುವಿರಾ?"

ಫ್ರೆಂಚ್ ಶಿಕ್ಷಕನು ಆ ಅಧಿಕಾರಿಯನ್ನು ವಿಸ್ಮಯದಿಂದ ನಿಟ್ಟಿಸಿ ನೋಡಿ, ನಸುನಗುತ್ತಾ, ಒಪ್ಪಿಗೆಯೆಂದು ತಲೆದೂಗಿದ.

"ಕುದುರೆಗಳು ಸಿದ್ಧವಾಗಿವೆ," ಪೋಸ್ಟ್‌ಮಾಸ್ತರ್ ಕೋಣೆಯೊಳಕ್ಕೆ ಬಂದು ಅರಿಕೆ ಮಾಡಿಕೊಂಡ.

ಚಾಕರನೂ ಅವನ ಮಾತುಗಳನ್ನೇ ಮತ್ತೊಮ್ಮೆ ನುಡಿದ.

"ಒಂದು ನಿಮಿಷ ತಾಳಿ. ಸ್ವಲ್ಪಹೊತ್ತು ಕೋಣೆಯ ಹೊರಗೇ ಇರುವಷ್ಟು ವಿನಯ ತೋರುವಿರಾ?" ಎಂದ ಅಧಿಕಾರಿ. ಪೋಸ್ಟ್‌ಮಾಸ್ತರು ಮತ್ತು ಜವಾನರಿಬ್ಬರೂ ಹೊರ ಹೊರಟರು.

"ನಾನೇನು ತಮಾಷೆ ಮಾಡುತ್ತಿಲ್ಲ," ಅಧಿಕಾರಿ ಫ್ರೆಂಚ್ ಭಾಷೆಯಲ್ಲಿ ಮಾತು ಮುಂದುವರಿಸಿದ. ನಾನು ನಿಮಗೆ ಹತ್ತು ಸಹಸ್ರ ರೂಬಲ್ ಕೊಡಬಲ್ಲೆ. ನನಗೆಬೇಕಾದ್ದಿಷ್ಟೇ—ಒಂದು, ನೀವು ಈ ದೇಶಬಿಟ್ಟು ಕೂಡಲೇ ಹೊರಟುಹೋಗುವುದು; ಎರಡು, ನಿಮ್ಮ ರಹದಾರಿ ಹಾಗೂ ಪರಿಚಯ ಕಾಗದ—ಪತ್ರಗಳನ್ನು ನನಗೆ ಒಪ್ಪಿಸುವುದು."

ಓಗೆಸ್ನುತ್ತಾ ಆತ ಹಣದ ಪೆಟ್ಟಿಗೆಯನ್ನು ತೆರೆದು ಅದರಿಂದ ಬ್ಯಾಂಕ್

ನೋಟುಗಳನ್ನು ಹಿಡಿಹಿಡಿಯಾಗಿ ಹೊರತೆಗೆದ.

ಫ್ರೆಂಚ್ ಶಿಕ್ಷಕ ಕಣ್ಣುಗಳನ್ನು ಅಗಲವಾಗಿ ಬಿಟ್ಟುಕೊಂಡು ಎವೆ ಯಿಕ್ಕದೆ ನೋಡುತ್ತಾ ನಿಂತುಬಿಟ್ಟ. ಇದೆಲ್ಲದರ ಅರ್ಥವೇನು ಎಂಬುದೇ ಅವನಿಗೆ ಹೊಳೆಯಲಿಲ್ಲ.

"ನನ್ನ ನಿರ್ಗಮನ....ನನ್ನ ಕಾಗದ ಪತ್ರಗಳು...." ಆಶ್ಚರ್ಯದಿಂದ ಈ ಮಾತುಗಳನ್ನು ಮತ್ತೆ ಮತ್ತೆ ಉಚ್ಚರಿಸಿದ. "ನನ್ನ ಕಾಗದ–ಪತ್ರ ಗಳೇನೋ ಇಲ್ಲಿವೆ....ಆದರೆ....ನೀವೆಲ್ಲೋ ತಮಾಷೆ ಮಾಡುತ್ತಿದ್ದೀರಿ........ ನನ್ನ ಕಾಗದ–ಪತ್ರಗಳ ಆವಶ್ಯಕತೆ ನಿಮಗೇನಿದೆ?"

"ಅವೆಲ್ಲ ನೀವು ಕೇಳುವ ಪ್ರಶ್ನೆಗಳಲ್ಲ. ನಾನು ನಿಮ್ಮನ್ನು ಕೇಳೋದು ಇಷ್ಟು: ನೀವು ನನ್ನ ಸಲಹೆಯನ್ನು ಒಪ್ಪುತ್ತೀರಾ? ಇಲ್ಲ, ಇಲ್ಲವೆ?"

ಫ್ರೆಂಚ್ ಶಿಕ್ಷಕ ಅಧಿಕಾರಿಯ ಮಾತಿನಲ್ಲಿ ಇನ್ನೂ ನಂಬಿಕೆಯಿಡಲು ಅಸಮರ್ಥನಾಗಿ, ಶಂಕಿಸುತ್ತಾ, ತನ್ನ ಕಾಗದ ಪತ್ರಗಳನ್ನು ಆತನ ಮುಂದೊ ಡ್ಡಿದ. ಆತ, ಅವುಗಳ ಮೇಲೆ ಬೇಗ ಬೇಗ ಕಣ್ಣೋಡಿಸಿ, ಪರಿಶೀಲಿಸಿದ.

"ನಿಮ್ಮ ಪಾಸ್‌ಪೋರ್ಟ್?....ಸರಿ! ನಿಮ್ಮ ಪರಿಚಯಪತ್ರ? ನಾನು ಅದನ್ನೊಮ್ಮೆ ನೋಡಬೇಕು....ನಿಮ್ಮ ಜನ್ಮದಿನ ನಿರ್ಣಯಪತ್ರ?....ಬಹಳ ಸಂತೋಷ! ಎಲ್ಲ ಸರಿ ಹೋಯಿತು. ಇಗೋ, ನಿಮ್ಮ ಹಣ. ನೀವು ನೇರವಾಗಿ ಪ್ಯಾರಿಸ್ಸಿಗೆ ಹಿಂದಿರುಗಬಹುದು. ನಿಮಗೆ ಒಳ್ಳೆಯದಾಗಲಿ...."

ಫ್ರೆಂಚ್ ಶಿಕ್ಷಕ ಸ್ತಂಭೀಭೂತನಾದ.

ಅಧಿಕಾರಿ ಪುನಃ ಆತನ ಬಳಿಗೆ ಬಂದ. "ಮುಖ್ಯವಾದ ವಿಷಯ ವನ್ನೇ ನಾನು ಸಂಪೂರ್ಣವಾಗಿ ಮರೆತು ಹೋದೆ.—ನಿಮ್ಮ ಗೌರವದ ಮೇಲೆ ಆಣೆಯಿಟ್ಟು ವಚನ ಕೊಡಿ, ಈ ವ್ಯವಹಾರ ನಮ್ಮಿಬ್ಬರಲ್ಲೇ ಇರುವು ದೆಂದು.—ನಿಮ್ಮ ಗೌರವದ ಮೇಲೆ ಆಣೆ ಇಟ್ಟು ಹೇಳಬೇಕು."

"ಆಗಬಹುದು. ನನ್ನ ಗೌರವದ ಆಣೆಯಾಗಿಯೂ" ಎಂದು ಪ್ರಮಾಣ ಮಾಡಿದ, ಆ ಶಿಕ್ಷಕ. "ಆದರೆ ನನ್ನ ಕಾಗದಪತ್ರಗಳು—ಅವುಗಳಿಲ್ಲದೆ ನನ್ನ ದೇಶಕ್ಕೆ ಹಿಂದಿರುಗುವ ಕೆಲಸ ಸಾಗುವುದು ಹೇಗೆ?"

"ನೀವು ಇದೇ ಸಮೀಪದಲ್ಲಿರುವ ನಗರಕ್ಕೆ ಹೋದ ಕೂಡಲೇ, ದುಬ್ರೋವ್‌ಸ್ಕಿ ನಿಮ್ಮ ಕಾಗದ ಪತ್ರಗಳನ್ನು ಕಸಿದುಕೊಂಡನೆಂದು ಪೋಲೀಸ್ ಠಾಣೆಯಲ್ಲಿ ದೂರು ಕೊಡಿ. ಅವರು ನಂಬುತ್ತಾರೆ ಮತ್ತು

ಬೇಕಾದ ಕಾಗದ ಪತ್ರಗಳನ್ನೆಲ್ಲಾ ಪುತ್ರೆ ಒದಗಿಸುತ್ತಾನೆ. ನಿಮಗೆ ಶುಭವಾಗಲಿ. ದೇವರು ಆದಷ್ಟು ಬೇಗ ನಿಮ್ಮನ್ನು ಪ್ಯಾರಿಸ್ಸಿಗೆ ಸುರಕ್ಷಿತವಾಗಿ ತಲುಪಿಸಲಿ. ಅಲ್ಲಿ ನಿಮ್ಮ ತಾಯಿ ಆರೋಗ್ಯದಿಂದಿರುವುದನ್ನು ನೀವು ಆದಷ್ಟು ಬೇಗ ಕಾಣುವಂತಾಗಲಿ."

ದುಬ್ರೋವ್‌ಸ್ಕಿ ಕೋಣೆಯಿಂದ ಹೊರಬಂದು, ಗಾಡಿಯೊಳಗೆ ಕೂತನು. ಕುದುರೆಗಳು ನಾಗಾಲೋಟದಿಂದ ಓಡಿದುವು.

ಪೋಸ್ಟ್‌ಮಾಸ್ತರ್ ಕಿಟಕಿಯಿಂದಲೇ ನೋಡುತ್ತಾ, ಗಾಡಿ ಕಣ್ಮರೆಯಾದ ಮೇಲೆ ಪತ್ನಿಯ ಕಡೆಗೆ ತಿರುಗಿ, " ಪಖೋಮೋವ್ನಾ, ನಿನಗೆ ಗೊತ್ತೆ ಅವರು ಯಾರು ಅಂತ? ಅವರೇ ದುಬ್ರೋವ್‌ಸ್ಕಿ!" ಎಂದು ಉದ್ಗಾರವೆತ್ತಿದ.

ಅವನ ಪತ್ನಿ ಕಿಟಕಿಯ ಹತ್ತಿರಕ್ಕೆ ಧಾವಿಸಿ ನಡೆದಳು. ಆದರೆ ಆಗಲೇ ಹೊತ್ತು ಮೀರಿದ್ದಿತು—ದುಬ್ರೋವ್‌ಸ್ಕಿ ಬಹುದೂರ ಹೊರಟು ಹೋಗಿದ್ದ. ನಿರಾಶಳಾಗಿ ಗಂಡನನ್ನು ಗದರಿಸತೊಡಗಿದಳು :

" ನಿಮಗೇನು ದೇವರು–ದಿಂಡರ ಭಯ ಅನ್ನೋದು ಇಲ್ಲವೆ? ಅವರೇ ದುಬ್ರೋವ್‌ಸ್ಕಿ ಅಂತ ಮುಂಚೆಯೇ ನೀವು ನನಗೇಕೆ ಹೇಳಲಿಲ್ಲ? ಅವರನ್ನು ಕೊನೇಪಕ್ಷ ಇಣಿಕಾದರೂ ನೋಡುತ್ತಿದ್ದೆ. ಅವರು ಪುನಃ ಈ ದಾರಿಯಲ್ಲಿ ಯಾವತ್ತಿಗೋ ಬರುವುದು, ಯಾರಿಗೆ ಗೊತ್ತು! ನಿಮಗೆ ಎಷ್ಟು ಬಯ್ದರೂ ನಾಚಿಕೆಯೇ ಆಗೊಲ್ಲ—ಖಂಡಿತವಾಗಿಯೂ, ನೀವು ನಾಚಿಕೆಗೆಟ್ಟವರು ಅನ್ನೋದು ದಿಟ!"

ಇತ್ತ ಫ್ರೆಂಚ್ ಶಿಕ್ಷಕ, ಬೇರು ಬಿಟ್ಟವನಂತೆ, ಚಲನೆಯೇ ಇಲ್ಲದೆ ನಿಂತಿದ್ದ. ಅಧಿಕಾರಿಯೊಂದಿಗೆ ಮಾಡಿಕೊಂಡ ಒಪ್ಪಂದ, ಪ್ರತಿಯಾಗಿ ದೊರೆತ ಹಣ–ಇವೆಲ್ಲ ಬರೀ ಕನಸೇ ಎನಿಸಿತು. ಜೇಬು ಮುಟ್ಟಿನೋಡಿಕೊಂಡ–ನೋಟುಗಳ ಕಂತೆಯಿದ್ದಿತು. ಈ ಅದ್ಭುತ ವ್ಯಾಪಾರ ನಿಜಕ್ಕೂ ಜರುಗಿತು ಎಂದು ನಿಶ್ಚಯಿಸುವುದಕ್ಕೆ ಇನ್ನೇನು ಆಧಾರ ಬೇಕು?

ಮುಂದಿನ ನಗರದವರೆಗೆ ಹೋಗಲು ಮಾತ್ರ ಕುದುರೆಗಳನ್ನು ಗೊತ್ತುಮಾಡಿಕೊಂಡು, ಗಾಡಿಯನ್ನು ನಿಧಾನವಾಗಿ ಹೊಡೆಯುವಂತೆ ಸಾರಥಿಗೆ ನಿರ್ದೇಶಿಸಿ, ಆತ ಹೊರಟ. ಕತ್ತಲಾಗುವ ಹೊತ್ತಿಗೆ ನಗರ ಸೇರಿದ.

ದೂರದಿಂದಲೇ, ಪಹರೆಯವನ ಡಬ್ಬಿಯಂತಿದ್ದ, ಶಿಥಿಲವಾಗಿದ್ದ

ಟೋಲ್‌ಗೇಟನ್ನು ಕಂಡನು. ಕೂಡಲೇ ಆ ಶಿಕ್ಷಕ ಗಾಡಿಯನ್ನು ನಿಲ್ಲಿಸ ಹೇಳಿ, ಗಾಡಿಯನ್ನೂ, ಅದರೊಳಗಿದ್ದ ತೊಗಲಿನ ಪೆಟ್ಟಿಗೆಯನ್ನೂ ಬಳುವಳಿಯಾಗಿ ತೆಗೆದುಕೊಂಡು ಹಿಂದಿರುಗುವಂತೆ ಸಾರಥಿಗೆ ಸೂಚಿಸಿ, ತಾನು ನಡೆದುಕೊಂಡೇ ಟೋಲ್‌ಗೇಟ್ ಕಡೆಗೆ ಹೊರಟ. ಸಾರಥಿಗೆ ಅಪ್ರತಿಮ ಆಶ್ಚರ್ಯವಾಯಿತು—ಹಿಂದೆ, ದುಬ್ರೋವ್‌ಸ್ಕಿಯ ಸಲಹೆಯನ್ನು ಕೇಳಿದಾಗ ಶಿಕ್ಷಕನಿಗೆ ಎಷ್ಟು ಕೌತುಕವಾಯಿತೋ, ಈಗ ಸಾರಥಿಗೆ, ಶಿಕ್ಷಕನ ಉದಾರ ಕೊಡುಗೆಯನ್ನು ಕಂಡು ಅಷ್ಟೇ ಕೌತುಕವಾಯಿತು. ಆ ಪರದೇಶೀಯನಿಗೆ ಎಲ್ಲೋ ಹುಚ್ಚು ಹಿಡಿದಿರಬೇಕೆಂದು ನಿರ್ಧರಿಸಿ, ಸಾರಥಿಯು ಆತನಿಗೆ ಬಾಗಿ ವಂದಿಸುತ್ತಾ ಕೃತಜ್ಞತೆಗಳನ್ನರ್ಪಿಸಿದ. ಅನಂತರ ಆ ಸಾರಥಿ, ನಗರದ ಒಳಕ್ಕೆ ಹೋಗುವ ಔಚಿತ್ಯವನ್ನೇನೂ ಕಾಣದೆ, ಆತನ ಆಪ್ತ ಮಿತ್ರನೊಬ್ಬನ ಮಾಲೀಕತ್ವದಲ್ಲಿ ನಡೆಯುತ್ತಿದ್ದ ಆಮೋದಕಗೃಹವೊಂದರ ಕಡೆಗೆ ಗಾಡಿಯನ್ನು ತಿರುಗಿಸಿಕೊಂಡು ಹೊರಟ. ಅಲ್ಲಿ ಇಡೀರಾತ್ರಿ ಕುಡಿದು ಮೋಜು ಮಾಡಿಕೊಂಡಿದ್ದು, ಗಾಡಿ ಮತ್ತು ಪೆಟ್ಟಿಗೆಯನ್ನು ಪಣವಾಗಿ ತೆತ್ತುಬಿಟ್ಟು, ಮಾರನೆಯ ಬೆಳಗ್ಗೆ ಕೆಂಗಣ್ಣುಗಳು ಮತ್ತು ಊದಿದ ಮುಖದಿಂದ ತನ್ನ ಮನೆಗೆ ಹಿಂತಿರುಗಿದ.

ನಮಗೆ ಈಗಾಗಲೇ ಗೊತ್ತಾಗಿರುವ ರೀತಿಯಲ್ಲಿ ಫ್ರೆಂಚ್ ಶಿಕ್ಷಕನಿಂದ ಆತನ ಕಾಗದ ಪತ್ರಗಳನ್ನೆಲ್ಲಾ ಪಡೆದುಕೊಂಡಮೇಲೆ, ದುಬ್ರೋವ್‌ಸ್ಕಿ, ವೇಷ ಮರೆಸಿಕೊಂಡು, ಧೈರ್ಯವಾಗಿ ಪೆಟ್ರೋವಿಚ್‌ನನ್ನು ಕಂಡು ಆತನ ಮನೆಯಲ್ಲೇ ತಳ ಊರಿದ. ಹೀಗೆ ಮಾಡುವುದರಲ್ಲಿ, ಆತನ ರಹಸ್ಯ ಉದ್ದೇಶಗಳೇನೇ ಇದ್ದರೂ, (ಅವುಗಳನ್ನು ನಾವು ಮುಂದೆ ಅರಿಯುವೆವು) ಅವನ ನಡವಳಿಕೆ ಖಂಡನಾರ್ಹವಾದಂತಹುದೇನೂ ಆಗಿರಲಿಲ್ಲ. ಬಾಲಕ ಸಾಷಾನಿಗೆ ಪಾಠ ಹೇಳಿಕೊಡುವುದರಲ್ಲಿ ಹೆಚ್ಚು ಆಸಕ್ತಿ ವಹಿಸಲಿಲ್ಲ, ಕಷ್ಟ ಪಡಲಿಲ್ಲ ಎಂಬುದೇನೋ ನಿಜ. ಹುಡುಗನಿಗೆ ಇಷ್ಟ ಬಂದಂತೆ ಚೇಷ್ಟೆ ಮಾಡಿಕೊಂಡು ಹುಡುಗಾಟಿಕೆಯಲ್ಲೇ ಕಾಲಕಳೆಯಲು ಪೂರ್ಣ ಸ್ವಾತಂತ್ರ್ಯವನ್ನು ಕೊಟ್ಟುಬಿಟ್ಟಿದ್ದ. ತೋರಿಕೆಗೆ, ಅತಿ ಶ್ರದ್ಧೆಯಿಂದ ಪಾಠ ಹೇಳಿಕೊಡುವವನಂತೆ, ಆಗಾಗ್ಗೆ ಹುಡುಗನಿಗೆ ಪಾಠಗಳನ್ನು ಒಪ್ಪಿಸುವಂತೆ ನಿಗದಿ ಮಾಡುತ್ತಿದ್ದ. ಹುಡುಗ ಆ ಪ್ರಶ್ನೆಗಳಿಗೆ ಉತ್ತರ ಬರೆದನೇ, ಬಿಟ್ಟನೇ, ಎಂಬುದನ್ನು ವಿಚಾರಿಸುತ್ತಲೂ ಇರಲಿಲ್ಲ. ಆದರೆ ತನ್ನ ಇನ್ನೊಬ್ಬ

ವಿದ್ಯಾರ್ಥಿನಿಯು (ಮಾಷಾಳ) ಸಂಗೀತ ಪಾಠದಲ್ಲಿ ಮಾತ್ರ ವಿಶೇಷ ಆಸಕ್ತಿ ತೋರಿಸುತ್ತಿದ್ದ. ಎಷ್ಟೋ ವೇಳೆ ಗಂಟೆಗಟ್ಟಲೆ ಆಕೆಯೊಡನೆ ಪಿಯಾನೋ ನುಡಿಸುತ್ತಾ ಕುಳಿತಿರುತ್ತಿದ್ದ. ಎಲ್ಲರೂ ಆ ಯುವಕ–ಶಿಕ್ಷಕನನ್ನು ಬಹುವಾಗಿ ಮೆಚ್ಚಿಕೊಂಡಿದ್ದರು. ಬೇಟೆಗೆ ಹೋದಾಗ ಆತ ತೋರಿಸುತ್ತಿದ್ದ ನಿರ್ಭಯ ಸಾಮರ್ಥ್ಯಕ್ಕಾಗಿ ಪೆಟ್ರೋವಿಚ್ ಆತನನ್ನು ಮೆಚ್ಚಿಕೊಂಡರೆ, ದಣಿವನ್ನೇ ಅರಿಯದ ಅವನ ಕಾರ್ಯ ಚಟುವಟಿಕೆಗಳು, ಆತನ ಸೌಜನ್ಯ ಮನೋಭಾವ, ಇವು ಮರಯ್ಯಾ ಕಿರಿಲ್ಲೋವ್ನಾಳ ಮನ ಸೆಳೆದಿದ್ದುವು. ತನಗೆ ಇಷ್ಟ ಬಂದಂತೆ ಚೇಷ್ಟೆ ಮಾಡಿಕೊಂಡು ವಿಹರಿಸಲು ಸ್ವಾತಂತ್ರ್ಯವಿತ್ತಿದ್ದರಿಂದ, ಸಾಷಾನಿಗೂ ಆತನನ್ನು ಕಂಡರೆ ಬಹು ಇಷ್ಟವಾಗಿತ್ತು. ಆತನ ಒಳ್ಳೆಯ ಸ್ವಭಾವ ಮತ್ತು ಔದಾರ್ಯಗಳಿಗಾಗಿ ಸೇವಕರೆಲ್ಲರೂ ಆತನನ್ನು ಪ್ರೀತಿಸುತ್ತಿದ್ದರು. ಶಿಕ್ಷಕ ಸ್ಥಾನದಲ್ಲಿರುವವನು ಇಷ್ಟೊಂದು ಔದಾರ್ಯ ತೋರಿಸುವನಲ್ಲ–ಎಂಬುದೇ ಅವರಿಗೆ ಆಶ್ಚರ್ಯವನ್ನುಂಟುಮಾಡುವ ಸಮಸ್ಯೆಯಾಗಿತ್ತು. ಶಿಕ್ಷಕನಿಗೂ, ಆ ಸಂಸಾರದ ಬಗ್ಗೆ ಏನೋ ಒಂದು ವಿಧವಾದ ವಿಶ್ವಾಸ ಬೆಳೆದು, ಅವನೂ ಮನೆಯವರಲ್ಲಿ ಒಬ್ಬನಾಗಿ ಹೊಂದಿಕೊಂಡು ಇದ್ದುಬಿಟ್ಟಿದ್ದ.

ನಾವು ಹಿಂದಿನ ಅಧ್ಯಾಯದಲ್ಲಿ ವಿವರಿಸಿದ ಸತ್ಕಾರ ಸಮಾರಂಭ ನಡೆದ ಹೊತ್ತಿಗಾಗಲೇ, ಆತ ಶಿಕ್ಷಕನಾಗಿ ನೇಮಕವಾಗಿ ಮಾಸವೊಂದು ಸಂದಿತ್ತು. ಈ ಚತುರನಾದ ಯುವಕ ಫ್ರೆಂಚ್ ಶಿಕ್ಷಕ ಮೋಸಗಾರನೆಂದು ಯಾರಿಗೂ ಸಂಶಯ ಬರಲಿಲ್ಲ. ವಾಸ್ತವವಾಗಿ ಆತ, ಸ್ಥಳೀಯ ಜಮೀನ್ದಾರರಿಗೆ ಸಿಂಹಸ್ವಪ್ನವಾಗಿದ್ದ ಅತ್ಯಂತ ಸಾಹಸೀ ದೌರ್ಜನ್ಯಕಾರನಾಗಿದ್ದನೆಂದು ಯಾರಿಗೂ ಸುಳಿವು ಕೂಡ ಸಿಗಲಿಲ್ಲ. ಆತ, ಆ ಮನೆಯಲ್ಲಿ ವಾಸ ಮಾಡತೊಡಗಿದ ಒಂದು ತಿಂಗಳಿನಿಂದಲೂ ಆ ಹಳ್ಳಿಯನ್ನು ಬಿಟ್ಟು ಒಂದು ಬಾರಿಯೂ ಹೊರ ಹೊರಟೇ ಇರಲಿಲ್ಲ. ಆದರೂ ದುಬ್ರೋವ್‌ಸ್ಕಿಯ ಸಾಹಸ ಕೃತ್ಯಗಳ ಸುದ್ದಿ ಕೇಳಿಬರುತ್ತಲೇ ಇತ್ತು. ಇಲ್ಲದನ್ನು ಸುಟ್ಟಿಸಿಕೊಂಡು ಹೇಳುವ ಗ್ರಾಮನಿವಾಸಿಗಳ ಕಲ್ಪನಾಶಕ್ತಿ ಇದಕ್ಕೆ ಕಾರಣವಾಗಿದ್ದಿರಬಹುದು. ಅಥವಾ, ತಮ್ಮ ನಾಯಕನಿಲ್ಲದಿದ್ದರೂ, ದುಬ್ರೋವ್‌ಸ್ಕಿಯ ತಂಡದವರು ತಮ್ಮ ಕೃತ್ಯಗಳನ್ನು ಮುಂದುವರಿಸುತ್ತಿದ್ದಿರಬಹುದು. ಅಂತೂ ದರೋಡೆಯ ಸುದ್ದಿ ಮಾತ್ರ ಸದಾ ಪ್ರಸಾರದಲ್ಲಿದ್ದಿತು.

ಅಂದು, ಸತ್ಕಾರ ಸಮಾರಂಭದ ರಾತ್ರಿ, ಪವ್‌ನುಟಿಪ್ ಒಬ್ಬಂಟಿಗ ನಾಗಿ ತನ್ನಷ್ಟಕ್ಕೆ ತಾನೇ ಶಿಕ್ಷಕನ—ಅರ್ಥಾತ್ ದುಬ್ರೋವ್‌ಸ್ಕಿಯ ಪಂಜರ ದಲ್ಲಿ ಸಿಕ್ಕು ಬಿದ್ದಿದ್ದ. ದುಬ್ರೋವ್‌ಸ್ಕಿ ಆತನನ್ನು ವೈಯಕ್ತಿಕ ಶತ್ರು ವೆಂದೇ ಪರಿಗಣಿಸಿದ್ದ. ಆತನ ಕೋಟಲೆ-ಸಂಕಷ್ಟಗಳಿಗೆಲ್ಲಾ ಪವ್‌ನು ಟಿಪ್‌ನೇ ಮುಖ್ಯ ಕಾರಣನಾಗಿದ್ದ. ಈಗ ತನ್ನ ವೈರಿ ಒಬ್ಬನೇ ಸಿಕ್ಕಿದ್ದ. ದುಬ್ರೋವ್‌ಸ್ಕಿ, ಸೇಡುತೀರಿಸಿಕೊಳ್ಳುವ ಮಹದಾಸೆಯನ್ನು ಹತ್ತಿಕ್ಕಲಾರ ದಾದ. ಪವ್‌ನುಟಿಪ್ ತೊಡುತ್ತಿದ್ದ ಚರ್ಮದ ಚೀಲದ ವಿಷಯ ಅವನಿಗೆ ಗೊತ್ತಿತ್ತು. ಅದನ್ನು ಅಪಹರಿಸಬೇಕೆಂದು ನಿರ್ಧರಿಸಿದ. ಶಿಕ್ಷಕ ವೇಷ ದಲ್ಲಿದ್ದ ಆತ ಇದ್ದಕ್ಕಿದ್ದಂತೆಯೇ ದರೋಡೆಕೋರನಾಗಿ ಪರಿವರ್ತಿತನಾಗಿ, ಬಡಪಾಯಿ ಅಂತಾನ್ ಪವ್‌ನುಟಿಪ್‌ನನ್ನು ಹೇಗೆ ಭಯ ಭ್ರಾಂತಗೊಳಿಸಿದ ನೆಂಬುದನ್ನು ನಾವು ಕಂಡೆವು.

ಮಾರನೆಯ ದಿನ ಬೆಳಗ್ಗೆ ಒಂಬತ್ತು ಗಂಟೆಯ ಹೊತ್ತಿಗೆ, ರಾತ್ರಿ ಅಲ್ಲಿಯೇ ತಂಗಿದ್ದ ಅತಿಥಿಗಳೆಲ್ಲ ಒಬ್ಬೊಬ್ಬರಾಗಿ ದಿವಾನಖಾನೆಯಲ್ಲಿ ಸೇರ ತೊಡಗಿದರು. ಒಲೆಯ ಮೇಲಿದ್ದ ಚಹಾದ ಪಾತ್ರೆ ಉಗಿಯನ್ನು ಹೊರ ಸೂಸುತ್ತಿತ್ತು. ಅದರ ಪಕ್ಕದಲ್ಲೇ ಮರಯ್ಯಾ ಕಿರಿಲ್ಲೋವ್ನಾ, ಬೆಳಗಿನ ಉಡುಪು ಉಟ್ಟು, ಕುಳಿತಿದ್ದಳು. ಕಿರಿಲ್ಲಾ ಪೆಟ್ರೋವಿಪ್, ಫ್ಲಾನಲ್‌ನ ನಿಲುವಂಗಿಯನ್ನು ತೊಟ್ಟು, ಕಾಲಿಗೆ ಪಾದರಕ್ಷೆ ಮೆಟ್ಟಿಕೊಂಡು, ಒಂದು ದೊಡ್ಡ ಬೋಗಣಿಯಂತಹ ಲೋಟದಲ್ಲಿ ಚಹಾ ಪಾನ ಮಾಡುತ್ತಿದ್ದ. ಒಬ್ಬರಾದ ಮೇಲೊಬ್ಬರಂತೆ ಬಂದವರಲ್ಲಿ ಕಟ್ಟಕಡೆಗೆ ಬಂದವನೆಂದರೆ— ಅಂತಾನ್ ಪವ್‌ನುಟಿಪ್. ಆತನ ಮುಖದಲ್ಲಿ ಪ್ರೇತಕಳೆ ತಾಂಡವವಾಡು ತ್ತಿತ್ತು. ಆತನ ಮನಸ್ಸಿನಲ್ಲಿ ಏನೋ ಭೀತಿ ಹುದುಗಿಕೊಂಡು ಕೊರೆಯು ತ್ತಿದೆ ಎಂದು ಸ್ಪಷ್ಟವಾಗಿ ಗೊತ್ತಾಗುತ್ತಿತ್ತು. ಕಿರಿಲ್ಲಾ ಪೆಟ್ರೋವಿಪ್ ಆತನನ್ನು ಕಂಡೊಡನೆಯೇ 'ದೇಹಾರೋಗ್ಯ ಚೆನ್ನಾಗಿಲ್ಲವೇ?' ಎಂದು ಕೇಳಿ ದನು. ಅಂತಾನ್ ಪವ್‌ನುಟಿಪ್, ಅಲ್ಲೇ ಸಮೀಪದಲ್ಲಿ, ಯಾವ ವಿಶೇಷ ಘಟನೆಯೂ ಜರುಗಿಲ್ಲವೇನೋ ಎಂಬಂತೆ ಪ್ರಶಾಂತನಾಗಿ ಕುಳಿತಿದ್ದ ಶಿಕ್ಷಕ ನತ್ತ ಭಯಭರಿತ ದೃಷ್ಟಿ ಬೀರುತ್ತಾ, ಅರ್ಥವಿರದ ಏನೇನೋ ಮಾತುಗ ಳನ್ನು ವಟಗುಟ್ಟಿದ. ಕೆಲವು ನಿಮಿಷಗಳನಂತರ, ಸೇವಕನೊಬ್ಬ ಒಳಬಂದು ಅಂತಾನ್ ಪವ್‌ನುಟಿಪ್‌ರ ವಾಹನ ಪ್ರಯಾಣಕ್ಕೆ ಸಿದ್ಧವಾಗಿದೆಯೆಂದು

ಸೂಚಿಸಿದ. ಪರ್‌ನುಟಿಪ್ ತರಾತುರಿಯಿಂದ ಪೆಟ್ರೋವಿಪ್‌ಗೆ ವಂದನೆ ಸಲ್ಲಿಸಿ, ಆತನ ಪ್ರತಿಭಟನೆಯನ್ನೂ ಲಕ್ಷಿಸದೆ, ಹೊರಬಂದು, ಆ ಕ್ಷಣವೇ ಗಾಡಿಯಲ್ಲಿ ಕುಳಿತು ಹೊರಟುಹೋದ. ಪರ್‌ನುಟಿಪ್ ಏಕೆ ಹಾಗೆ ವರ್ತಿಸಿದನೆಂದು ಎಲ್ಲರಿಗೂ ಆಶ್ಚರ್ಯವಾಯಿತು. ರಾತ್ರಿ ಎಲ್ಲೋ ವಿಪರೀತವಾಗಿ ಆಹಾರ ಸೇವಿಸಿ ಆತನ ದೇಹಸ್ಥಿತಿ ಕೆಟ್ಟಿರಬೇಕೆಂದು, ಪೆಟ್ರೋವಿಪ್ ತೀರ್ಮಾನಕ್ಕೆ ಬಂದ. ಟೀ ಕುಡಿದಾದನಂತರ, ಸಂಪ್ರದಾಯಕ್ಕನುಸಾರವಾಗಿ, ಬೀಳ್ಕೊಡುಗೆಯ ಉಪಾಹಾರವಾಯಿತು. ಅದಾದ ಮೇಲೆ ಅತಿಥಿಗಳೆಲ್ಲರೂ ಒಬ್ಬೊಬ್ಬರಾಗಿ ತಮ್ಮ ಮನೆಗಳಿಗೆ ಹೊರಟರು. ಸ್ವಲ್ಪ ಸಮಯದಲ್ಲೇ ಪ್ರೊಕ್ರೋವ್‌ಸ್ಕಾಯಿ ಹಳ್ಳಿ ಬರಿದಾಯಿತು. ಉಳಿದೆಲ್ಲ ಕಾರ್ಯ ಚಟುವಟಿಕೆಗಳು ಎಂದಿನಂತೆ ಸಾಗತೊಡಗಿದುವು.

## ೪

ಹೇಳಬೇಕಾದಂತಹ ಘಟನೆಗಳಾವುವೂ ಜರಗದೆ ಹಲವು ದಿನಗಳು ಉರುಳಿದುವು. ಪ್ರೊಕ್ರೋವ್‌ಸ್ಕಾಯಿ ಜಮೀನ್ದಾರಿಯ ಜನರ ಜೀವನ ನಿಸ್ಸಾರವಾಗಿ, ಏಕಪ್ರಕಾರವಾಗಿ ಸಾಗಿದ್ದಿತು. ಕಿರಿಲ್ಲಾ ಪೆಟ್ರೋವಿಪ್ ಪ್ರತಿದಿನವೂ ಬೇಟೆಯಾಡಲು ಹೊರಟು ಹೋಗುತ್ತಿದ್ದ. ಓದುವುದು, ವಾಯು ವಿಹಾರ ಹೋಗುವುದು, ಸಂಗೀತ ಪಾಠ—ಇದು ಮರಯ್ಯಾ ಕಿರಿಲ್ಲೋವ್ನಾಳ ದಿನಚರಿಯಾಯಿತು. ಈಚೀಚೆಗೆ ಅವಳಿಗೆ ತನ್ನ ಹೃದಯದ ಮಿಡಿತ, ಅದರ ಕರೆ, ಅರ್ಥವಾಗ ಹತ್ತಿತ್ತು. ಫ್ರೆಂಚ್ ಶಿಕ್ಷಕನ ಮೇಧಾಶಕ್ತಿಯ ಶ್ರೇಷ್ಠತೆಯನ್ನು, ಇಚ್ಛೆಯಿಲ್ಲದಿದ್ದರೂ ತಾತ್ಸಾರ ಮಾಡಲಾಗದೆ, ಹುಸಿಮುನಿಸಿನಿಂದ ಒಪ್ಪಿಕೊಳ್ಳಲೇಬೇಕಾಯಿತು. ಫ್ರೆಂಚ್ ಶಿಕ್ಷಕನೂ, ಘನತೆ—ಗಾಂಭೀರ್ಯಗಳ ಎಲ್ಲೆಮೀರದೆ, ಅವಳ ಅಹಂಕಾರವನ್ನು ಮುರಿಯುತ್ತಾ, ಅವಳ ಅಪ್ರಕಟಿತ ಸೂಕ್ಷ್ಮ ಮನೋವಿಕಾರಗಳನ್ನು ತಣಿಸುತ್ತಾ, ಬಹು ಚಮತ್ಕಾರದಿಂದ ನಡೆದುಕೊಳ್ಳುತ್ತಿದ್ದ. ಅವಳು ಆತನ ವಿಷಯದಲ್ಲಿದ್ದ ಗೌರವ, ನಂಬಿಕೆಗಳು ಹೆಚ್ಚಾದಷ್ಟೂ, ಆತನ ಸಹವಾಸದಿಂದುಂಟಾಗುತ್ತಿದ್ದ ವಿಲಕ್ಷಣ, ಸುಖಕರ, ಸಂವೇದನೆಗಳಿಗೂ ಹೆಚ್ಚುಹೆಚ್ಚಾಗಿ ಒಳಗಾಗ ತೊಡಗಿದಳು. ದಿ—ಫಾರ್ಗ್ ಮನೆಯಲ್ಲಿಲ್ಲದಿದ್ದಾಗ ಅವಳಿಗೆ ಏನೋ ಒಂದು ವಿಧವಾದ

ಅತೃಪ್ತಿ, ಅಸಂತೋಷ. ಅವನಿದ್ದಾಗ, ಅವನನ್ನು ಬಿಟ್ಟು ಬೇರೆ ಯಾರ ಕಡೆಗೂ ಅವಳ ದೃಷ್ಟಿ ಹರಿಯುತ್ತಿರಲಿಲ್ಲ. ಯಾವ ಸಮಸ್ಯೆಗೂ, ಅವನ ಅಭಿಪ್ರಾಯ ಆವಳಿಗೆ ಬೇಕಿತ್ತು; ಮತ್ತು ಪ್ರತಿಯೊಂದು ಬಾರಿಯೂ ಅವನ ಅಭಿಪ್ರಾಯಗಳನ್ನೇ ತಾನೂ ಒಪ್ಪುತ್ತಿದ್ದಳು. ಆಕೆ ಆತನಲ್ಲಿ ಸಂಪೂರ್ಣ ವಾಗಿ ಅನುರಕ್ತಳಾಗಿದ್ದಾಳೆಂದು ಹೇಳದಿದ್ದರೂ, ಆ ರಾಗದ ಕಿಡಿ ಆಕೆಯ ಹೃದಯದಲ್ಲಿ ಅಡಗಿತ್ತು; ಜ್ವಾಲೆಯಾಗಿ ಹತ್ತಿಕೊಂಡು ಪ್ರಜ್ವಲಿಸಲು, ಯಾವುದಾದರೊಂದು ಸುಸಂಘರ್ಷಣೆಗಾಗಿ, ಅಥವಾ ದೈವಕಲ್ಪಿತ ಪರಿವರ್ತನೆ ಗಾಗಿ, ಇದಿರುನೋಡುತ್ತಿದ್ದಿತು.

ಒಂದು ದಿನ ಸಂಗೀತಪಾಠಕ್ಕಾಗಿ ಮರಯ್ಯಾ ಕಿರಿಲ್ಲೋವ್ನಾ ಪಿಯಾನೋ ವಾದ್ಯವಿದ್ದ ಕೋಣೆಯೊಳಕ್ಕೆ ಹೋದಳು. ಶಿಕ್ಷಕ ಆಗಲೇ ಅಲ್ಲಿ ಆಕೆಗಾಗಿ ಕಾದು ಕುಳಿತಿದ್ದ. ಆತನ ಮುಖಚರ್ಯೆಯಲ್ಲಿ ಏನೋ ಬದಲಾವಣೆ ಯನ್ನು ಆಕೆ ಕಂಡಳು. ಆತ ಏನೋ ಪೇಚಾಟದಲ್ಲಿ ಸಿಕ್ಕಿಬಿದ್ದಿರುವಂತೆ ಕಾಣುತ್ತಿತ್ತು. ಮ್ಲಾನವದನನಾಗಿದ್ದ. ಪಿಯಾನೋ ವಾದ್ಯದ ಮುಚ್ಚಳ ವನ್ನು ತೆರೆದು, ಆಕೆ ಕೆಲವು ಗೀತೆಗಳನ್ನು ನುಡಿಸಿದಳು. ಅಷ್ಟರಲ್ಲೇ, ದುಬ್ರೋವ್‌ಸ್ಕಿ ತಲೆ ನೋವೆಂದು ಹೇಳಿ ಅಂದಿನ ಪಾಠವನ್ನು ಅಲ್ಲಿಗೇ ನಿಲ್ಲಿಸಿ, ಹಾಡಿನ ಪುಸ್ತಕವನ್ನು ಮುಚ್ಚಿ ಆಕೆಗೆ ಹಿಂದಿರುಗಿಸುವಾಗ, ಕಾಣದಂತೆ, ಆಕೆಯ ಕೈಗೆ ಸಣ್ಣ ಚೀಟಿಯೊಂದನ್ನೂ ನುಸುಳಿಸಿದ. ಮರಯ್ಯಾ ಕಿರಿ ಲ್ಲೋವ್ನಾ, ತಾನು ಏನು ಮಾಡುತ್ತಿರುವಳೆಂಬ ಅರಿವಾಗುವ ಮುನ್ನವೇ, ಅದನ್ನು ಸ್ವೀಕರಿಸಿದಳು. ಮರುಕ್ಷಣವೇ ಅದನ್ನು ತೆಗೆದುಕೊಂಡು ತಪ್ಪು ಮಾಡಿದೆನೆಂದು ಪಶ್ಚಾತ್ತಾಪಪಟ್ಟಳು. ದುಬ್ರೋವ್‌ಸ್ಕಿ ಅಷ್ಟು ಹೊತ್ತಿ ಗಾಗಲೇ ಕೋಣೆಯಿಂದ ಹೊರಟುಹೋಗಿದ್ದ. ಮರಯ್ಯಾ ಕಿರಿಲ್ಲೋವ್ನಾ ತನ್ನ ಕೊಠಡಿಗೆ ಹೋಗಿ, ಚೀಟಿಯನ್ನು ಬಿಚ್ಚಿ, ಕೆಳಗಿನ ವಾಕ್ಯಗಳನ್ನು ಓದಿದಳು:

"ಇಂದು ಸಂಜೆ ಏಳು ಗಂಟೆಯ ಹೊತ್ತಿಗೆ, ನದಿ ತೀರದಲ್ಲಿರುವ ಲತಾಮಂಟಪಕ್ಕೆ ಬನ್ನಿ. ನಾನು ನಿಮ್ಮೊಂದಿಗೆ ಮಾತನಾಡಬೇಕಾಗಿದೆ."

ಓದಿದವಳೇ, ಕಾತರತೆಯ ಕಾವಿನಲ್ಲಿ ಕರಗಿಹೋಗುವಂತಾದಳು ಆಕೆ. ಆತ ತನ್ನ ಬಗ್ಗೆ ಹೊಂದಿರುವ ಭಾವನೆಗಳನ್ನು ಪ್ರಕಟಿಸಬಹುದೆಂದು ಬಹಳ ದಿನದಿಂದ ಕಾದಿದ್ದಳು. ಇಬ್ಬರಿಗೂ, ಬಿಚ್ಚು ಹೃದಯದ ಮಾತು

ಕತೆಗಳಾಗಬೇಕೆಂದು ಆಸೆಯಿದ್ದಿತು. ಆತನ ಹೃದಯದಲ್ಲಿ ತುಂಬಿದ್ದ ಒಲವನ್ನು ಹೊರಸೂಸಲು ಅಣುಕುತ್ತಿದ್ದರು. ಆತ ತನ್ನಲ್ಲಿ ಪ್ರೀತಿಯನ್ನು ವ್ಯಕ್ತಪಡಿಸಿ ತನ್ನ ಊಹೆಯನ್ನೇ ನಿಜವನ್ನಾಗಿ ಮಾಡಿದರೆ ಎಷ್ಟು ಚೆನ್ನ ಎನಿಸಿತು, ಆಕೆಗೆ. ಆದರ ಸಮಾಜದಲ್ಲಿ ಆತನ ಸ್ಥಾನ ಕೀಳಮಟ್ಟದ್ದು. ತಾನು ಉನ್ನತ ಕುಲಕ್ಕೆ ಸೇರಿದವಳು. ಆತನೊಡನೆ ತನ್ನ ಪಾಣಿಗ್ರಹಣ ಸಾಧ್ಯವೇ ಇಲ್ಲ. ಆದ್ದರಿಂದ, ಆತನ ಪ್ರಣಯ ನಿರೂಪಣೆಯ ಮಾತು ಗಳನ್ನು ತಾನು ಕೇಳಹೋಗುವುದು ಅನುಚಿತವಲ್ಲವೇ? ಆದದ್ದಾಗಲಿ, ಸಾಂಕೇತಿಕ ಸ್ಥಳಕ್ಕಂತೂ ಹೋಗುವುದು, ಎಂದು ತೀರ್ಮಾನಿಸಿದಳು. ಹೋಗಿ ಅಲ್ಲಿ ಹೇಗೆ ವರ್ತಿಸುವುದು ಎಂಬುದು ಆಕೆಗಿನ್ನೂ ಹೊಳೆದಿರಲಿಲ್ಲ. ಆತ ಪ್ರಣಯ ಭಿಕ್ಷೆ ಯಾಚಿಸಿದಾಗ ತನ್ನ ಶ್ರೀಮಂತಿಕೆಯ ಸ್ವಭಾವಕ್ಕೆ ತಕ್ಕಂತೆ ಕೋಪದಿಂದ ಹುಬ್ಬುಗಂಟಿಕ್ಕಿ ತಿರಸ್ಕರಿಸುವುದೇ? ಅಥವಾ ಸ್ನೇಹ ದಿಂದ ಬುದ್ಧಿವಾದ ಹೇಳುವುದೇ? ಅಥವಾ ಹಾಸ್ಯಮಾಡಿ, ನಕ್ಕು ಅವನ ಸಲಹೆಯನ್ನು ತಳ್ಳಿಹಾಕುವುದೆ? ಅಥವಾ ಏನೂ ಮಾತನಾಡದೆ, ಮೂಕ ಸಹಾನುಭೂತಿ ತೋರಿಸುವುದೆ?— ಈ ಯೋಚನೆಗಳು ಆಕೆಯನ್ನು ಬಾಧಿಸಿ ದವು. ಆದರೂ ಕ್ಷಣಕ್ಕೊಮ್ಮೆ ಗಡಿಯಾರದ ಕಡೆಗೆ ನೋಡದೆ ಇರದಾದಳು, ಆಕೆ. ಸಂಜೆಯ ಮಬ್ಬು ಮುಸುಕತೊಡಗಿತು. ಮನೆಯಲ್ಲಿ ಮೇಣದ ಬತ್ತಿಗಳು ಹಚ್ಚಲ್ಪಟ್ಟವು. ಕಿರಿಲ್ಲಾ ಪೆಟ್ರೋವಿಚ್, ಭೇಟಿಯೀಯಲು ಬಂದಿದ್ದ ನೆರೆಹೊರೆಯವರೊಂದಿಗೆ ಇಸ್ಪೀಟು ಆಟವಾಡಲು ಕುಳಿತ. ಅಡು ಗೆಯ ಮನೆಯಲ್ಲಿ ಗಡಿಯಾರ, ಗಂಟೆ ಅರೂಮುಕ್ಕಾಲು ಆಯಿತೆಂದು ಬಡಿದು ಸೂಚಿಸಿತು. ಮರಿಯ್ಯಾ ಕಿರಿಲ್ಲೋವ್ನಾ, ಮನೆಯ ಮುಂದಿನ ದ್ವಾರ ಮಂಟಪದ ಬಳಿಗೆ, ಮೆಲ್ಲಗೆ, ಕಳ್ಳತನದಿಂದ ಹೋಗಿ, ಸುತ್ತಲೂ ನೋಡಿ, ಕೊನೆಗೆ ಉದ್ಯಾನವನವನ್ನು ಹೊಕ್ಕಳು.

ಅಂದು ಸಂಜೆ ಆಕಾಶದಲ್ಲೆಲ್ಲಾ ಕಾರ್ಮೋಡಗಳು ಕವಿದು ಆಗಲೇ ಕತ್ತಲಾವರಿಸಿದ್ದಿತು. ಎರಡು ಹೆಜ್ಜೆ ಮುಂದೆ ಏನಿದೆ ಎಂದು ಕೂಡ ಕಂಡು ಹಿಡಿಯಲಾಗುತ್ತಿರಲಿಲ್ಲ. ಆದರೂ, ಮರಿಯ್ಯಾ ಕಿರಿಲ್ಲೋವ್ನಾಗೆ ಅಷ್ಟೇನೂ ಕಷ್ಟವಾಗಲಿಲ್ಲ. ಆಕೆಗೆ ಉದ್ಯಾನವನದ ದಾರಿಗಳೆಲ್ಲ ತುಂಬ ಬಳಕೆಯಾಗಿ ದ್ದವು. ಬೇಗಬೇಗನೆ ನಡೆದು ಮರುನಿಮಿಷದಲ್ಲಾಗಲೇ ಲತಾಮಂಟಪ ವನ್ನು ಸೇರಿದ್ದಳು. ದಿ-ಫಾರ್ಗ್‌ನ ಮುಂದೆ ಒಂದು ವಿಧವಾದ ಪ್ರಶಾಂತತೆ

ಯಿಂದ ಮತ್ತು ಔದಾಸೀನ್ಯದಿಂದ ವರ್ತಿಸಲನುವಾಗುವಂತೆ, ತನ್ನ ಹೃದಯದ ಉದ್ವೇಗವನ್ನು ಹದಪಡಿಸಿಕೊಳ್ಳಲು, ಮಂಟಪದ ಹೊರಗೇ ಸ್ವಲ್ಪ ಹೊತ್ತು ನಿಂತಳು. ಆದರೆ ಆಕೆ ಸಮಾಧಾನ ಸ್ಥಿತಿಗೆ ಬರುವ ಮುನ್ನವೇ ದಿ–ಫಾರ್ಗ್ ಆಗಲೇ ಆಕೆಯ ಮುಂದೆ ಬಂದು ನಿಂತಿದ್ದ.

"ನನ್ನ ಪ್ರಾರ್ಥನೆಯನ್ನು ತಿರಸ್ಕರಿಸದೆ ಬಂದುದಕ್ಕೆ ನನ್ನ ವಂದನೆಗಳು. ನೀವೇನಾದರೂ ಒಪ್ಪಿಬರದೆ ಇದ್ದಿದ್ದರೆ, ನಾನು ತುಂಬ ಹತಾಶನಾಗುತ್ತಿದ್ದೆ" ಎಂದು ತಗ್ಗಿದ ದುಃಖಭರಿತ ಸ್ವರದಲ್ಲಿ ಆತ ಹೇಳಿದ.

"ನಾನೇನೋ ಬಂದದ್ದಾಗಿದೆ. ಬಂದದ್ದು ತಪ್ಪಾಯಿತು ಎಂದು ಅನಂತರ ನಾನು ಪಶ್ಚಾತ್ತಾಪ ಪಡುವಂತೆ ಆಗಲು ನೀವು ಆಸ್ಪದ ಕೊಡುವುದಿಲ್ಲವೆಂದು ನನ್ನ ನಂಬಿಕೆ," ಎಂದು ಸಾಂಪ್ರದಾಯಿಕವಾದ ಮಾತುಗಳಲ್ಲಿ ಮರಯ್ಯಾ ಕಿರಿಲ್ಲೋವ್ನಾ ಉತ್ತರಿಸಿದಳು.

ಆತ ತಕ್ಷಣ ಪ್ರತ್ಯುತ್ತರವೀಯಲಿಲ್ಲ. ಏನೋ ಗಹನವಾದ ವಿಷಯ ಹೇಳುವುದಕ್ಕೆಂದು ಧೈರ್ಯ ತಂದುಕೊಳ್ಳಲು ಪ್ರಯತ್ನಿಸುತ್ತಿದ್ದ.

"ಪರಿಸ್ಥಿತಿ ಬಿಗಡಾಯಿಸಿಬಿಟ್ಟಿದೆ....ನಾನು ನಿಮ್ಮನ್ನು ಬಿಟ್ಟು ಹೋಗಬೇಕಾಗಿದೆ" ಎಂದು ಕಷ್ಟಪಟ್ಟುಕೊಂಡು ಹೇಳಿದ: "ನಿಮಗೆ ಸ್ವಲ್ಪದರಲ್ಲೇ ಬಹುಶಃ ಎಲ್ಲವೂ ಗೊತ್ತಾಗುತ್ತೆ....ಆದರೆ ಅಗಲುವುದಕ್ಕೆ ಮುನ್ನ ನಾನೇ ನಿಮಗೆ ಹೇಳಬೇಕಾದ ವಿಷಯಗಳು ಕೆಲವಿವೆ...."

ಮರಯ್ಯಾ ಕಿರಿಲ್ಲೋವ್ನಾ ಮೌನದಿಂದ ಕೇಳಿದಳು. ನಿರೀಕ್ಷಿಸಿದಂತೆ, ಆತ ತನ್ನ ಪ್ರಣಯ ನಿವೇದನೆಗೋಸ್ಕರ ಈ ಆರಂಭದ ಮಾತುಗಳನ್ನಾಡುತ್ತಿರಬಹುದೆಂದು ಆಕೆ ಎಣಿಸಿದಳು.

"ಇದುವರೆಗೂ ನೀವು ತಿಳಿದುಕೊಂಡಿರುವಂತಹ ಮನುಷ್ಯನಲ್ಲ, ನಾನು" ಎಂದು ತಲೆ ತಗ್ಗಿಸಿ, ಮಾತು ಮುಂದುವರಿಸಿದ: "ನಾನು ಫ್ರೆಂಚ್ ದೇಶೀಯ ದಿ–ಫಾರ್ಗ್ ಅಲ್ಲ. ನಾನು ದುಬ್ರೋವ್‌ಸ್ಕಿ."

ಮರಯ್ಯಾಕಿರಿಲ್ಲೋವ್ನಾ ಬೆಚ್ಚಿಬಿದ್ದು ತಟಕ್ಕನೆ ಕೂಗಿಕೊಂಡಳು.

"ಗಾಬರಿಪಡಬೇಡಿ. ನಾನು ಬೇಡಿಕೊಳ್ಳುತ್ತೇನೆ–ನನ್ನ ಹೆಸರು ಕೇಳಿ ನೀವು ಗಾಬರಿಪಡಬೇಕಾಗಿದ್ದಿಲ್ಲ. ಹೌದು, ನಾನು ಆತನೇ–ದೊರಕುತ್ತಿದ್ದ ಒಂದು ತುತ್ತಿಗೂ ಕಲ್ಲು ಬಿದ್ದ ಮೇಲೆ, ಪಿತ್ರಾರ್ಜಿತ ಆಸ್ತಿಯಿಂದ ಹೊರದೂಡಲ್ಪಟ್ಟು ದರೋಡೆಕೋರನಾಗಿರುವ ಆ ದೌರ್ಭಾಗ್ಯ

ಪುರುಷ ನಾನೇ. ಆದರೆ, ನೀವು ನನ್ನನ್ನು ಕಂಡು ಭಯಪಡಲು ಏನೇನೂ ಕಾರಣವಿಲ್ಲ. ನಿಮ್ಮ ವಿಷಯದಲ್ಲೇ ಆಗಲಿ, ನಿಮ್ಮ ತಂದೆಯ ವಿಷಯ ದಲ್ಲೇ ಆಗಲಿ, ಅಪಾಯವಾಗುವುದೆಂದು ನೀವು ಅಂಜಬೇಕಾಗಿಲ್ಲ. ಆದ ದ್ದೆಲ್ಲಾ ಆಗಿಹೋಗಿದೆ. ನಾನು ಆತನನ್ನು ಕ್ಷಮಿಸಿಬಿಟ್ಟಿದ್ದೇನೆ. ನೀವೇ ಆತನನ್ನು ರಕ್ಷಿಸಿದಿರಿ. ನನ್ನ ಮೊದಲನೆಯ ದೌರ್ಜನ್ಯ ಕೃತ್ಯ ಆತನ ಮೇಲೇ ನಡಸಬೇಕೆಂದು ನಾನು ಮೊದಲು ಇಚ್ಛಿಪಟ್ಟಿದ್ದೆ. ಯಾವ ಮೂಲೆಗೆ ಬೆಂಕಿ ಇಟ್ಟರೆ ಅವನ ಇಡೀ ಮನೆ ಸುಟ್ಟು ಬೂದಿಯಾಗುತ್ತೆ, ಯಾವ ಕಡೆಯಿಂದ ಅವನ ಮಲಗುವ ಕೋಣೆಯನ್ನು ಪ್ರವೇಶಿಸಬೇಕು, ಅವನು ತಪ್ಪಿಸಿಕೊಳ್ಳಲಾಗದಂತೆ ಏನೇನು ಏರ್ಪಾಟು ಮಾಡಬೇಕು—ಎಂಬು ದನ್ನೆಲ್ಲಾ ಪರಿಶೀಲಿಸುತ್ತಾ ಅವನ ಮಹಲಿನ ಸುತ್ತಲೇ ಸುತ್ತಾಡುತ್ತಿದ್ದೆ. ಆಗ ನೀವು ಬಂದಿರಿ, ದೇವಕನ್ಯೆಯಂತೆ ಬಂದಿರಿ. ನನ್ನ ಕಠೋರ ಹೃದ ಯವನ್ನು ಮೃದುವಾಗಿಸಿ, ವಶಪಡಿಸಿಕೊಂಡಿರಿ. ನೀವು ವಾಸಿಸುವ ಮನೆ ಪವಿತ್ರವಾದುದು, ನಿಮ್ಮ ರಕ್ತ ಸಂಬಂಧಿಗಳಲ್ಲಿ ಯಾರೊಬ್ಬರೂ ನನ್ನ ದುರಾಗ್ರಹಕ್ಕೆ ತುತ್ತಾಗಬಾರದು—ಎಂದು ನನಗೆ ನಾನೇ ಹೇಳಿಕೊಂಡೆ. ಸೇಡು ತೀರಿಸಿಕೊಳ್ಳುವ ಯೋಚನೆಗಳೆಲ್ಲಾ ಕೇವಲ ಹುಚ್ಚುತನ ಎಂದು ಬಿಟ್ಟುಕೊಟ್ಟೆ. ಅನೇಕ ದಿನಗಳು ಇಲ್ಲೇ, ಉದ್ಯಾನವನದಲ್ಲೇ, ಅಲೆದಾ ಡುತ್ತಾ ನೀವು ಉಡುತ್ತಿದ್ದ ಶುಭ್ರ ಧವಳ ವಸ್ತ್ರವನ್ನು ದೂರದಿಂದಲೇ ಕಂಡಾದರೂ ತೃಪ್ತಿಪಟ್ಟುಕೊಳ್ಳುತ್ತಿದ್ದೆ. ನೀವು ವಿಚಾರ ಮಗ್ನರಾಗಿ, ಅನ್ಯ ಮನಸ್ಕರಾಗಿ, ಅಜಾಗರೂಕರಾಗಿ ವಾಯುವಿಹಾರ ಹೊರಟಾಗಲೆಲ್ಲಾ ನಾನು ಪೊದೆಗಳ ಮರೆಯಲ್ಲಿ ಕದ್ದು ನಿಮ್ಮನ್ನೇ ಹಿಂಬಾಲಿಸುತ್ತಿದ್ದೆ. ಹಾಗೆ ಮಾಡಿದಾಗಲೆಲ್ಲ, ನಾನು ನಿಮಗೆ ಬೆಂಗಾವಲಾಗಿದ್ದೇನೆ, ನಾನು ನಿಮಗೆ ಅಗೋಚರನಾಗಿ ಹಿಂಬಾಲಿಸುತ್ತಿದ್ದಾಗ ನಿಮಗೆ ಯಾವ ವಿಘವಾದ ತೊಂದ ರೆಯೂ ಆಗಲಾರದು—ಎಂದು ಕಲ್ಪಿಸಿಕೊಂಡು ಅಮಿತಾನಂದಪಡುತ್ತಿದ್ದೆ. ಕೊನೆಗೆ ಒಂದು ಸದವಕಾಶ ದೊರಕಿತು. ನಿಮ್ಮ ಮನೆಯಲ್ಲೇ ವಾಸ ಮಾಡುವ ಸುಯೋಗ ಲಭಿಸಿತು. ಈ ಕಳೆದ ಮೂರು ವಾರಗಳು ನನಗೆ ಅನಂತ ಸುಖಪ್ರದ ಕಾಲವಾಗಿದ್ದಿತು. ಅದರ ನೆನಪು, ನನ್ನ ದುಃಖಭರಿತ ಜೀವನದಲ್ಲಿ ಬೆಳಕನ್ನೀಯುವಂತಹುದು....ಆದರೆ....ಆದರೆ, ಇದೇ ತಾನೆ ವಿಷಯ ತಿಳಿಯಬಂದಿದೆ: ಇನ್ನುಮುಂದೆ ಇಲ್ಲಿರಲು ನನಗೆ ಸಾಧ್ಯವಾಗದು.

ಇಂದೇ ನಿಮ್ಮ ಬೀಳ್ಕೊಟ್ಟು ಹೋಗಬೇಕಾಗಿದೆ.... ಇದೀಗಲೇ ಹೋಗಬೇಕು. ಆದರೆ ಹೋಗುವುದಕ್ಕೆ ಮುನ್ನ, ಅನಂತರ ನೀವು ನನ್ನನ್ನು ಶಪಿಸುವಂತಾಗದಿರಲೆಂದು, ನಿಮಗೆ ನನ್ನ ಸಮಾಚಾರಗಳನ್ನೆಲ್ಲಾ ತಿಳಿಸಿ ಹೋಗೋಣವೆಂದು ಇಚ್ಛೆಯಾಯಿತು. ದಯವಿಟ್ಟು ನೀವು ನನ್ನನ್ನು ದ್ವೇಷಿಸಬೇಡಿ. ಆಗೊಮ್ಮೆ–ಈಗೊಮ್ಮೆ ನೀವು ದುಬ್ರೋವ್‌ಸ್ಕಿಯನ್ನು ನೆನಸಿಕೊಳ್ಳುವುದೇ ಆದರೆ, ಅದೇ ನನಗೆ ಪರಮಸಂತೋಷ. ದುಬ್ರೋವ್‌ಸ್ಕಿ ಹುಟ್ಟಿದ್ದು ದರೋಡೆಕೋರನಾಗಿ ಬಾಳಲಿಕ್ಕಲ್ಲ, ಉನ್ನತ ಬಾಳ್ವೆ ನಡಸಲೋಸುಗ; ಆತನ ಹೃದಯ ನಿಮ್ಮನ್ನು ಪ್ರೀತಿಸಲು ತಕ್ಕುದಾದ ಹೃದಯವಾಗಿತ್ತು – ಎಂದು ನೀವು ತಿಳಿದುಕೊಂಡದ್ದೇ ಆದರೆ, ನನ್ನನ್ನು ಕೃತಾರ್ಥನನ್ನಾಗಿ ಮಾಡಿದಂತೆ ಆಗುತ್ತೆ. ಆತ ಎಂದೆಂದಿಗೂ...."

ಅಷ್ಟು ಹೊತ್ತಿಗೆ ಯಾರೋ ಮೆಲ್ಲಗೆ ಸಿಳ್ಳು ಹಾಕಿದ್ದು ಕೇಳಿಬಂತು, ದುಬ್ರೋವ್‌ಸ್ಕಿ ಮಾತು ನಿಲ್ಲಿಸಿದ.... ಆಕೆಯ ಹಸ್ತವನ್ನು ಅಮುಕಿ ಹಿಡಿದು, ಪ್ರೇಮತಾಪಗಳಿಂದ ಬೇಯುತ್ತಿದ್ದ ತನ್ನ ತುಟಿಗಳಿಗೆ ಒತ್ತಿಕೊಂಡ. ಸಿಳ್ಳಿನ ಶಬ್ದ ಪುನಃ ಕೇಳಿಬಂತು.

"ಕ್ಷಮಿಸಿ. ಆ ಸಿಳ್ಳಿನ ಶಬ್ದ ನನಗಾಗಿಯೇ – ನಾನು ಹೋಗಲೇಬೇಕು. ಒಂದು ಕ್ಷಣ ತಡವಾದರೂ ಸರ್ವನಾಶವಾಗಿಹೋಗುತ್ತೆ" ಎಂದ.

ಕೈ ಸಡಿಲಿಸಿ, ಆಕೆಯಿಂದ ಕೆಲವು ಹೆಜ್ಜೆ ದೂರ ಸರಿದ. ಮರಯ್ಯಾ ಕಿರಿಲೋವ್ನಾ ನಿಶ್ಚಲಳಾಗಿ ನಿಂತಲ್ಲೇ ನಿಂತಿದ್ದಳು. ಕೂಡಲೇ ಆತ ಹಿಂತಿರುಗಿ ಬಂದು ಆಕೆಯ ಕೈಯನ್ನು ಮತ್ತೆ ಹಿಡಿದುಕೊಂಡ.

"ಏನಾದರೂ ನಿಮಗೆ ಕಷ್ಟಗಳು ಬಂದೊದಗಿ ಯಾರೂ ಸಹಾಯ ಮಾಡದಿದ್ದಾಗ, ಯಾರ ರಕ್ಷಣೆಯೂ ದೊರಕದಿದ್ದಾಗ, ನನ್ನ ಕಡೆಗೆ ನೀವು ನೋಡುವಿರೆಂದು ವಾಗ್ದಾನ ಮಾಡುವಿರಾ? ನಿಮ್ಮ ಸಮಸ್ಯೆಗಳ ಪರಿಹಾರಕ್ಕೆ ನನ್ನಿಂದ ಏನಾದರೂ ಆಗುವುದಿದ್ದರೆ ಅದನ್ನು ಕೇಳಿ ಪಡೆಯುವಿರೆಂದು ಆಶ್ವಾಸನೆ ನೀಡುವಿರಾ? ನನ್ನ ಈ ನಿಷ್ಕಳಂಕ ಪ್ರೇಮವನ್ನು ತಿರಸ್ಕರಿಸುವುದಿಲ್ಲವೆಂದು ಮಾತು ಕೊಡುವಿರಾ?" ಎಂದು ಗದ್ಗದ ಕಂಠದಲ್ಲಿ, ಕೋಮಲ ಸ್ವರದಲ್ಲಿ, ಮನಕರಗುವಂತೆ ಕೇಳಿಕೊಂಡ.

ಮರಯ್ಯಾ ಕಿರಿಲೋವ್ನಾ, ಬಿಕ್ಕಳಿಸುತ್ತಾ ಮೌನವಾಗಿ ಕಣ್ಣೀರು ಸುರಿಸಿದಳು. ಸಿಳ್ಳಿನ ಶಬ್ದ ಮೂರನೆಯ ಬಾರಿ ಕೇಳಿಸಿತು.

"ಇನ್ನೇನು ನನ್ನ ಸರ್ವನಾಶಕ್ಕೆ ಅವಕಾಶವೀಯುವಿರಾ? ನೀವು ಉತ್ತರವೀಯುವ ತನಕ ನಿಮ್ಮನ್ನು ಬಿಟ್ಟು ಕದಲಲಾರೆ! ನೀವು ಮಾತು ಕೊಡು ವಿರೊ? ಅಥವಾ ಇಲ್ಲವೊ?" ಎಂದು ದುಬ್ರೊವ್‌ಸ್ಕಿ ಉದ್ವೇಗದಿಂದ ಕೇಳಿದ.

"ನಾನು ಮಾತು ಕೊಡುತ್ತೇನೆ" ಎಂದು ಪಿಸುಮಾತಿನಲ್ಲಿ ಬಿಡಿಬಿಡಿ ಯಾಗಿ ಹೇಳಿದಳು ಆ ನಿರ್ಭಾಗ್ಯ ನೀರೆ.

ದುಬ್ರೊವ್‌ಸ್ಕಿಯೊಡನೆ ಭೇಟಿ ಮಾಡಿದುದರ ಪರಿಣಾಮವಾಗಿ ತುಂಬ ಚಿತ್ತಕ್ಷೋಭೆಗೊಂಡು, ಮರಯ್ಯಾ ಕಿರಿಲ್ಲೋವ್ನಾ ಉದ್ಯಾನವನವನ್ನು ಬಿಟ್ಟು ಹೊರಟಳು. ಮನೆಯ ಹತ್ತಿರ ಬಂದಾಗ, ಅಂಗಳದಲ್ಲಿ ಜನಸಂದಣಿ ಇದ್ದುದು ಕಂಡುಬಂತು. ಗೃಹಕೃತ್ಯದವರೆಲ್ಲಾ ಅತ್ತಿಂದಿತ್ತ ಚಲಿಸುತ್ತಾ ಓಡಾಡುತ್ತಿದ್ದರು. ಮನೆಗೆ ಮನೆಯೇ ಚಲಿಸುತ್ತಿರುವಂತೆ ತೋರುತ್ತಿತ್ತು. ದ್ವಾರಮಂಟಪದ ಬಳಿ ಕುದುರೆಯ ಸಾರೋಟೊಂದು ನಿಂತಿದ್ದಿತು. ಕಿರಿಲ್ಲಾ ಪೆಟ್ರೋವಿಚ್‌ನ ಮಾತಿನ ಧ್ವನಿ ದೂರದಿಂದಲೇ ಕೇಳಿಬರುತ್ತಿತ್ತು. ತನ್ನ ಗೈರುಹಾಜರಿ ಎಲ್ಲಿ ಗೊತ್ತಾಗಿ ಹೋಗಿದೆಯೋ ಎಂದು ಹೆದರಿ, ಆಕೆ ಬೇಗ ಮನೆಯೊಳಕ್ಕೆ ಹೋದಳು. ಫೌಜುದಾರನೂ ನಿಂತಿದ್ದ. ಅವನ ಸುತ್ತ ಅತಿಥಿಗಳು ಗುಂಪಾಗಿ ನೆರೆದು, ಅವನ ಮೇಲೆ ಪ್ರಶ್ನೆಗಳ ಸುರಿ ಮಳೆ ಸುರಿ ಸುತ್ತಿದ್ದರು. ಫೌಜುದಾರ ಎಲ್ಲೋ ಪ್ರಯಾಣ ಹೊರಟವನಂತೆ ಪೋಷಾಕು ಧರಿಸಿದ್ದ. ಶಿರದಿಂದ ಪಾದದವರೆಗೂ ಆಯುಧಗಳನ್ನು ತೊಟ್ಟಿದ್ದ. ಯಾವುದೋ ಒಂದು ರಹಸ್ಯ ಪತ್ತೇದಾರೀ ತರದೂದಿನಲ್ಲಿ ತೊಡಗಿರುವವನಂತೆ ಎಲ್ಲರ ಪ್ರಶ್ನೆಗಳಿಗೂ ಉತ್ತರ ಹೇಳುತ್ತಿದ್ದ.

"ಎಲ್ಲಿಗೆ ಹೋಗಿದ್ದೆ, ಮಾಷಾ? ದಿ–ಫಾರ್ಗ್ ಮಹಾಶಯ ನಿನಗೆ ಭೇಟಿಯಾಗಿದ್ದರೆ?" ಎಂದು ಕೇಳಿದ ಪೆಟ್ರೋವಿಚ್.

ಇಲ್ಲವೆಂದು ಉತ್ತರಿಸುವುದಕ್ಕೆ ಮಾಷಾ ತನ್ನ ಶಕ್ತಿಯನ್ನೆಲ್ಲಾ ಉಪ ಯೋಗಿಸಬೇಕಾಯಿತು.

"ಇಲ್ಲಿ ನೋಡು, ಈ ವಿಚಿತ್ರವನ್ನ: ಆತನನ್ನು ಕೈದು ಮಾಡಲು ಈ ಫೌಜುದಾರ ಬಂದಿದ್ದಾನೆ. ಆತ ದುಬ್ರೊವ್‌ಸ್ಕಿಯೇ ಹೊರತು ಫ್ರೆಂಚ್ ಶಿಕ್ಷಕನಲ್ಲ ಎಂದು ಇವನು ವಾದಿಸುತ್ತಿದ್ದಾನೆ," ಎಂದು ಪೆಟ್ರೋವಿಚ್ ಮಾತನ್ನು ಮುಂದುವರೆಸಿದ.

"ಹೌದು, ಮಹಾಪ್ರಭು. ಶಿಕ್ಷಕನ ಎಲ್ಲಾ ಲಕ್ಷಣ–ಚರ್ಯೆಗಳೂ,

ದುಬ್ರೋವ್‌ಸ್ಕಿಯವರೇ! ಸರಿಯಾಗಿ ಹೊಂದುತ್ತವೆ," ಎಂದ ಫೌಜುದಾರ ಗೌರವ ಸೂಚಿಸುತ್ತಾ.

"ಸರಿ, ಸರಿ, ನಿನ್ನ ರೂಪು-ಲಕ್ಷಣಗಳನ್ನು ಕಟ್ಟಿಕೊಂಡು ನೀನು ಎಲ್ಲಿ ಬೇಕಾದರೂ ಹಾಳಾಗಿಹೋಗು! ನಾನೇ ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸದ ಹೊರತು, ನನ್ನ ಶಿಕ್ಷಕನನ್ನು ನಾನು ಬಿಟ್ಟುಕೊಡುವುದಿಲ್ಲ. ಆ ಸುಳ್ಳುಗಾರ, ಹೇಡಿ ಸವ್‌ಸುಟಿಷ್‌ನನ್ನು ಯಾರು ತಾನೇ ನಂಬುವರು? ಶಿಕ್ಷಕ ತನ್ನನ್ನು ಬೆದರಿಸಿ ದೋಚುವುದಕ್ಕೆ ಹವಣಿಸಿದ ಅಂತ ಅವನು ಕನಸು ಕಂಡಿರಬಹುದು. ಅದೇ ದಿನ ಬೆಳಗ್ಗೆ, ಕಳ್ಳತನದ ಬಗ್ಗೆ ಅವನು ನನಗೆ ಒಂದು ಮಾತು ಕೂಡ ಏಕೆ ಹೇಳಲಿಲ್ಲ?"

"ಆ ಫ್ರೆಂಚ್ ಶಿಕ್ಷಕ ಅವನಿಗೆ ಬೆದರಿಕೆ ಹಾಕಿದ್ದ, ಮಹಾಸ್ವಾಮಿ. ಅದನ್ನು ಗುಟ್ಟಾಗಿಟ್ಟಿರುತ್ತೇನೆ ಅಂತ ಪ್ರಮಾಣ ಮಾಡಿಸಿದ್ದ...." ಎಂದು ಫೌಜುದಾರ ಉತ್ತರವಿತ್ತ.

"ಎಲ್ಲಾ ಸುಳ್ಳಿನ ಕಂತೆ. ಈಗಲೇ ಇವನ್ನೆಲ್ಲಾ ಬಗೆಹರಿಸಿಬಿಡುತ್ತೇನೆ," ಎಂದು, ಆಗ ತಾನೇ ಪ್ರವೇಶಿಸಿದ ಸೇವಕನೊಬ್ಬನನ್ನು ಪೆಟ್ರೋವಿಚ್ ಕೇಳಿದ: "ಎಲ್ಲಿ ಹೋದರು, ಶಿಕ್ಷಕರು?"

"ಅವರು ಎಲ್ಲೂ ಕಾಣ ಸಿಗರು," ಎಂದ ಸೇವಕ.

"ಹಾಗಾದರೆ ಹುಡುಕಿ" ಗದರಿ ಹೇಳಿದ ಪೆಟ್ರೋವಿಚ್. ಸಂದೇಹ, ಮನಸ್ಸನ್ನು ಕಾಡತೊಡಗಿತು. "ಎಲ್ಲಯ್ಯ, ನಿನ್ನ ಆ ಅಮೂಲ್ಯ ಲಕ್ಷಣಗಳ ಪಟ್ಟಿಯನ್ನು ತಾ ಇಲ್ಲಿ," ಎಂದು ಫೌಜುದಾರನನ್ನು ಕೇಳಿದ. ಅವನು ಕೂಡಲೇ ಆ ಪಟ್ಟಿಯನ್ನು ಮುಂದೊಡ್ಡಿದ.

"ಹುಮ್, ವಯಸ್ಸು ಇಪ್ಪತ್ತಮೂರು; ಮಧ್ಯಸ್ಥ ಎತ್ತರ; ನೀಟಾಗಿ ಕತ್ತರಿಸಿದ ತಲೆಗೂದಲು; ಗಡ್ಡವಿಲ್ಲ; ಕಂದುಬಣ್ಣದ ಕಣ್ಣುಗಳು....ಅದು ಸರಿ. ಆದರೆ ಕೇವಲ ಇದರಿಂದಲೇ ಏನನ್ನೂ ಸಾಧಿಸಲಾಗದು........ಎಲ್ಲಿ ಹೋಗಿದ್ದಾನೆ, ಈ ಶಿಕ್ಷಕ?"

"ಎಲ್ಲೂ ಕಾಣಸಿಗುತ್ತಿಲ್ಲ," ಪುನಃ ಅದೇ ಉತ್ತರ ಬಂತು.

ಕಿರಿಲ್ಲಾ ಪೆಟ್ರೋವಿಚ್‌ನ ಮನಸ್ಸು ತಲ್ಲಣಗೊಂಡಿತು. ಮರಿಯ್ಯಾ ಕಿರಿಲ್ಲೋವ್ನಾಳಂತೂ ಜೀವಂತ ಶವವಾಗಿದ್ದಳು.

ಆಕೆಯ ನಿಸ್ತೇಜ ಮುಖವನ್ನು ಕಂಡು, "ಇದೇನು ಮಾಷಾ, ನಿನ್ನ

ಮುಖವೇಕೆ ಇಷ್ಟು ಬಾಡಿಹೋಗಿದೆ? ನಿನ್ನನ್ನು ಗಾಬರಿಗೊಳಿಸಿಬಿಟ್ಟಿದ್ದಾರೆ, ಈ ಜನ" ಎಂದು ತಂದೆ ಆತಂಕಿಸಿದ.

"ಹಾಗೇನೂ ಇಲ್ಲಪ್ಪ. ಸ್ವಲ್ಪ ತಲೆ ನೋವು, ಅಷ್ಟೆ."

"ಹಾಗಾದರೆ ನಿನ್ನ ಕೋಣೆಗೆ ನೀನು ಹೋಗಮ್ಮಾ, ನೀನೇನೂ ಯೋಚನೆ ಮಾಡಬೇಡ, ವ್ಯಾಕುಲ ಪಡಬೇಡ."

ಮಾಷಾ ತಂದೆಯ ಹಸ್ತವನ್ನು ಚುಂಬಿಸಿ, ಕೂಡಲೇ ತನ್ನ ಕೋಣೆಗೆ ಹೊರಟುಹೋದಳು. ಅಲ್ಲಿ ಹಾಸಿಗೆಯ ಮೇಲೆ ಬಿದ್ದುಕೊಂಡು ಉರುಳಾಡುತ್ತಾ ಭಾವೋನ್ಮತ್ತಳಾಗಿ ಬಿಕ್ಕಳಿಸಿ ಅಳತೊಡಗಿದಳು. ಆಮೇಲೆ ಮೂರ್ಛೆ ಹೋದವಳಂತೆ ಬಿದ್ದುಬಿಟ್ಟಳು. ಸೇವಕಿಯರು ಓಡೋಡಿ ಬಂದು, ಬಹು ಕಷ್ಟದಿಂದ ಆಕೆಯ ಪೋಷಾಕುಗಳನ್ನು ಬಿಚ್ಚಿದರು. ಮುಖದ ಮೇಲೆ ತಣ್ಣೀರು ಚಿಮುಕಿಸಿ, ಔಷಧಿಗಳನ್ನುಪಯೋಗಿಸಿ ಪ್ರಜ್ಞೆ ಹಿಂದಿರುಗಿ ಶಾಂತಳಾಗುವಂತೆ ಮಾಡಿದರು. ಅನಂತರ ಹಾಸಿಗೆಯ ಮೇಲೆ ಮಲಗಿಸಿ ಗಾಳಿ ಹಾಕಿದರು. ಆಕೆ ಹಾಗೆಯೇ ನಿದ್ರೆಹೋದಳು.

ಏತನ್ಮಧ್ಯೆ, ಎಷ್ಟು ಹುಡುಕಿದರೂ ಫ್ರೆಂಚ್ ಶಿಕ್ಷಕನ ಸುಳಿವೇ ಸಿಗಲಿಲ್ಲ. ಕಿರಿಲ್ಲಾ ಪೆಟ್ರೋವಿಚ್, ಬಜಾರದಲ್ಲಿ ಶತಪಥ ತಿರುಗುತ್ತಾ, 'ಮೊಳಗಿರಿ, ವಿಜಯ ದುಂದುಭಿಗಳೇ!' ಎಂದು, ಅನಿಷ್ಟ ಸೂಚಿಸುವಂತೆ ಕರ್ಕಶವಾಗಿ ಸಿಳ್ಳು ಹಾಕುತ್ತಿದ್ದ. ಅತಿಥಿಗಳು ತಮ್ಮತಮ್ಮಲ್ಲೇ ಗುಸಗುಸ ಮಾತನಾಡಿಕೊಳ್ಳುತ್ತಿದ್ದರು. ಫ್ರೆಂಚ್ ಶಿಕ್ಷಕ ಅಂತೂ ಕೈ ತಪ್ಪಿಸಿಕೊಂಡು ಹೊರಟುಹೋಗಿದ್ದ. ಫೌಜುದಾರನಿಗೆ ಮುಖಭಂಗವಾದಂತಾಗಿ, ತಲೆ ತಗ್ಗಿಸಿಕೊಂಡು ನಿಂತಿದ್ದ. ಆ ಶಿಕ್ಷಕನಿಗೆ ಎಲ್ಲೋ ಸುಳಿವು ಸಿಕ್ಕಿರಬೇಕು. ಮುಂಜಾಗ್ರತೆ ವಹಿಸಿ ತಪ್ಪಿಸಿಕೊಂಡು ಹೊರಟುಹೋಗಿದ್ದಾನೆ. ಆದರೆ ಸುಳಿವು ಕೊಟ್ಟವರಾರು, ಯಾವ ರೀತಿ ಅವನು ತಪ್ಪಿಸಿಕೊಂಡು ಹೋದ— ಇವು ರಹಸ್ಯಗಳಾಗಿಯೇ ಉಳಿದುವು.

ಗಂಟೆ ಹನ್ನೊಂದಾಯಿತು. ಯಾರೂ ಮಲಗುವ ಯೋಚನೆಯನ್ನೇ ಮಾಡಲಿಲ್ಲ. ಕೊನೆಗೆ ಪೆಟ್ರೋವಿಚ್ ರೇಗುತ್ತಾ ಫೌಜುದಾರನಿಗೆ, "ಈಗ, ಏನು ಹಾಗಾದರೆ? ರಾತ್ರಿ ಇಡೀ ನೀನು ಇಲ್ಲಿ ಇರುವ ಹಾಗಿಲ್ಲ. ನನ್ನ ಮನೆಯೇನು ಛತ್ರ ಕೆಟ್ಟುಹೋಗಲಿಲ್ಲ. ಆತ ನಿಜವಾಗಲೂ ದುಬ್ರೋವ್‌ಸ್ಕಿಯೇ ಆಗಿದ್ದರೆ, ಆತನನ್ನು ಹಿಡಿಯುವಷ್ಟು ಚಾತುರ್ಯ ನಿನ್ನಲ್ಲಿಲ್ಲ ಎಂದು

ಗೊತ್ತಾದ ಹಾಗಾಯಿತು. ಈಗ ಸುಮ್ಮನೆ ಮನೆಗೆ ಹೋಗು. ಇನ್ನೊಂದು ಬಾರಿ ಸ್ವಲ್ಪ ಎಚ್ಚರಿಕೆ ವಹಿಸಿ ಚುರುಕಾಗಿ ಕೆಲಸಮಾಡು," ಎಂದು ಹೇಳಿ, ನೆರೆದ ಅತಿಥಿಗಳನ್ನುದ್ದೇಶಿಸಿ, "ಇನ್ನು ನಿಮಗೂ ಅಷ್ಟೆ. ಮನೆಗೆ ಹೋಗುವ ಹೊತ್ತಾಯಿತು. ನಿಮ್ಮ ಗಾಡಿಗಳಿಗೆ ಹೇಳಿಕಳುಹಿಸಿ. ಹೊರಡಿ. ನಾನು ಮಲಗಲಿಕ್ಕೆ ಹೋಗಬೇಕು," ಎಂದ.

ಹೀಗೆ ಪೆಟ್ರೋವಿಚ್ ಅಂದು ತನ್ನ ಅತಿಥಿಗಳನ್ನು ಅಸಭ್ಯ ರೀತಿಯಲ್ಲಿ ಬೀಳ್ಕೊಟ್ಟ.

## ೫

ಹೇಳಬೇಕಾದ ಘಟನೆಗಳಾವುವೂ ಜರಗದೆ ಮತ್ತೆ ಸ್ವಲ್ಪ ಸಮಯ ಕಳೆಯಿತು. ಆದರೆ ಮುಂದೆ ಬಂದ ಬೇಸಗೆಯ ಆದಿಭಾಗದಲ್ಲಿ, ಪೆಟ್ರೋವಿಚ್‌ನ ಗೃಹಜೀವನದಲ್ಲಿ ಮಹತ್ವಪೂರ್ಣ ಬದಲಾವಣೆಗಳಾದುವು.

ಪೆಟ್ರೋವಿಚ್‌ನ ಜಮೀನಿನಿಂದ ಸುಮಾರು ಹದಿನೈದು ಮೈಲಿಗಳ ಆಚೆಗೆ ರಾಜಕುಮಾರ ವೆರೈಸ್ಕಿಯ ಸಂಪದ್ಭರಿತ ಜಮೀನಿದ್ದಿತು. ಈ ರಾಜಕುಮಾರ, ಬಹಳ ವರ್ಷಗಳ ಹಿಂದೆಯೇ ತನ್ನ ಜಮೀನ್ದಾರಿಯನ್ನು ಒಬ್ಬ ನಿವೃತ್ತ ಮಿಲಿಟರಿ ಮೇಜರ್‌ನ ವಶಕ್ಕೆ ಒಪ್ಪಿಸಿ, ವಿದೇಶಕ್ಕೆ ಹೊರಟು ಹೋಗಿದ್ದ. ಪೆಟ್ರೋವಿಚ್‌ನ ಜಮೀನ್ದಾರಿಗೂ (ಪ್ರೊಕ್ರೋವ್‌ಸ್ಕಾಯಿ) ಮತ್ತು ರಾಜಕುಮಾರನ ಜಮೀನ್ದಾರಿಗೂ (ಅರ್ಬಟೋವೋ) ಸಂಪರ್ಕವಿರಲಿಲ್ಲ. ಆದರೆ ಮೇ ತಿಂಗಳ ತುದಿಯ ಹೊತ್ತಿಗೆ, ರಾಜಕುಮಾರನು ವಿದೇಶದಿಂದ ತನ್ನ ಹಳ್ಳಿಗೆ ಹಿಂದಿರುಗಿದ. ಆತ ಆ ಹಳ್ಳಿಯನ್ನು ನೋಡಿಯೇ ಇರಲಿಲ್ಲ. ಪಟ್ಟಣಗಳ ಭೋಗ ಜೀವನಕ್ಕೆ ಹೊಂದಿಕೊಂಡು ಹೋಗಿದ್ದ ಆತನಿಗೆ ಹಳ್ಳಿಯ ಏಕಾಂತವಾಸ ಎರಡು ದಿನಗಳಲ್ಲೀ ಬೇಸರಹಿಡಿಸಿತು. ಆತನಿಗೂ ಬಹಳ ಹಿಂದೆ ಪೆಟ್ರೋವಿಚ್‌ನ ಪರಿಚಯವಾಗಿದ್ದಿತು. ಹಳ್ಳಿಗೆ ಬಂದ ಮೂರನೆಯ ದಿನವೇ, ಪೆಟ್ರೋವಿಚ್‌ನ ಮನೆಗೆ ಭೋಜನ–ಭೇಟಿಗೆಂದು ಹೊರಟ.

ರಾಜಕುಮಾರನಿಗೆ ಸುಮಾರು ಐವತ್ತು ವರ್ಷ ವಯಸ್ಸಾಗಿತ್ತು. ನೋಟಕ್ಕೆ, ಇನ್ನೂ ಹೆಚ್ಚು ವಯಸ್ಸಾದವನಂತೆ ಕಾಣುತ್ತಿದ್ದ. ಆತ ಅಭ್ಯಸಿಸಿದ ಎಲ್ಲ ವಿಧವಾದ ಕೆಟ್ಟಚಾಳಿಗಳೂ ಆತನ ಆರೋಗ್ಯವನ್ನು ಕೆಡಿಸಿ,

ದೇಹದ ಮೇಲೆ ಮಾಸದಂತಹ ಗುರುತುಗಳನ್ನು ಮೂಡಿಸಿದ್ದವು. ಇಷ್ಟಾದರೂ ಆತನ ಒಟ್ಟು ದೇಹದ ರೂಪ ಮೆಚ್ಚುವಂತಹದಾಗಿತ್ತು; ವ್ಯಕ್ತಿತ್ವ ಪ್ರಭಾವಶಾಲಿಯಾಗಿತ್ತು. ಆತ ಯಾವಾಗಲೂ ಜನರ ಮಧ್ಯೆಯೇ ಇರುತ್ತಿದ್ದ. ಈ ಅಭ್ಯಾಸ ಅವನ ಸಾಮಾನ್ಯ ವರ್ತನೆಗೆ ಘನತೆಯ ಮೆರುಗನ್ನು ಕೊಟ್ಟಿತ್ತು. ಅದರಲ್ಲೂ ಸ್ತ್ರೀಯರೊಂದಿಗೆ ವ್ಯವಹರಿಸುವುದನ್ನು ಆತ ಬಹು ಚೆನ್ನಾಗಿ ಅರಿತಿದ್ದ. ಆತನಿಗೆ ಸದಾ ಬೇಸರವಾಗುತ್ತಿದ್ದಿತು. ಅದ್ದರಿಂದ ಮೂರು ಹೊತ್ತೂ ಅವನು ಜೊತೆಗಾರರೊಂದಿಗೆ ಕ್ರೀಡಾ ವಿಲಾಸಗಳಲ್ಲಿ ತೊಡಗಿ, ತನ್ನ ಇಂದ್ರಿಯ ಚಾಪಲ್ಯಗಳನ್ನು ತೃಪ್ತಿಗೊಳಿಸಬೇಕಾಗಿತ್ತು. ಅದರಿಂದಲೇ ಆತ ಪೆಟ್ರೋವಿಷ್‌ನ ಮನೆಗೆ ಹೊರಟದ್ದು.

ರಾಜಕುಮಾರ, ತನ್ನ ಮನೆಗೆ ಬಂದುದರಿಂದ ಪೆಟ್ರೋವಿಷ್‌ಗೂ ಬಹಳ ಸಂತೋಷವಾಯಿತು. ವಿಶಾಲವಾದ ಪ್ರಪಂಚಜ್ಞಾನ ಪಡೆದಿರುವವನೊಬ್ಬ ತನಗೆ ಗೌರವ ಸಲ್ಲಿಸುತ್ತಿದ್ದಾನೆಂದೇ ಆತ ಬಗೆದ. ಎಂದಿನಂತೆಯೇ ಅತಿಥಿಗೆ ಸರ್ವೋಪಚಾರಗಳನ್ನೂ ನೀಡಿದ. ತನ್ನ ಜಮೀನಿನ ವೈಶಿಷ್ಟ್ಯಗಳನ್ನೆಲ್ಲಾ ತೋರಿಸಿಕೊಂಡು ಬಂದ. ಎಲ್ಲದಕ್ಕಿಂತ ಶ್ರೇಷ್ಠವೆನಿಸಿಕೊಂಡಿದ್ದ ಶ್ವಾನಮಂದಿರವನ್ನೂ ತೋರಿಸಲು ಮರೆಯಲಿಲ್ಲ. ರಾಜಕುಮಾರನಿಗೆ ಅದರಲ್ಲೇನೂ ಅಂತಹ ಸೊಗಸು ಕಾಣಲಿಲ್ಲ. ಅಲ್ಲಿ ತುಂಬಿದ್ದ ದುರ್ವಾಸನೆಯನ್ನು ತಡೆಯಲಾರದೆ, ಉಸಿರು ಕಟ್ಟಿದಂತಾಗಿ, ಸುಗಂಧ ದ್ರವ್ಯಗಳಲ್ಲದ್ದಿದ ಕರವಸ್ತ್ರದಿಂದ ಮೂಗು ಮುಚ್ಚಿಕೊಂಡು, ಬೇಗ ಹೊರಗೆ ಬಂದುಬಿಟ್ಟ. ಅಲ್ಲಿನ ಪುರಾತನ ಮಾದರಿಯ ಉದ್ಯಾನವನ, ಒಂದೇ ಮಟ್ಟಕ್ಕೆ ತರಿದುಹಾಕಿದ್ದ ನಿಂಬೇಮರಗಳು, ಆಯತಾಕಾರದ ಕೊಳಗಳು, ನೇರವಾದ ಕಾಲುದಾರಿಗಳು— ಇವು ಯಾವುವೂ ಅವನಿಗೆ ರುಚಿಸಲಿಲ್ಲ. ಅವನಿಗೆ ಇಂಗ್ಲೀಷ್ ಉದ್ಯಾನವನಗಳು ಮತ್ತು ಅವುಗಳ 'ನಿಸರ್ಗ ರಮಣೀಯತೆ' (ಅವನದೇ ಹೊಸ ಅರ್ಥವಿದ್ದಿತು, ಇದಕ್ಕೆ)—ಇವು ಬಹು ಇಷ್ಟವಾಗಿದ್ದುವು. ಆದರೂ ಪೆಟ್ರೋವಿಷ್‌ನ ಉದ್ಯಾನವನ್ನು ಹೊಗಳಿದ, ಮೆಚ್ಚಿಕೊಂಡವನಂತೆ ನಟಿಸಿದ. ಅಷ್ಟು ಹೊತ್ತಿಗೆ ಸೇವಕನೊಬ್ಬ ಬಂದು, ಭೋಜನಕ್ಕೆ ಅಣಿಮಾಡಲಾಗಿದೆಯೆಂದು ಬಿನ್ನವಿಸಿಕೊಂಡ. ಇಬ್ಬರೂ ಮನೆಯ ಕಡೆಗೆ ತೆರಳಿದರು. ರಾಜಕುಮಾರ ಆಗಲೇ ಬಹಳ ಬಳಲಿದ್ದ. ಕಾಲನ್ನು ಎಳೆದು ಎಳೆದು ಹಾಕುತ್ತಿದ್ದ. ಈ ಮನೆಗೆ ಏತಕ್ಕೆ ಬಂದೆನೋ ಎನಿಸಿಬಿಟ್ಟಿತ್ತು ಅವನಿಗೆ.

ಮನೆಯ ಒಳಹೊಕ್ಕ ಕೂಡಲೇ ಮರಯ್ಯಾ ಕಿರಿಲ್ಲೋವ್ನಾ ಅವರನ್ನು ಸ್ವಾಗತಿಸಿದಳು. ಆಕೆಯ ಸೌಂದರ್ಯವನ್ನು ಕಂಡು ಆ ಕಾಮುಕ ಮುದುಕ ಚಕ್ಕಸಬೆರಗಾದ. ಪೆಟ್ರೋವಿಷ್, ಅತಿಥಿಯನ್ನು ಆಕೆಯ ಪಕ್ಕದಲ್ಲೇ ಕೂಡಿಸಿದನು. ಆ ಕಿಶೋರಿಯ ಸಾನ್ನಿಧ್ಯದಲ್ಲಿ ಬಳಲಿಕೆ ಮಾಯವಾಗಿ, ಆ ಅಸಂಸ್ಕೃತ ರಾಜಕುಮಾರನಿಗೆ ಎಲ್ಲಿಲ್ಲದ ಉತ್ಸಾಹ ಬಂದಿತು. ಆಕೆಯ ಲಕ್ಷ್ಯವನ್ನು ತನ್ನ ಕಡೆಗೆ ಸೆಳೆಯಲು, ವಿದೇಶಗಳಲ್ಲಿನ ತನ್ನ ಅನುಭವದ ಕಥೆಗಳನ್ನೂ ಅಲ್ಲಿ ಕಂಡ ವಿಶೇಷ ಸಂಗತಿಗಳನ್ನೂ ಹುಮ್ಮಸ್ಸಿನಿಂದ ನಿರೂಪಿಸಿದ. ಭೋಜನವಾದ ಮೇಲೆ, ಕುದುರೆಸವಾರಿ ಹೋಗಬಹುದೆಂದು ಪೆಟ್ರೋವಿಷ್ ಸೂಚಿಸಿದ. ಆದರೆ ಆ ಕುಟಿಲ ಮುದುಕ ಕ್ಷಮೆ ಕೇಳಿದ. ಹಿಮ್ಮಡಿ ಸ್ವಲ್ಪ ಉಳುಕಿಬಿಟ್ಟಿದೆ ಎಂದು ತೋರಿಸಿ ಹೇಳುವ ನೆಪದಲ್ಲಿ, ತನ್ನ ಬಿರಿಬಾಳುವ ಮುಖಮಲ್ಲಿನ ಪಾದರಕ್ಷೆಗಳತ್ತ ಎಲ್ಲರ ಗಮನವನ್ನೂ ಆಕರ್ಷಿಸಿದ. ತನ್ನ ಪಕ್ಕದಲ್ಲಿ ಕುಳಿತಿದ್ದ ಮೋಹನಾಂಗಿಯ ಸಹವಾಸ ಬಿಟ್ಟು ಹೋಗಲು ಅವನಿಗೆ ಮನಸ್ಸಿರಲಿಲ್ಲ. ಆದ್ದರಿಂದ ಕುದುರೆಯ ಸವಾರಿಯ ಬದಲು ವಾಹನದಲ್ಲಿ ಕುಳಿತು ವಿಹಾರ ಹೋಗೋಣವೆಂದ. ತುರಗ ವಾಹನ ಸಿದ್ಧವಾಯಿತು. ಆ ಇಬ್ಬರು ಮುಪ್ಪಿನ ಪುರುಷರೂ ಮತ್ತು ಲಾವಣ್ಯಮಯಿ ಮಾಷಾಳೂ ಗಾಡಿಯಲ್ಲಿ ಕುಳಿತು ಹೊರಟರು. ಮಾತುಕತೆ ಒಂದೇ ಸಮನೆ ಅತ್ಯುತ್ಸಾಹದಿಂದ ಸಾಗಿತ್ತು. 'ಉನ್ನತ' ಸಮಾಜದ ವ್ಯಕ್ತಿಯಾಗಿದ್ದ ಆತನ ಆತ್ಮ ಪ್ರಶಂಸೆಯ ಮಾತುಗಳೂ ಹಾಸ್ಯ ಪೂರ್ಣ ಕಥೆಗಳೂ ಮರಯ್ಯಾಳಿಗೆ ಆನಂದವುಂಟುಮಾಡಿದುವು. ಹಾಗೇ ಗಾಡಿಯಲ್ಲಿ ಹೋಗುತ್ತಾ, ಸುಟ್ಟು ಬೂದಿಯಾಗಿದ್ದ ಒಂದು ಮನೆಯ ದೃಶ್ಯ ರಾಜಕುಮಾರ ವೆರೈಸ್ಕಿಯ ದೃಷ್ಟಿಗೆ ಬಿತ್ತು. "ಆ ಭಾಗವೂ ಪೆಟ್ರೋವಿಷ್‌ನಿಗೇ ಸೇರಿದ್ದೇ? ಅದು ಸುಟ್ಟು ಹೋಗಲು ಕಾರಣವೇನು?" ಎಂದು ಆತ ಕೇಳಿದ. ಪೆಟ್ರೋವಿಷ್ ಹುಬ್ಬುಗಂಟಿಕ್ಕಿದ. ಆ ಭಗ್ನ ಮಂದಿರವನ್ನು ಕಂಡಕೂಡಲೇ ಅವನ ಮನಸ್ಸಿನಲ್ಲಿ ಉದ್ಭವಿಸಿದ ಭಾವನೆಗಳು ಯಾವ ತರದಲ್ಲೂ ಸಂತಸದಾಯಕವಾಗಿರಲಿಲ್ಲ. ಆ ಜಾಗ ಈಗ ತನ್ನದಾಗಿದೆಯೆಂದೂ, ಹಿಂದೆ ಡುಬ್ರೋವ್‌ಸ್ಕಿಗೆ ಸೇರಿತ್ತೆಂದೂ ಮಾತ್ರ ಹೇಳಿ ಸುಮ್ಮನಾದ.

"ಡುಬ್ರೋವ್‌ಸ್ಕಿಗೆ?" ವೆರೈಸ್ಕಿ ಪ್ರತಿಧ್ವನಿಸಿದ. "ಏನು, ಆ ಚತುರ ಚೋರನಿಗೆ ಸೇರಿದ್ದಿತೆ?"

"ಅವನ ತಂದೆಗೆ. ತಂದೆಯೂ ಅಷ್ಟೇ ದುಷ್ಟನಾಗಿದ್ದ."

"ಅದು ಸರಿ. ಈ ನಮ್ಮ 'ರಿನಾಲ್ಡೋ'* ಕಥೆ ಏನಾಯಿತು? ಅವನೇನು ಜೀವಿಸಿದ್ದಾನೋ? ಅವನನ್ನು ಹಿಡಿದುಹಾಕಿದರೋ, ಹೇಗೆ?"

"ಅವನಿಗೇನು ಹೇಳಿ? ಜೀವಂತವಾಗೂ ಇದ್ದಾನೆ, ಬಹಿರಂಗವಾಗಿ ಓಡಾಡಿಕೊಂಡೂ ಇದ್ದಾನೆ. ನಮ್ಮ ಫೌಜುದಾರರು ಮತ್ತು ಪೋಲೀಸ್ ಅಧಿಕಾರಿಗಳು ಎಲ್ಲಿಯವರೆಗೆ ಕಳ್ಳರೊಡನೆ ಕಳ್ಳ ವ್ಯಾಪಾರ ಇಟ್ಟುಕೊಂಡು ಲಂಚಕ್ಕೆ ಕೈ ಒಡ್ಡುತ್ತಾರೋ, ಅಲ್ಲಿಯವರೆಗೆ ಆತನನ್ನು ಹಿಡಿಯುವುದು ಕಷ್ಟ. ಅಂದಹಾಗೆ, ರಾಜಕುಮಾರರೇ, ದುಬ್ರೋವ್‌ಸ್ಕಿ ನಿಮ್ಮ ಜಮೀನ್ದಾರಿ ಹಳ್ಳಿ ಅರ್ಬಟೋವೋಗೂ ಭೇಟಿ ಕೊಟ್ಟಿದ್ದಾನೆ, ಅಲ್ಲವೇ?"

"ಹೌದು. ಕಳೆದ ವರ್ಷ ಎಲ್ಲೋ ಕೆಲವು ಕಡೆ ಮನೆಗಳನ್ನು ಸುಟ್ಟು ಮತ್ತೆ ಕೆಲವು ಕಡೆ ಆಸ್ತಿಯನ್ನು ದೋಚಿಕೊಂಡು ಹೋದನೆಂದು ಕೇಳಿದೆ. ಏನು, ಮರಯ್ಯಾ ಕಿರಿಲ್ಲೋವ್ನಾ, ಈ ಅದ್ಭುತ ನಾಯಕನ ವಿಷಯ ತಿಳಿದುಕೊಳ್ಳುವುದಕ್ಕೆ ನಿಮಗೆ ಆಸಕ್ತಿ ಇಲ್ಲವೇ?"

"ಆಸಕ್ತಿಯೇ?" ಪೆಟ್ರೋವಿಚ್, ಮಧ್ಯೆ ಮಾತನಾಡಿದ:

"ಅವಳಿಗೆ ಆತನ ವ್ಯಕ್ತಿಶಃ ಪರಿಚಯವುಂಟು. ಆತ ಅವಳಿಗೆ ಮೂರು ವಾರಗಳ ಕಾಲ ಸಂಗೀತ ಪಾಠ ಹೇಳಿದ. ಸದ್ಯಕ್ಕೆ ದೇವರ ದಯೆಯಿಂದು ಪಾಠ ಹೇಳಿದ್ದಕ್ಕೆ ಪ್ರತಿಯಾಗಿ ಏನನ್ನೂ ತೆಗೆದುಕೊಂಡು ಹೋಗಲಿಲ್ಲ."

ಹೀಗೆಂದು ಪೆಟ್ರೋವಿಚ್, ಫ್ರೆಂಚ್ ಶಿಕ್ಷಕನ ಕಥೆಯನ್ನು ಹೇಳತೊಡಗಿದ. ಮರಯ್ಯಾ ಕಿರಿಲ್ಲೋವ್ನಾಗೆ ಮುಳ್ಳಿನ ಆಸನದ ಮೇಲೆ ಕುಳಿತಂತಾಗಿತ್ತು. ಆದರೆ ವೆರೈಸ್ಕಿ ಅತ್ಯಂತ ಆಸಕ್ತಿಯಿಂದ ಕೇಳಿದ. ಆತನಿಗೆ ಎಲ್ಲವೂ ಬಹು ವಿಸ್ಮಯವಾಗಿ, ಅಸಾಧಾರಣವಾಗಿ ಕಂಡುಬಂತು. ಸ್ವಲ್ಪ ದಿಗಿಲೂ ಆಯಿತೇನೋ. ಕೂಡಲೇ ಮಾತಿನ ವಿಷಯ ಬದಲಾಯಿಸಿದ. ಮನೆಗೆ ಹಿಂದಿರುಗಿದೊಡನೆ ತನ್ನ ಗಾಡಿಯನ್ನು ಸಿದ್ಧಪಡಿಸಲು ಹೇಳಿದ. ಅಂದು ರಾತ್ರಿ ಅಲ್ಲಿಯೇ ತಂಗಬೇಕೆಂದು ಪೆಟ್ರೋವಿಚ್ ಎಷ್ಟು ಒತ್ತಾಯ ಮಾಡಿ ಕೇಳಿಕೊಂಡರೂ ಒಪ್ಪದೆ, ಚಹಾ ಸ್ವೀಕರಿಸಿದ ಕೂಡಲೇ ಹೊರಟೇ

---

*'ರಿನಾಲ್ಡೋ' ಎಂಬುವನು ಒಬ್ಬ 'ಭವ್ಯಚೋರ'. ಜರ್ಮನ್ ಲೇಖಕ ವಲ್ಪಿಸ್ ಎಂಬುವನ 'ರಿನಾಲ್ಡೋ' ಎಂಬ ಕಾದಂಬರಿಯ ನಾಯಕ.

ಬಿಟ್ಟ. ಹಾಗೂ, ಹೋಗುವುದಕ್ಕೆ ಮುನ್ನ, ಮರಿಯಾ ಕಿರಿಲ್ಲೋವ್ನಾಳನ್ನು ಕರೆದುಕೊಂಡು ತನ್ನ ಮನೆಗೊಮ್ಮೆ ಭೇಟಿಯಿಡಬೇಕೆಂದು ಪೆಟ್ರೋವಿಚ್‌ಗೆ ಆಹ್ವಾನವಿತ್ತ. ಆ ರಾಜಕುಮಾರನಿಗೆ ಸಮಾಜದಲ್ಲಿ ಉನ್ನತ ಸ್ಥಾನವಿತ್ತು. ಚಕ್ರವರ್ತಿಯಿಂದ ಎರಡು ಪದಕಗಳನ್ನು ಬೇರೆ ಸಂಪಾದಿಸಿದ್ದ. ಆತನ ಅಧೀನದಲ್ಲಿ ಮೂರು ಸಾವಿರ ಜೀತದಾಳುಗಳು ಕೆಲಸ ಮಾಡುತ್ತಿದ್ದರು. ಆದ್ದರಿಂದ ವೆರೈಸ್ಕಿ ತನ್ನ ಸರಿಸಮಾನ, ತನ್ನಷ್ಟೇ ಶ್ರೀಮಂತ, ಹಿರಿಯ ವ್ಯಕ್ತಿ ಎಂದು ಭಾವಿಸಿ, ಗರ್ವಿಷ್ಠನಾದ ಪೆಟ್ರೋವಿಚ್‌ನು ಆಮಂತ್ರಣವನ್ನು ಒಪ್ಪಿಕೊಂಡ.

ಎರಡು ದಿನಗಳನಂತರ, ಕಿರಿಲಾ ಪೆಟ್ರೋವಿಚ್ ಮತ್ತು ಅವನ ಮಗಳು, ರಾಜಕುಮಾರ ವೆರೈಸ್ಕಿಯ ಭೇಟಿಗೆ ಮರುಭೇಟಿಯಿಡಲು ಆತನ ಮನೆಗೆ ಹೋದರು. ಅರ್ಬಾಟೋವೋ ಹಳ್ಳಿಯ ಹತ್ತಿರ ಹೋದಂತೆಲ್ಲಾ, ಅಲ್ಲಿನ ನಿರ್ಮಲವಾದ, ಗಾಳಿಬೆಳಕುಗಳಿಂದ ಕೂಡಿದ, ರೈತರ ಗುಡಿಸಲುಗಳು, ಮತ್ತು ಮಾಲೀಕನ ಶಿಲಾನಿರ್ಮಿತ ಸುಂದರ ಮಹಲು—ಇವುಗಳನ್ನು ಕಂಡು ಕಿರಿಲಾ ಪೆಟ್ರೋವಿಚ್ ಆಶ್ಚರ್ಯ ಮೆಚ್ಚಿಕೆಗಳನ್ನು ವ್ಯಕ್ತಪಡಿಸದೆ ಇರದಾದ. ರಾಜಕುಮಾರನ ಮಹಲು, ಇಂಗ್ಲೀಷ್ ಹರ್ಮ್ಯಪ್ರೆಂದದ ಮಾದರಿಯನ್ನನುಸರಿಸಿ ನಿರ್ಮಿತವಾಗಿತ್ತು. ಮಹಲಿನ ಮುಂದೆ, ಕಂಗೊಳಿಸುತ್ತಿದ್ದ ಹಸಿರು ಹುಲ್ಲುಗಾವಲು ಹರಡಿದ್ದಿತು. ಅಲ್ಲಿ ಸ್ವಿಸ್ ದೇಶದ ಜಾನುವಾರುಗಳು ಅವುಗಳ ಕತ್ತಿಗೆ ಕಟ್ಟಿದ ಗಂಟೆಗಳನ್ನು ಶಬ್ದ ಮಾಡುತ್ತಾ, ಮೇಯುತ್ತಿದ್ದುವು. ಮಹಲಿನ ಸುತ್ತಲೂ ವಿಶಾಲವಾದ ಉದ್ಯಾನವನವಿದ್ದಿತು. ರಾಜಕುಮಾರನು ಅತಿಥಿಗಳನ್ನು ಮುಂದಿನ ಪ್ರಾಕಾರದ ಬಳಿಯೇ ಸಂಧಿಸಿ ಸ್ವಾಗತಿಸುತ್ತಾ, ಆ ತರುಣಿಯ ಕೈ ಹಿಡಿದು ಒಳಗೆ ಕರೆದೊಯ್ದನು. ಮುಂದಿನ ವಿಶಾಲವಾದ ಹಜಾರ ವೈಭವಯುತವಾಗಿ ಸಿಂಗರಿಸಲ್ಪಟ್ಟಿದ್ದಿತು. ಹಜಾರದ ಮಧ್ಯೆ ಒಂದು ಮೇಜು ಇದ್ದಿತು. ಅದರ ಸುತ್ತ ಮೂರು ಮಂದಿ ಕೂತು ಊಟ ಮಾಡುವ ವ್ಯವಸ್ಥೆ ಮಾಡಲಾಗಿತ್ತು. ಊಟಕ್ಕೆ ಮುನ್ನ ತನ್ನ ಮಹಲಿನ ವೈಶಿಷ್ಟ್ಯಗಳನ್ನು ಅತಿಥಿಗಳಿಗೆ ತೋರಿಸಬೇಕೆಂದು, ರಾಜಕುಮಾರ ಅವರನ್ನು ಮೊದಲು ಕಿಟಿಕಿಯ ಬಳಿ ಕರೆದೊಯ್ದ. ಅಲ್ಲಿಂದ, ಹೊರಗಿನ ಚಿತ್ತಾಕರ್ಷಕ ನಿಸರ್ಗ—ನೋಟವನ್ನು ಬಹು ಚೆನ್ನಾಗಿ ನೋಡಬಹುದಿತ್ತು. ಅಲ್ಲಿಯೇ, ಅನತಿ ದೂರದಲ್ಲಿ ವೋಲ್ಗಾ ನದಿ ಹರಿಯು

ತ್ತಿದ್ದಿತು. ಆ ನದಿಯಲ್ಲಿ, ಸರಕುಗಳನ್ನು ಹೊತ್ತ ದೋಣಿಗಳು, ಪ್ರವಾಹದೊಂದಿಗೆ ನಿಧಾನವಾಗಿ ಚಲಿಸುತ್ತಿದ್ದುವು. ಆ ದೋಣಿಗಳ, ಬಿಗಿಯಾಗಿ ಎಳೆದು ಕಟ್ಟಿದ್ದ, ಯಾನಪಟಗಳು, ಗಾಳಿ ತುಂಬಿಕೊಂಡು ಬಾಗಿ, ಮನೋಹರವಾಗಿ ಕಾಣುತ್ತಿದ್ದುವು. ಆ ದೋಣಿಗಳ ಸುತ್ತಮುತ್ತ, ಅನ್ವರ್ಥವಾಗಿ 'ಸಾವಿನ ಜೋನುಗಳು' ಎಂದು ಕರೆಯುತ್ತಿದ್ದ ಚಿಕ್ಕಪುಟ್ಟ ಮೀನು—ದೋಣಿಗಳು ಹರಿದಾಡುತ್ತಿದ್ದುವು. ನದಿಯ ಆಚೆಗೆ ಪೈರುಪಚ್ಚೆಗಳಿಂದ ಕೂಡಿದ ವಿಸ್ತಾರವಾದ ಬಯಲು ಪ್ರದೇಶ, ಅದರ ಆಚೆಗೆ ಕಾಡು—ಮೇಡು, ಅಲ್ಲಿಂದಾಚೆಗೆ ಬೆಟ್ಟ—ಗುಡ್ಡಗಳ ಸಾಲು—ಈ ಅದ್ಭುತ ರಮ್ಯ ದೃಶ್ಯ ಕಣ್ಮನಗಳಿಗೆ ಸಂಪೂರ್ಣ ತೃಪ್ತಿಯಾಯುವಂತಹದಾಗಿತ್ತು. ಹೀಗೆ, ತಾನೇ ತಾನಾಗಿ ವಿಜೃಂಭಿಸುತ್ತಿದ್ದ ಪ್ರಕೃತಿ ದೃಶ್ಯಕ್ಕೆ ಜೀವಕಳೆ ತುಂಬಲೋ ಎಂಬಂತೆ, ಅದರ ಮಡಿಲಿನಲ್ಲಿ ಅಲ್ಲಲ್ಲಿ ಸಣ್ಣಪುಟ್ಟ ಹಳ್ಳಿಗಳು ಕಾಣುತ್ತಿದ್ದುವು. ಪ್ರಕೃತಿಯ ಈ ಭವ್ಯ ವಿಹಂಗಮ ನೋಟವನ್ನು ವೀಕ್ಷಿಸಿದ ಮೇಲೆ, ಅವರೆಲ್ಲರೂ 'ಕಲಾಗೃಹ'ವನ್ನು ಪ್ರವೇಶಿಸಿದರು. ಅಲ್ಲಿ, ರಾಜಕುಮಾರ, ತಾನು ವಿದೇಶಗಳಲ್ಲಿ ಕೊಂಡಿದ್ದ ವರ್ಣ—ಚಿತ್ರಪಟಗಳನ್ನು, ಕಲಾತ್ಮಕವಾಗಿ ಕೊಠಡಿಯ ಸುತ್ತ ಗೋಡೆಗಳ ಮೇಲೆ ತೂಗುಹಾಕಿದ್ದ. ರಾಜಕುಮಾರನು ಮರಯ್ಯಾ ಕಿರಿಲ್ಲೋವ್ನಾಳಿಗೆ ಒಂದೊಂದು ಚಿತ್ರದ ಬಗ್ಗೆಯೂ ವಿಶದವಾದ ವಿವರಣೆಯಿತ್ತ. ಆ ಕಲಾಕೃತಿಗಳನ್ನು ರಚಿಸಿದ ಕಲಾಕೋವಿದರ ಜೀವನಕಥೆಗಳು, ಪ್ರತಿಯೊಂದು ಕಲಾಕೃತಿಯ ವೈಶಿಷ್ಟ್ಯ, ಮತ್ತು ಲೋಪ ದೋಷಗಳು—ಇವನ್ನೆಲ್ಲಾ ತುಂಬ ಉತ್ಸಾಹದಿಂದ ಬಣ್ಣಿಸಿದ. ಚಿತ್ರಗಳ ವಿವರಣೆಯನ್ನೀಯುವಾಗ, ವಿಮರ್ಶಕನಂತೆ ಸಂಪ್ರದಾಯಿಕವಾದ ನಿಸ್ಸಾರವಾದ ಭಾಷೆಯನ್ನುಪಯೋಗಿಸದೆ, ಭಾವನತ್ತಾಗಿ, ಕಲ್ಪನೆಯ ಮೆರಗು ಕೊಟ್ಟು ವಿವರಿಸಿದ. ಮರಯ್ಯಾ ಕಿರಿಲ್ಲೋವ್ನಾ ಅತ್ಯಾನಂದದಿಂದ ಕಿವಿಗೊಟ್ಟು ಕೇಳಿದಳು. ಅನಂತರ ಅವರು ಊಟಕ್ಕೆ ಕುಳಿತರು. ಕಿರಿಲ್ಲಾ ಪೆಟ್ರೋವಿಚ್ ಮನಃತೃಪ್ತಿಯಾಗುವಂತೆ ಉಂಡ. ರಾಜಕುಮಾರನ ಪರಿಣತ ಅಡುಗೆಯವನು ತಯಾರಿಸಿದ ಭಕ್ಷ್ಯ—ಭೋಜ್ಯಗಳು ಅವನಿಗೆ ಬಹು ರುಚಿಯಾಗಿ ಕಂಡವು. ಅಂತೆಯೇ, ಆಂಫಿಟ್ರಿಯಾನ್*ನಂತೆ ಅತಿಥಿಗಳ ಉಪಚಾರದಲ್ಲಿ ಅತ್ಯುತ್ಸಾಹ

---

* 'ಆಂಫಿಟ್ರಿಯಾನ್' ಎಂಬುವನು ಗ್ರೀಕ್ ಪುರಾಣಗಳಲ್ಲಿ ಕೇಳಿಬರುವ, ಅತಿಥಿಗಳನ್ನು ಸತ್ಕರಿಸಿ ಆದರಿಸುವುದರಲ್ಲಿ ಹೆಸರುವಾಸಿಯಾದ, ಒಬ್ಬ ವ್ಯಕ್ತಿ.

ತೋರುತ್ತಿದ್ದ ರಾಜಕುಮಾರನು ಒದಗಿಸಿದ ಬಹು ಬೆಲೆಯ, ಅತ್ಯುನ್ನತ ದರ್ಜೆಯ, ದ್ರಾಕ್ಷಾರಸವನ್ನು ಮನಸಾರೆ ಹೀರಿದ. ಮರಯ್ಯಾ ಕಿರಿಲ್ಲೋವ್ನಾ ಕೂಡ ರಾಜಕುಮಾರನನ್ನು ಅದೇ ಎರಡನೇ ಬಾರಿ ಭೇಟಿಮಾಡುತ್ತಿದ್ದು ದಾದರೂ, ಯಾವ ವಿಧವಾದ ಸಂಕೋಚವನ್ನೂ ಪಡಲಿಲ್ಲ.

ಊಟವಾದ ಮೇಲೆ ರಾಜಕುಮಾರನು ಅತಿಥಿಗಳನ್ನು ಉದ್ಯಾನ ವನಕ್ಕೆ ಕರೆದುಕೊಂಡು ಹೋದ. ಅಲ್ಲಿ ಒಂದು ದೊಡ್ಡ ತಿಳಿನೀರಿನ ಸರೋವರವಿದ್ದಿತು. ಅದು ಅಲ್ಲಲ್ಲಿ ಸಣ್ಣ ನಡುಗುಡ್ಡೆಗಳಿಂದ ಅಲಂಕೃತವಾಗಿತ್ತು. ಸರೋವರದ ತೀರದಲ್ಲಿ ಲತಾಮಂಟಪವಿದ್ದಿತು. ಅಲ್ಲಿ ಎಲ್ಲರೂ ಕಾಫಿ ಸೇವಿಸಿದರು. ಕೂಡಲೇ ಹೊರಗಿನಿಂದ ವಾದ್ಯಗಳ ಸಂಗೀತ ಧ್ವನಿ ಕೇಳಿ ಬಂತು. ಧ್ವನಿಯೊಂದಿಗೆ ಆರು ಹುಟ್ಟುಗಳಿಂದ ಕೂಡಿದ ದೋಣಿಯೊಂದು ಲತಾಗೃಹದ ಮುಂಭಾಗದಲ್ಲಿ ಬಂದು ನಿಂತಿತು. ಅವರೆಲ್ಲಾ ದೋಣಿಯೊಳಗೆ ಹತ್ತಿ ಕೂತರು. ದೋಣಿ, ಆ ಸರೋವರದಲ್ಲಿದ್ದ ನಡುಗುಡ್ಡಗಳನ್ನು ಬಳಸಿಕೊಂಡು ನಿಧಾನವಾಗಿ ಮುಂದಕ್ಕೆ ಸಾಗಿತು. ಅವರು ಕೆಲವು ಗುಡ್ಡಗಳಿಗೆ ಭೇಟಿ ಇತ್ತರು. ಅವುಗಳಲ್ಲೊಂದರಲ್ಲಿ ಅಮೃತ ಶಿಲೆಯ ಸ್ತೂಪವೊಂದಿತ್ತು. ಇನ್ನೊಂದರಲ್ಲಿ ಪಾಳು ಬಿದ್ದ ಗುಹೆಯೊಂದಿದ್ದಿತು. ಮತ್ತೊಂದರಲ್ಲಿ ಒಂದು ಸ್ಮಾರಕವಿದ್ದಿತು. ಅದರ ಮೇಲೆ ಯಾವುದೋ ರಹಸ್ಯಭಾಷೆಯಲ್ಲಿ ಕೆತ್ತಿದ ಶಿಲಾಲೇಖವಿದ್ದಿತು. ಮರಯ್ಯಾ ಕಿರಿಲ್ಲೋವ್ನಾ ಯುವತಿ ಸಹಜವಾದ ಉತ್ಸುಕತೆಯಿಂದ ಪ್ರೇರಿತಳಾಗಿ ಅದರ ಬಗ್ಗೆ ಅನೇಕ ಪ್ರಶ್ನೆಗಳನ್ನು ಕೇಳಿದಳು. ಅವಳ ಸಂದೇಹಗಳನ್ನೆಲ್ಲಾ ಪರಿಹರಿಸಿ ತೃಪ್ತಿಗೊಳಿಸಲಾಗದಿದ್ದರೂ, ರಾಜಕುಮಾರನು ತನಗೆ ತಿಳಿದಷ್ಟು ವಿಷಯವನ್ನು, ತೇಲಿಸಿಕೊಂಡು, ಸಂಭಾವಿತನಂತೆ ಯೋಗ್ಯ ಭಾಷೆಯಲ್ಲಿ ಉತ್ತರಿಸಿದನು. ಹೀಗೆ ವಿಹರಿಸುತ್ತಾ, ಕಾಲದ ಪರಿವೆಯೇ ಇಲ್ಲದೆ ಅಪರಾಹ್ನ, ಸಾಯಂಕಾಲಗಳನ್ನು ಕಳೆದರು. ಸಂಜೆಯ ಮಬ್ಬು ಕವಿಯ ತೊಡಗಿತು. ಚಳಿಗಾಳಿ ಮತ್ತು ಹಿಮದ ನೆಪ ಹೇಳಿ, ರಾಜಕುಮಾರ ಎಲ್ಲರನ್ನೂ ಬೇಗ ಬೇಗ ಮನೆಗೆ ಹಿಂದಿರುಗಿಸಿದ. ಅಲ್ಲಿ ಚಹಾ ಸಿದ್ಧವಾಗಿತ್ತು. ವೃದ್ಧ ಬ್ರಹ್ಮಚಾರಿಯ ಮನೆಯಲ್ಲಿ ಗೃಹಿಣಿಯ ಪಾತ್ರವಹಿಸಿ ಎಲ್ಲರಿಗೂ ಚಹಾ ಬಡಿಸಬೇಕೆಂದು, ರಾಜಕುಮಾರ ಮರಯ್ಯಾ ಕಿರಿಲ್ಲೋವ್ನಾಳನ್ನು ಪ್ರಾರ್ಥಿಸಿದ. ಸಭ್ಯನಾದ, ವಾಚಾಳಿಯಾದ ರಾಜಕುಮಾರನ ಕೊನೆಮೊದಲಿಲ್ಲದ ವೃತ್ತಾಂತಗಳನ್ನು ಕೇಳುತ್ತಾ,

ಮರಯ್ಯಾ ಎಲ್ಲರಿಗೂ ಚಹಾ ಬಡಿಸಿದಳು.

ಕೂಡಲೇ, ಹೊರಗಡೆ ಗುಂಡುಹಾರಿದ ಶಬ್ದ ಕೇಳಿತು. ಆಕಾಶಬಾಣವೊಂದು ಸಿಡಿದು, ಆಗಸದಲ್ಲೆಲ್ಲಾ ಬೆಳಕಿನ ಹೂವುಗಳನ್ನು ಹರಡಿ, ಎಲ್ಲೆಲ್ಲೂ ಪ್ರಕಾಶ ಚೆಲ್ಲಿತು. ರಾಜಕುಮಾರ, ಮರಯ್ಯಾ ಕಿರಿಲ್ಲೋವ್ನಾಗೆ ಒಂದು ಶಾಲು ಕೊಡುತ್ತಾ, ಉಪ್ಪರಿಗೆಯ ಮೊಗಸಾಲೆ (ಬಾಲ್ಕನಿ)ಗೆ ತಂದೆಯೊಡನೆ ಬರಬೇಕೆಂದು ಆಹ್ವಾನಿಸಿದ. ಮನೆಯ ಮುಂದೆ ಬಾಣ–ಬಿರುಸುಗಳ ಪ್ರದರ್ಶನವಾಗುತ್ತಿದ್ದಿತು. ಬಣ್ಣಬಣ್ಣದ ಬೆಳಕುಗಳು ಪ್ರಜ್ವಲಿಸುತ್ತಿದ್ದುವು. ಕೆಲವು ಹೂಬಾಣಗಳು ವರ್ತುಲಾಕಾರದಲ್ಲಿ ಸುತ್ತುತ್ತಿದ್ದುವು. ಮತ್ತೆ ಕೆಲವು ತೆನೆಯೋಪಾದಿಯಲ್ಲಿ ಆಕಾಶಕ್ಕೆ ಚಿಮ್ಮುತ್ತಿದ್ದುವು. ಇನ್ನು ಕೆಲವು ತಾಳೆಮರದಂತೆ ನೇರವಾಗಿ ಮೇಲಕ್ಕೆ ಬೆಳೆದು ಅಲ್ಲಿ ಒಡೆದು ಹಾಳೆಗಳನ್ನು ಚಾಚಿಕೊಂಡು ಗಾಳಿಯಲ್ಲಿ ತೂಗಾಡುವಂತೆ ಕಂಡುವು. ಅಂಗಳದ ತುಂಬ ಎಲ್ಲಿ ನೋಡಿದರೂ ಬೆಳಕಿನ ಬುಗ್ಗೆಗಳೇ ತುಂಬಿದ್ದುವು. ಆಕಾಶಬಾಣ–ಬಿರುಸುಗಳು ಮತ್ತೆ ಮತ್ತೆ ನಭೋಮಂಡಲವನ್ನು ಭೇದಿಸುವಂತೆ ಏರಿಹೋಗಿ, ಅಲ್ಲಿ ಸಿಡಿದು, ತಾರಾ ಅಗ್ನಿ ವರ್ಷಧಾರೆ ಕರೆಯುತ್ತಿದ್ದುವು. ಮರಯ್ಯಾ ಕಿರಿಲ್ಲೋವ್ನಾ ಇವೆಲ್ಲವನ್ನೂ ಕಂಡು, ಎಳೆಯ ಮಗುವಿನಂತೆ, ಆನಂದಭರಿತಳಾಗಿ ಪುಳಕಿತಳಾದಳು. ಆಕೆ ಆನಂದ ಪಡುತ್ತಿದ್ದುದನ್ನು ಕಂಡು ರಾಜಕುಮಾರನಿಗೂ ಸಂತೋಷವಾಯಿತು. ಪೆಟ್ರೋವಿಚ್‌ಗೂ ಹೇಳತೀರದಷ್ಟು ಸಂತೋಷವಾಯಿತು. ತನ್ನ ಸಂತೋಷಕ್ಕಾಗಿ, ತನಗೆ ಗೌರವ ತೋರಿಸಲು, ರಾಜಕುಮಾರ ಇಷ್ಟೆಲ್ಲಾ ಖರ್ಚು–ವೆಚ್ಚಗಳನ್ನು ಮಾಡುತ್ತಿದ್ದಾನೆ, ಇಷ್ಟೆಲ್ಲ ತೊಂದರೆ ತೆಗೆದುಕೊಳ್ಳುತ್ತಿದ್ದಾನೆ, ಎಂದು ಅವನು ಕಲ್ಪಿಸಿಕೊಂಡ. ಅದು ಅವನ ಆನಂದವನ್ನು ಇಮ್ಮಡಿಗೊಳಿಸಿತು.

ರಾತ್ರಿಯೂಟವೂ, ಮಧ್ಯಾಹ್ನದಂತೆಯೇ ಬಹು ಉಲ್ಲಾಸಕರವಾಗಿದ್ದಿತು. ಊಟವಾದ ಮೇಲೆ, ಅತಿಥಿಗಳು, ಎಲ್ಲ ರೀತಿಯ ಅನುಕೂಲತೆಗಳಿಂದಲೂ ಸಜ್ಜುಗೊಳಿಸಿದ್ದ ಕೊಠಡಿಗಳಿಗೆ ಮಲಗಲು ತೆರಳಿದರು. ಮಾರನೆಯ ದಿನ ಬೆಳಗ್ಗೆ, ಪುನಃ ಆದಷ್ಟು ಬೇಗ ಮಿಲನವಾಗಲು ಉಭಯತ್ರರೂ ಮಾತುಕೊಟ್ಟನಂತರ, ಅತಿಥಿಗಳು ಸೌಜನ್ಯ-ಮೂರ್ತಿಯಂತಿದ್ದ ರಾಜಕುಮಾರನಿಂದ ಬೀಳ್ಕೊಂಡು ತಮ್ಮ ಮನೆಗೆ ತೆರಳಿದರು.

# ೬

ಒಂದು ದಿನ ಮರಯ್ಯಾ ಕಿರಿಲ್ಲೋವ್ನಾ, ಕಸೂತಿಹಾಕುವ ಚೌಕಟ್ಟನ್ನು ಕೈಲಿ ಹಿಡಿದುಕೊಂಡು, ಕಸೂತಿ ಹಾಕುತ್ತಾ, ತನ್ನ ಕೋಣೆಯ ತೆರೆದ ಕಿಟಕಿಯ ಬಳಿ ಕುಳಿತಿದ್ದಳು. ಕೊನ್ರಾಡ್‌ನ ಪ್ರಿಯತಮೆ ಶೃಂಗಾರಮಯ ಕನಸುಗಳಲ್ಲಿ ತಲ್ಲೀನಳಾಗಿ, ಕಸೂತಿಹಾಕುವಾಗ ಗುಲಾಬಿ ಹೂವೊಂದನ್ನು ತಪ್ಪಾಗಿ ಹಸಿರು ಬಣ್ಣದಲ್ಲಿ ತುಂಬಿದಂತೆ,* ನಮ್ಮ ಲತಾಂಗಿ ಬಣ್ಣ ಬದಲಾವಣೆಗಳನ್ನೇನೂ ಮಾಡಲಿಲ್ಲ. ಆಕೆಯ ಮನಸ್ಸು ತಾನು ಮಾಡುತ್ತಿದ್ದ ಕಸೂತಿ ಕೆಲಸದ ಮೇಲಿರದೆ, ಯಾವುದೋ ದೂರದ ಸ್ವಪ್ನಸಮಸ್ಯೆಯ ತೊಡಕಿನಲ್ಲಿ ಸಿಕ್ಕಿಬಿದ್ದಿದ್ದರೂ, ಆಕೆ ಹಿಡಿದಿದ್ದ ಸೂಜಿ ಬಹು ನಿಷ್ಠೆಯಿಂದ ನಮೂನೆಯ ರೂಪರೇಷೆಗಳನ್ನನುಸರಿಸಿ, ಬಟ್ಟೆಯ ಮೇಲೆ ಪ್ರತಿಬಿಂಬವನ್ನು ಚಿತ್ರಿಸುತ್ತಿತ್ತು.

ಇದ್ದಕ್ಕಿದ್ದಂತೆಯೇ ಯಾರದೋ ಒಂದು ಕೈ ಕಿಟಕಿಯ ಮೂಲಕ ಒಳಕ್ಕೆ ಚಾಚಲ್ಪಟ್ಟು ಕಸೂತಿ ಫ್ರೇಮಿನ ಮೇಲೆ ಒಂದು ಕಾಗದವನ್ನು ಬೀಳಿಸಿ, ತಕ್ಷಣವೇ, ಮರಯ್ಯಾ ಕಿರಿಲ್ಲೋವ್ನಾ ಆಶ್ಚರ್ಯಚಕಿತಳಾಗಿ ಪುನಃ ಸುಸ್ಥಿತಿಗೆ ಬಂದು ಅದು ಯಾರ ಕೆಲಸವೆಂದು ನೋಡುವ ಮುನ್ನವೇ, ಕಾಣದಾಯಿತು. ಅದೇ ಹೊತ್ತಿಗೆ, ಜವಾನನೊಬ್ಬ ಕೋಣೆಯೊಳಕ್ಕೆ ಬಂದು, ತಂದೆ ಆಕೆಗಾಗಿ ಕಾದಿದ್ದಾರೆಂದು ತಿಳಿಸಿದ. ಆಕೆ ಕೂಡಲೇ ಆ ಕಾಗದವನ್ನು ಅದುರುತ್ತಿದ್ದ ಬೆರಳುಗಳಿಂದ ಕರವಸ್ತ್ರದ ಅಡಿಯಲ್ಲಿ ಮುಚ್ಚಿಹಿಡಿದುಕೊಂಡು, ತಂದೆಯನ್ನು ಕಾಣಲು ಧಾವಿಸಿ ನಡೆದಳು.

ಅಲ್ಲಿ ಕಿರಿಲಾ ಪೆಟ್ರೋವಿಚ್ ಒಬ್ಬನೇ ಇರಲಿಲ್ಲ. ರಾಜಕುಮಾರ ವೆರೈಸ್ಕಿಯೂ ಆತನೊಡನಿದ್ದನು. ಮರಯ್ಯಾ ಕಿರಿಲ್ಲೋವ್ನಾಳನ್ನು ಕಂಡ ಕೂಡಲೇ ರಾಜಕುಮಾರನು ಎದ್ದು ನಿಂತು, ಬಾಗಿ, ಸಾಧಾರಣವಾಗಿ ಸ್ತ್ರೀಗೆ ಕೊಡಬೇಕಾದ ಗೌರವವನ್ನು ಸಲ್ಲಿಸಿದ. ಹಾಗೆ ಎಷ್ಟೋ ಬಾರಿ

---

* ಪೋಲೆಂಡಿನ ಮಹಾಕವಿ ಆಡಮ್ ಮಿಕೀವಿಚ್ ಬರೆದಿರುವ "ಕೊನ್ರಾದ್ ವಾಲ್ಲೆನ್‌ರಾದ್" ಎಂಬ ಕವಿತೆಯಲ್ಲಿ ಬರುವ ಪ್ರಸಂಗ ಒಂದರ ಉಲ್ಲೇಖ ಇದು.

ಬೇರೆ ಸ್ತ್ರೀಯರ ಮುಂದೆ ವರ್ತಿಸಿದ ಅನುಭವವಿದ್ದರೂ, ಈ ಬಾರಿ, ಆಕೆಯನ್ನು ಕಂಡಾಗ, ರಾಜಕುಮಾರ ಹೊಸ ರೀತಿಯ ಭಾವನೆಗಳ ಗೊಂದಲದಲ್ಲಿ ಸಿಕ್ಕಿಬಿದ್ದವನಂತೆ ಕಂಡು ಬಂದ.

"ಇಲ್ಲಿ ಬಾಮ್ಮಾ, ಮಾಷಾ. ನಿನಗೆ ಒಂದು ವಿಷಯ ತಿಳಿಸೋಣ ಅಂತ ಕರೆಸಿದೆ. ಅದು ನಿನಗೆ ತುಂಬ ಸಂತೋಷವೀಯುತ್ತೆ ಅಂತ ನಾನು ತಿಳಕೊಂಡಿದ್ದೇನೆ. ಇಲ್ನೋಡು, ಇವರು ಕನ್ಯಾರ್ಥಿಯಾಗಿ ಬಂದಿದ್ದಾರೆ. —ನಮ್ಮ ರಾಜಕುಮಾರರು ನಿನ್ನ ಕೈಹಿಡಿಯಲು ಮುಂದೆ ಬಂದಿದ್ದಾರೆ," ಎಂದ ಕಿರಿಲ್ಲಾ ಪೆಟ್ರೋವಿಷ್.

ಮಾಷಾಳಿಗೆ ಸಿಡಿಲು ಬಡಿದಂತಾಯಿತು. ಸಾವಿನಷ್ಟು ಭೀಕರವಾದ ನಿಸ್ತೇಜತೆ ಆಕೆಯ ಮುಖದ ಮೇಲೆ ಮೂಡಿತು. ಆಕೆ ಮೂಕಳಾಗಿ ನಿಂತಳು. ರಾಜಕುಮಾರ ಮುಂದೆ ಬಂದು ಆಕೆಯ ಕೈ ಹಿಡಿದು, ಮನಕರಗುವಂತೆ, ಸಣ್ಣ ಧ್ವನಿಯಲ್ಲಿ, ತನ್ನ ಸಲಹೆಗೆ ಆಕೆ ಒಪ್ಪಿಗೆಯಿತ್ತು ತನ್ನನ್ನು ಸಂತೋಷ ಪಡಿಸುವಳೇ ಎಂದು ಕೇಳಿಕೊಂಡ. ಆಗಲೂ ಮಾಷಾ ಏನೂ ಮಾತನಾಡಲಿಲ್ಲ.

"ಒಪ್ಪದೇ ಏನು. ಒಪ್ಪೇ ಒಪ್ಪುತ್ತಾಳೆ," ಎಂದ ಪೆಟ್ರೋವಿಷ್. "ನಿಮಗೂ ಗೊತ್ತಿರಬೇಕು ರಾಜಕುಮಾರರೇ—ಒಪ್ಪಿಗೆಯ ಮಾತನ್ನು ಕೊಡಬೇಕಾದರೆ ಹುಡುಗಿಯರಿಗೆ ಬಹು ಕಷ್ಟ. ಏನೋ, ಅಂತೂ ನೀವಿಬ್ಬರೂ ಒಂದಾಗಿ ಸುಖವಾಗಿರಿ, ನನ್ನ ಪ್ರೀತಿಯ ಮಕ್ಕಳೇ! ಒಮ್ಮೆ ಚುಂಬಿಸಿ ನನ್ನ ಮನಸ್ಸಂತೋಷಪಡಿಸುವಿರಾ?"

ಮಾಷಾ ಪ್ರತಿಮೆಯಂತೆ ಚಲಿಸದೆ ನಿಂತಿದ್ದಳು. ಆ ವೃದ್ಧ ರಾಜಕುಮಾರ ಆಕೆಯ ಕೈ ಹಿಡಿದು ಚುಂಬಿಸಿದ. ಕೂಡಲೇ ಆಕೆಯ ಬಾಡಿದ ಕಪೋಲಗಳಮೇಲೆ ಕಣ್ಣೀರ ಧಾರೆ ಹರಿಯಿತು. ರಾಜಕುಮಾರ ಹುಬ್ಬುಗಂಟಿಕ್ಕಿದ.

ಪೆಟ್ರೋವಿಷ್ ಕಾತರನಾಗಿ, "ಇದೇನಮ್ಮ ನಿನ್ನ ವರ್ತನೆ? ಹೋಗು, ಒಳಹೋಗಿ ಕಣ್ಣೀರು ಒರಸಿಹಾಕಿ, ನಿನ್ನ ಸ್ವಭಾವಸಹಜ ನಗು ಮುಖದಿಂದ ಹಿಂದಿರುಗಿ ಬಾ" ಎಂದು ಹೇಳಿ, ರಾಜಕುಮಾರನ ಕಡೆ ತಿರುಗಿ, "ಹೆಣ್ಣುಮಕ್ಕಳೇ ಹಾಗೆ. ಮದುವೆಯ ಮಾತೆತ್ತಿದರೆ ಅಳೋದು ಸ್ವಾಭಾವಿಕ. ಅದು ಅವರ ಹುಟ್ಟುಗುಣ....ಅದು ಹೋಗಲಿ, ಈಗ ರಾಜ

ಕುಮಾರರೇ, ನಾವು ಇನ್ನು ವ್ಯವಹಾರ ಭಾಗವನ್ನು ತೀರ್ಮಾನಿಸೋಣ—. ಅಂದರೆ, ವರದಕ್ಷಿಣೆ ಇತ್ಯಾದಿ...." ಎಂದು ಮಾತು ಮುಂದುವರಿಸಿದ.

ಒಳಗೆ ಹೋಗುವ್ರದಕ್ಕೆ ಸಿಕ್ಕ ಅವಕಾಶದ ಪ್ರಯೋಜನ ಪಡೆಯಲು ಮರಯ್ಯಾ ಕಿರಿಲ್ಲೋವ್ನಾ ಆತುರಳಾದಳು. ತನ್ನ ಕೋಣೆಗೆ ಓಡಿ ಹೋಗಿ, ಒಳಗಿನಿಂದ ಚಿಲಕ ಹಾಕಿಕೊಂಡು ಕಣ್ಣೀರು ಸುರಿಸತೊಡಗಿದಳು. ಆ ವೃದ್ಧ ರಾಜಕುಮಾರನ ಪತ್ನಿಯಾಗುವ ಪ್ರಮೇಯವನ್ನು ಊಹಿಸಿ ಕೊಂಡಷ್ಟೂ, ದುಃಖ ಹೆಚ್ಚು ಹೆಚ್ಚು ಒತ್ತರಿಸಿ ಬರತೊಡಗಿತು. ರಾಜ ಕುಮಾರ ಈಗ ಆಕೆಯ ದೃಷ್ಟಿಯಲ್ಲಿ, ದ್ವೇಷಿಸಲು ಯೋಗ್ಯನಾದ, ನಿರಾಕರಿ ಸಲು ತಕ್ಕ, ಹಗೆಯಂತೆ ತೋರಿಬಂದ. ಆ ಮದುವೆಯ ವಿಚಾರ ಆಕೆಗೆ, ನೇಣುಕಂಬಕ್ಕಿಂತ—ಗೋರಿಗಿಂತ—ಹೆಚ್ಚು ಭಯಾನಕವಾಗಿ ಕಾಣಬಂತು. "ಇಲ್ಲ, ಇಲ್ಲ" ಎಂದು ಹತಾಶಳಾಗಿ ತನಗೆ ತಾನೇ ಅಂದುಕೊಂಡಳು. "ಆದಾಗದು, ಸಾಯುವುದು ಮೇಲು; ಇಲ್ಲ ಸನ್ಯಾಸಿಯಾಗಿ ಮಠ ಸೇರು ವುದು ಮೇಲು. ಅಥವಾ ದುಬ್ರೋವ್‌ಸ್ಕಿಯನ್ನು ಮದುವೆಯಾಗುವುದು ಎಷ್ಟೋ ಮೇಲು!" ಆಗ, ತನ್ನ ಕೈಲಿದ್ದ ಕಾಗದದ ನೆನಪಾಯಿತು. ಬಿಚ್ಚಿ ಓದಿದಳು. ತುಂಬ ಉತ್ಸುಕತೆಯಿಂದ; ಭಾವೋನ್ಮತ್ತಳಾಗಿ ಓದಿದಳು. ಆಕೆಗೆ ಅನ್ನಿಸಿತ್ತು, ಆ ಕಾಗದ ದುಬ್ರೋವ್‌ಸ್ಕಿ ಬರೆದುದೇ ಆಗಿರಬೇಕೆಂದು. ಆಕೆಯ ಊಹೆ ನಿಜವಾಗಿತ್ತು. ಆತನ ಹಸ್ತಾಕ್ಷರದಲ್ಲೇ ಆ ಕಾಗದ ಬರೆ ಯಲ್ಪಟ್ಟಿದ್ದಿತು. ಅದರಲ್ಲಿ ವಿಶೇಷವೇನೂ ಇರದೆ, ಕೇವಲ ಕೆಲವೇ ಮಾತು ಗಳಿದ್ದುವು.—"ಇಂದು ರಾತ್ರಿ ಹತ್ತು ಗಂಟೆಗೆ ಹಿಂದಿನ ಸ್ಥಳದಲ್ಲೇ."

## ೭

ಜುಲೈ ತಿಂಗಳ ಪ್ರಶಾಂತ ರಾತ್ರಿ. ಹುಣ್ಣಿಮೆಯ ಚಂದ್ರ ಬಾನಿನಲ್ಲಿ ಬೆಳಗುತ್ತಿದ್ದ. ಆಗೊಮ್ಮೆ–ಈಗೊಮ್ಮೆ ಗಾಳಿ ಸುಯ್ಯನೆ ಬೀಸಿದಾಗ, ಉದ್ಯಾನವನವೆಲ್ಲೆಲ್ಲಾ ಎಲೆಗಳ ಸರಸರ ಸಪ್ಪಳ ತುಂಬುತ್ತಿತ್ತು.

ನೆರಳಿನಂತೆ ಮೃದುವಾಗಿ ಹೆಜ್ಜೆ ಇಡುತ್ತಾ ಭೇಟಿಗಾಗಿ ಗೊತ್ತು ಮಾಡಿದ್ದ ಸ್ಥಳವನ್ನು ಸಮ್ಮ ಚೆಲುವೆ ತಲಪಿದಳು. ಅಲ್ಲಿ ಇನ್ನೂ ಯಾರೂ ಬಂದಿರಲಿಲ್ಲ. ಹಿಂದಿರುಗಿ ನೋಡಿದಳು. ಆಗಲೇ ದುಬ್ರೋವ್‌ಸ್ಕಿ ಲತಾ

ಮಂಟಪದ ಹಿಂಬದಿಯಿಂದ ಹೊರಕ್ಕೆ ಬಂದು ಆಕೆಯ ಮುಂದೆ ನಿಂತಿದ್ದ !

"ನನಗೆ ಎಲ್ಲ ಗೊತ್ತಾಯಿತು," ಎಂದು ಆತ ದುಃಖಭರಿತ ಧ್ವನಿಯಲ್ಲಿ ಮೆಲ್ಲಗೆ ಉಸುರಿದ. "ಆದರೆ ನೀವು ನನಗೆ ಕೊಟ್ಟಿರುವ ಮಾತು ನೆನಪಿನಲ್ಲಿರಲಿ."

ನೀವು ನನಗೆ ರಕ್ಷಣೆಯೀಯಬಲ್ಲಿರಾ? ಯಾಕೋ—ಕೋಪಿಸಿಕೋಬೇಡಿ, ಹೀಗೆ ಅಂತೀನಿ ಅಂತ—ನನಗೆ ತುಂಬ ಭಯವಾಗುತ್ತೆ. ನೀವು ಹೇಗೆ ನನಗೆ ಸಹಾಯ ನೀಡಬಲ್ಲಿರಿ?" ಎಂದಳು ಮಾಷಾ.

"ಯಾಕೆ ಸಾಧ್ಯವಿಲ್ಲ? ದ್ವೇಷಿಸುವ ಆ ಮನುಷ್ಯನ ಹಿಡಿತದಿಂದ ನಾನು ನಿಮ್ಮನ್ನು ಬಿಡಿಸಬಲ್ಲೆ."

"ದಮ್ಮಯ್ಯ, ಹಾಗೆ ಮಾಡಬೇಡಿ. ದಯವಿಟ್ಟು ಅವರನ್ನು ಮಾತ್ರ ನೀವು ಮುಟ್ಟಬೇಡಿ. ನಾನು ಬೇಡಿಕೋತೇನೆ. ನೀವು ನನ್ನನ್ನು ಪ್ರೀತಿಸುವುದೇ ಆದರೆ ಅವರಿಗೆ ತೊಂದರೆ ಕೊಡುವ ಸಾಹಸ ಮಾಡಬೇಡಿ. ಭಯಾನಕ ಕೃತ್ಯವೊಂದಕ್ಕೆ ನಾನು ಕಾರಣಳೆನಿಸಿಕೊಳ್ಳುವುದು ನನಗೆ ಇಷ್ಟವಿಲ್ಲ...."

"ಹಾಗೇ ಆಗಲಿ. ನಾನು ಆತನನ್ನು ಮುಟ್ಟಿ ಕೂಡ ನೋಡುವುದಿಲ್ಲ. ನಿಮ್ಮ ಅಭೀಷ್ಟ, ನನಗೆ ಪವಿತ್ರವಾದದ್ದು. ನಿಮ್ಮಿಂದೆಯಿಂದ ಆತ ಬದುಕಿಕೊಂಡ. ನಿಮ್ಮ ಹೆಸರಿಗೆ ಕಲಂಕ ತರುವ ಯಾವ ದುಷ್ಕೃತ್ಯವನ್ನೂ ನಾನು ಮಾಡುವುದಿಲ್ಲ. **ನಾನು** ಪಾಪಕೃತ್ಯವೆಸಗಿದರೂ, **ನೀವು** ಮಾತ್ರ ಸದಾ ಪರಿಶುದ್ಧರಾಗಿರಬೇಕೆಂಬುದೇ ನನ್ನ ಆಸೆ....ಆದರೆ, ನಿಮ್ಮ ನಿಷ್ಕರುಣಿ ತಂದೆಯ ದಬ್ಬಾಳಿಕೆಯಿಂದ ನಿಮ್ಮನ್ನು ಹೇಗೆ ವಿಮುಕ್ತರನ್ನಾಗಿ ಮಾಡುವುದು ?"

"ಆ ವಿಷಯದಲ್ಲಿ ಆಸೆ ಇಟ್ಟುಕೊಂಡಿರಲು ಇನ್ನೂ ಸ್ವಲ್ಪ ಅವಕಾಶವಿದೆ. ಜೀವನದಲ್ಲಿ ಸಂಪೂರ್ಣ ಜಿಗುಪ್ಸೆ ತೋರಿಸಿಯೋ ಅಥವಾ ಕಣ್ಣೀರಿನ ಪ್ರವಾಹ ಹರಿಸಿಯೋ ನನ್ನ ತಂದೆಯ ಮನ ಒಲಿಸಿಕೊಳ್ಳಬಹುದೆಂಬ ನಂಬಿಕೆ ನನಗಿದೆ. ಅವರು ತುಂಬ ನಿರ್ದಾಕ್ಷಿಣ್ಯ ಪ್ರವೃತ್ತಿಯವರೆಂಬುದೇನೋ ನಿಜ. ಆದರೂ ನನ್ನನ್ನು ಅವರು ಗಾಢವಾಗಿ ಪ್ರೀತಿಸುತ್ತಾರಾದ್ದರಿಂದ ಸ್ವಲ್ಪ ಆಸೆ ಇದೆ."

"ವ್ಯರ್ಥ ಆಸೆಗಳು! ನಿಮ್ಮ ಕಣ್ಣೀರು ಅವರ ತೀರ್ಮಾನವನ್ನು ಬದಲಿಸುವುದೆಂದು ತಿಳಿದಿರುವಿರಾ? ಆ ಕಣ್ಣೀರು, ಸಾಮಾನ್ಯವಾಗಿ ಯುವ

ತಿಯರು, ಪ್ರೀತಿ–ವಿಶ್ವಾಸಗಳಿಗಲ್ಲದೆ ಅನುಕೂಲತೆಗೋಸ್ಕರ ಮದುವೆಯಾಗಬೇಕಾಗಿ ಬಂದಾಗ ತೋರಿಸುವ ಕೇವಲ ಸ್ತ್ರೀಸಹಜ ಅಳುಕು, ಅಸಮಾಧಾನದ ಕುರುಹೆಂದೇ ಅವರು ತಿಳಿಯುವರು. ನಿಮಗೆ ಇಷ್ಟವಿಲ್ಲದಿದ್ದರೂ, ನಿಮ್ಮನ್ನು 'ಸುಖಪಡಿಸ' ಬೇಕೆಂದು ಅವರು ಮನಸ್ಸು ಮಾಡಿದರೂ ಮಾಡಬಹುದು. ಆಗೇನು ಮಾಡುವಿರಿ? ನಿಮ್ಮ ಭವಿಷ್ಯವನ್ನು ಎಂದೆಂದಿಗೂ ಆ ಮುದಿ ರಾಜಕುಮಾರನ ವಶದಲ್ಲಿರುವಂತೆ ಮಾಡಲು, ನಿಮ್ಮನ್ನು ಬಲವಂತದಿಂದ ಚರ್ಚಿಗೆ ಎಳೆದುಕೊಂಡು ಹೋದರೆ?”

“ಆಗ.... ಓಹ್, ಆಗೇನು ಮಾಡುವುದು ..ಇನ್ನೇನೂ ಮಾಡಲಾಗುವುದಿಲ್ಲ....ನಾನು ನಿಸ್ಸಹಾಯಕಳಾಗುತ್ತೇನೆ. ಆಗ ನೀವು ನನ್ನ ರಕ್ಷಣೆಗೆ ಬನ್ನಿ. ನಾನು ನಿಮ್ಮ ಸಹಧರ್ಮಿಣಿಯಾಗುವುದು ಖಂಡಿತ.”

ಕೊನೆಯ ಮಾತನ್ನು ಕೇಳಿ ದುಬ್ರೋವ್‌ಸ್ಕಿ ರೋಮಾಂಚಿತನಾದ. ಒಂದು ಕ್ಷಣ ಆತನ ನಿಸ್ತೇಜ ಮುಖ ರಕ್ತವರ್ಣಕ್ಕೆ ತಿರುಗಿತು. ಪುನಃ ಕೂಡಲೇ, ಮೊದಲಿಗಿಂತ ಹೆಚ್ಚು ಕಂದಿಹೋಯಿತು. ತಲೆ ತಗ್ಗಿಸಿಕೊಂಡು ಆತ ಬಹಳ ಹೊತ್ತು ಮೌನವಾಗಿ ನಿಂತ.

“ಹಾಗೇ ಆಗಲಿ. ನಿಮ್ಮ ಶಕ್ತಿಯನ್ನೆಲ್ಲಾ ಒಟ್ಟುಗೂಡಿಸಿ ನಿಮ್ಮ ತಂದೆಯನ್ನು ಕೇಳಿಕೊಳ್ಳಿ. ಆ ನೀತಿಭ್ರಷ್ಟ, ಮುದಿಗೊಡ್ಡು ರಾಜಕುಮಾರನ ಸಹವಾಸ ಮಾಡಿದರೆ, ನಿಮ್ಮ ಉಜ್ವಲ ಭವಿಷ್ಯ, ನಿಮ್ಮ ಯೌವನ, ಹೇಗೆ ಕಮರಿಹೋಗುವುದು ಎಂಬ ಭೀಕರ ಚಿತ್ರಣವನ್ನು ಅವರ ಮುಂದಿರಿಸಿ. ಅವರಿಗೆ ಕಟು ಎನಿಸಿದರೂ, ನಿಮ್ಮ ನಿರ್ಧಾರವನ್ನು ಧೈರ್ಯವಾಗಿ ತಿಳಿಸಿಬಿಡಿ....ಅಲ್ಲಿಗೂ ಅವರು ಒಪ್ಪದಿದ್ದರೆ, ಎಚ್ಚರಿಕೆ ಕೊಡಿ : ಅವರು ತಮ್ಮ ನಿರ್ಧಾರವನ್ನು ಬದಲಿಸದಿದ್ದರೆ, ಆಗ....ಆಗ, ಅವರನ್ನು ಭಯಭ್ರಾಂತರನ್ನಾಗಿ ಮಾಡುವ ಅವರ ದ್ವೇಷಿಗಳಿಂದಲೇ ರಕ್ಷಣೆ ಪಡೆಯುವೆನೆಂದು ತಿಳಿಸಿಬಿಡಿ.... ಹಣ, ಆಸ್ತಿ, ಮೊದಲಾದವು ನಿಮಗೆ ಕ್ಷಣಿಕ ತೃಪ್ತಿಯನ್ನು ಸಹಾ ಕೊಡಲಾರವೆಂದೂ; ಭೋಗವಸ್ತುಗಳು ತಾತ್ಕಾಲಿಕವಾಗಿ ಬಡತನದ ಕಷ್ಟಗಳನ್ನು ಸ್ವಲ್ಪಮಟ್ಟಿಗೆ ಕಡಮೆ ಮಾಡಬಲ್ಲುವಾದರೂ, ಸಾಧಾರಣವಾಗಿ ಮೊದಮೊದಲು ಅವು ಆಸಕ್ತಿ ಕೆರಳಿಸುವುವೆಂದೂ, ಹಳೆಯದಾದ ಹಾಗೆ, ಅವುಗಳ ಮೇಲಿನ ಪ್ರೀತಿ ತನ್ನಷ್ಟಕ್ಕೆ ತಾನೇ ನಶಿಸಿ ಹೋಗುವುವೆಂದೂ, ನಿಮ್ಮ ತಂದೆಯವರಿಗೆ ಸ್ಪಷ್ಟವಾಗಿ ತಿಳಿಸಿಬಿಡಿ. ಚಂಡಿಹಿಡಿದು ಅವರ ಮುಂದೆ

ಕುಳಿತುಬಿಡಿ. ಅವರ ಕೋಪ, ಬೆದರಿಕೆಗಳಿಗೆ ನೀವು ಮಣಿಯದಿರಿ. ನಾನು ನಿಮ್ಮನ್ನು ಬೇಡಿಕೊಳ್ಳುತ್ತೇನೆ: ಆಸೆಯ ಛಾಯೆ ಮಾತ್ರ ಕಂಡು ಬಂದರೂ ಸರಿಯೆ, ಜಯವನ್ನು ಪಡೆಯಲು ಸರ್ವಪ್ರಯತ್ನ ಮಾಡಿ. ಕಟ್ಟಕಡೆಯ ವರೆಗೂ ಯತ್ನಿಸಿ, ಬೇರೆ ಮಾರ್ಗವೇ ಇಲ್ಲವೆಂದು ಖಚಿತವಾದರೆ...."

ದುಬ್ರೋವ್‌ಸ್ಕಿ ಮುಂದೆ ಮಾತನಾಡಲಾರದಾದ. ಅಳು ಒತ್ತರಿಸಿ ಬಂತು. ಗಂಟಲಿನ ನರಗಳೆಲ್ಲ ಉಬ್ಬಿದುವು. ಕೈಗಳಿಂದ ಮುಖ ಮುಚ್ಚಿ ಕೊಂಡು ಬಿಕ್ಕಳಿಸಿ ಅಳತೊಡಗಿದ. ಮಾಷಾಳಿಗೂ, ತಡೆಯಲಾರದೆ ಕಣ್ಣೀರು ಉಕ್ಕಿಬಂತು....

"ಅಯ್ಯೋ ನನ್ನ ದುರದೃಷ್ಟವೇ! ಎಷ್ಟು ದುಃಖಮಯ!" ಎಂದು ನಿಟ್ಟುಸಿರುಬಿಡುತ್ತಾ ದುಬ್ರೋವ್‌ಸ್ಕಿ ಉದ್ಗರಿಸಿದ. "ನಿಮಗಾಗಿ ನನ್ನ ಪ್ರಾಣವನ್ನೇ ಮುಡುಪಾಗಿಟ್ಟಿದ್ದೇನೆ. ನಿಮ್ಮನ್ನು ದೂರದಿಂದ ನೋಡಿದರೂ ಸಾಕು, ನಿಮ್ಮ ಕೈ ಸೋಂಕಿದರೂ ಸಾಕು, ನನಗೆ ಉನ್ಮತ್ತನಾಗುವಷ್ಟು ಸುಖ ಉಂಟಾಗುತ್ತದೆ. ಮತ್ತೆ ಈಗ ನಿಮ್ಮನ್ನು ನನ್ನ ಉದ್ವಿಗ್ನ ಹೃದಯಕ್ಕೆ ತಬ್ಬಿ ಕೊಂಡು, 'ನನ್ನ ದೇವಿ, ಸತ್ತರೂ ನಾವಿಬ್ಬರೂ ಒಟ್ಟಿಗೇ ಸಾಯೋಣ!' ಎಂದು ಹೇಳಬಹುದಾದ ಸದವಕಾಶ ಸಿಕ್ಕಿರುವಾಗ, ಬಡಪಾಯಿಯಾದ ನಾನು ಈ ಸ್ವರ್ಗಸುಖವನ್ನು ಬಿಡಬೇಕಾಗಿ ಬಂದಿದೆ! ಈ ಮಹದಾಕಾಂಕ್ಷೆ ಯನ್ನು, ನನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಿ ಅದುಮಿ ಹಿಡಿಯಬೇಕಾ ಗಿದೆ!....ನನಗೆ ಸಿಗಬಹುದಾದ ಅಪ್ರತಿಮ, ಅಮೂಲ್ಯ, ಪ್ರತಿಫಲದ ಅರಿವಿಲ್ಲ ದಿದ್ದರೆ, ನಾನು ಹೀಗೆ ಪಾದಸೇವಕನಂತೆ ನಿಮ್ಮ ಮುಂದೆ ಬೇಡುವ ನನ್ನ ಪ್ರಯತ್ನವನ್ನು ಸಫಲಗೊಳಿಸುವಂತೆ ದೇವರನ್ನು ಪ್ರಾರ್ಥಿಸುವ ಸಾಹಸ ಮಾಡುತ್ತಿದ್ದೆನೆ?....ಅಯ್ಯೋ, ನನ್ನ ಆಸೆ ಪೂರ್ಣವಾಗಲು ಅಡ್ಡಬರುವವ ರನ್ನು ಎಷ್ಟರ ಮಟ್ಟಿಗೆ ದ್ವೇಷಿಸಬೇಕು ನಾನು....ಓಹ್, ಅದಾಗದು. ಪ್ರೇಮ ತುಂಬಿದ ನನ್ನ ಹೃದಯದಲ್ಲಿ ಈಗ ದ್ವೇಷಕ್ಕೆ ಸ್ಥಾನವೇ ಇಲ್ಲ...."

ಆಕೆಯ ಕೃಶವಾದ ನಡುವಿನ ಸುತ್ತ ತನ್ನ ಕೈಸುತ್ತುಹಾಕಿ ಆಕೆ ಯನ್ನು ನಯವಾಗಿ ಆತ ತನ್ನ ಎದೆಗೆ ಅಪ್ಪಿಕೊಂಡ. ಆ ಯುವಕ ಚೋರ ನಲ್ಲಿ ಸಂಪೂರ್ಣ ವಿಶ್ವಾಸವಿಟ್ಟು ಆಕೆಯೂ ತನ್ನ ತಲೆಯನ್ನು ಆತನ ಭುಜದ ಮೇಲೆ ಒರಗಿಸಿದಳು. ಇಬ್ಬರೂ ಮೌನದಿಂದಿದ್ದರು.

ಕಾಲ ನಿರಾತಂಕವಾಗಿ ಸಾಗಿಹೋಗುತ್ತಿತ್ತು.

ಕೊನೆಗೆ ಮಾಷಾ ಕಷ್ಟಪಟ್ಟುಕೊಂಡು ಹೇಳಿದಳು: "ನಾನು ಇನ್ನು ಹೋಗಬೇಕು."

ದುಬ್ರೋವ್‌ಸ್ಕಿ, ತನ್ಮಯಾವಸ್ಥೆಯಲ್ಲಿ ಮುಳುಗಿದವನು ನಿಧಾನವಾಗಿ ಜಾಗೃತ ಸ್ಥಿತಿಗೆ ಬಂದ. ಆಕೆಯ ಕೈಹಿಡಿದು ಬೆರಳಿಗೆ ಉಂಗುರ ತೊಡಿಸಿದ.

"ನನ್ನ ಸಹಾಯವೇ ಉಳಿದ ಮಾರ್ಗವೆಂದು ನೀವು ನಿಶ್ಚಯಿಸಿದಾಗ, ಈ ಉಂಗುರವನ್ನು ತಂದು, ಇಲ್ಲಿ ಕಾಣುವ ಆ ಓಕ್ ಮರದ ಪೊಟರೆಯಲ್ಲಿ ಹಾಕಿಬಿಡಿ—ನಾನೇನು ಮಾಡಬೇಕೆಂದು ನನಗೆ ಆಗ ತಿಳಿಯುತ್ತದೆ," ಎಂದು ಆತ ಹೇಳಿದ.

ದುಬ್ರೋವ್‌ಸ್ಕಿ ಆಕೆಯ ಕರಪಿಡಿದು ಚುಂಬಿಸಿ, ಮರಗಳ ಗುಂಪಿನಲ್ಲಿ ಕಣ್ಮರೆಯಾದ.

## ೮

ರಾಜಕುಮಾರ ವರ್ಸ್ಕಿಯ ಪ್ರಣಯ ಪ್ರಸಂಗ ನೆರೆ ಹೊರೆಯವರಿಗೆಲ್ಲ ಬೇಗ ಗೊತ್ತಾಯಿತು. ಕಿರಿಲ್ಲಾ ಪೆಟ್ರೋವಿಚ್‌ನಿಗೆ ಅಭಿನಂದನೆಗಳು ಬರತೊಡಗಿದುವು. ಮದುವೆಗೆ ಸಿದ್ಧತೆಗಳೆಲ್ಲ ಆಗತೊಡಗಿದುವು. ಮಾಷಾ ಮಾತ್ರ ತನ್ನ ನಿರ್ಧಾರವನ್ನು ಬಹಿರಂಗಗೊಳಿಸದೆ, ದಿನದಿನವೂ ಮುಂದಕ್ಕೆ ಹಾಕುತ್ತಿದ್ದಳು. ಅದೇ ಹೊತ್ತಿಗೆ, ಆ ಮುದಿಗೊಡ್ಡು ಪ್ರೇಮಿಯನ್ನು ದ್ವೇಷಿಸುವುದನ್ನು, ತಾತ್ಸಾರದಿಂದ ಕಡೆಗಣಿಸುವುದನ್ನು ಹೆಚ್ಚು ಮಾಡಿದಳು. ಆದರೆ ಈ ವರ್ತನೆ ರಾಜಕುಮಾರನನ್ನೇನೂ ಕಳವಳಕ್ಕೀಡುಮಾಡಲಿಲ್ಲ. ಆತನಿಗೆ ಬೇಕಾಗಿದ್ದುದು ಆಕೆಯ ಪ್ರೀತಿಯಲ್ಲ; ಮೌನಸಮ್ಮತಿ.

ಹೀಗೆ ಸಮಯ ಸವೆಯುತ್ತಿತ್ತು. ಕೊನೆಗೆ, ಮಾಷಾ ಕಾರ್ಯೋನ್ಮುಖಳಾಗಲು ನಿರ್ಧರಿಸಿದಳು. ರಾಜಕುಮಾರ ವೆರೈಸ್ಕಿಗೆ ಪತ್ರವೊಂದನ್ನು ಬರೆದು ದೊಡ್ಡ ಮನಸ್ಸು ಮಾಡಿ ತನ್ನ ಪ್ರಾರ್ಥನೆಯನ್ನು ನಡಸಿಕೊಡಬೇಕೆಂದು ಕೇಳಿಕೊಂಡಳು. ಆ ಪತ್ರದಲ್ಲಿ, ತನಗೆ ಆತನಲ್ಲಿ ಎಳ್ಳಷ್ಟೂ ಅನುರಾಗವಿಲ್ಲವೆಂದೂ ತನ್ನನ್ನು ಆತ ನಿರಾಕರಿಸಬೇಕೆಂದೂ ಅಷ್ಟು ಕೃಪೆ ಮಾಡಿ ಆತನೇ ತಂದೆಯ ಬಲೋದ್ಬಂಧನದಿಂದ ತನ್ನನ್ನು ರಕ್ಷಿಸಬೇಕೆಂದೂ,

ಬರೆದಳು. ಆ ಕಾಗದವನ್ನು ಗುಟ್ಟಾಗಿ ಆತನಿಗೆ ತಲಪಿಸಿದಳು. ಆತ, ಒಬ್ಬನೇ ಇದ್ದಾಗ, ಆ ಪತ್ರವನ್ನು ಓದಿದ. ಮುಚ್ಚುಮರೆಯಿಲ್ಲದೆ ಬರೆದ ಆ ಪತ್ರ ಆವನಲ್ಲಿ ನಿರೀಕ್ಷಿಸಿದ ಪ್ರತಿಕ್ರಿಯೆಯನ್ನುಂಟುಮಾಡಲಿಲ್ಲ. ಬದಲು, ಆ ಪತ್ರವನ್ನು ತನ್ನ ಭಾವೀ ಮಾವನಿಗೆ ತೋರಿಸಿ, ಮದುವೆ ಆದಷ್ಟು ಬೇಗ ಆಗಿಬಿಡಬೇಕೆಂದು ಆತುರಪಡಿಸಲು ಆತ ನಿರ್ಧರಿಸಿದ.

ಕಿರಿಲ್ಲಾ ಪೆಟ್ರೋವಿಚ್ ಆ ಪತ್ರವನ್ನು ನೋಡಿ ಕಿಡಿಕಿಡಿಯಾದ. ಆಕೆಯ ಪತ್ರವನ್ನು ತಾನೂ ಓದಿದ ವಿಷಯವನ್ನು ಮಾಷಾಳಿಗೆ ತಿಳಿಸಕೂಡ ದೆಂದು ಪೆಟ್ರೋವಿಚ್‌ನನ್ನು ಒಪ್ಪಿಸಲು ರಾಜಕುಮಾರನಿಗೆ ಬಹು ಕಷ್ಟವಾ ಯಿತು. ಪೆಟ್ರೋವಿಚ್ ಕೊನೆಗೆ ಒಪ್ಪಿದ. ಆದರೆ ಕ್ಷಣಮಾತ್ರವೂ ವ್ಯರ್ಥ ವಾಗಿ ಹೋಗಬಾರದೆಂದೂ, ಮಾರನೆಯ ದಿನವೇ ವಿವಾಹ ಆಗಿ ತೀರಬೇ ಕೆಂದೂ ತೀರ್ಮಾನಿಸಿದ. ಈ ನಿರ್ಣಯ ರಾಜಕುಮಾರನಿಗೆ ಸಾಧುವಾಗಿಯೇ ತೋರಿತು. ಇದಾದಮೇಲೆ ರಾಜಕುಮಾರ ತನ್ನ ಭಾವೀ ಪತ್ನಿಯ ಬಳಿ ಸಾರಿ, ಆಕೆಯ ಪತ್ರ ತನ್ನನ್ನು ಬಹಳ ದುಃಖಿಯನ್ನಾಗಿ ಮಾಡಿತೆಂದು ಮೊಸಳೆಗಣ್ಣೀರು ಕರೆದ. ಆದರೂ ಏನು ಮಾಡುವುದು? ಮದುವೆಯಾದ ಅನಂತರ ಇಬ್ಬರೂ ಒಟ್ಟಿಗೆ ಜೀವಿಸತೊಡಗಿದ ಮೇಲಾದರೂ ಆಕೆಯ ಪ್ರೀತಿ ವಿಶ್ವಾಸ ಗಳಿಸುವ ಭರವಸೆ ತನಗಿದೆಯೆಂದು ಹೇಳಿಕೊಂಡ. ಆಕೆಯನ್ನು ಕಳೆದುಕೊಳ್ಳುವುದೆಂದರೆ ತನ್ನ ಪ್ರಾಣವನ್ನೇ ಕಳೆದುಕೊಂಡಂತೆ. ಅಂತಹ ಆತ್ಮಘಾತಕ ಕೆಲಸವನ್ನು ಮಾಡಲು ಯಾರಿಗೆ ತಾನೇ ಇಷ್ಟ?—ಹೀಗೆ ಹೇಳಿ ತುಂಬ ಗೌರವದಿಂದ ಆಕೆಯ ಕೈಚುಂಬಿಸಿ, ಆಕೆಯ ತಂದೆ ಮಾಡಿದ್ದ ತೀರ್ಮಾನದ ಬಗ್ಗೆ ಒಂದು ಮಾತನ್ನೂ ಹೇಳದೆ ಹಿಂದಿರುಗಿದ.

ಆತ ಮನೆಯ ಇನ್ನೂ ಅಂಗಳ ದಾಟಿ ಹೋಗಿರಲಿಲ್ಲ. ಆಗಲೇ ಆಕೆಯ ತಂದೆ ಕೋಣೆಯನ್ನು ಹೊಕ್ಕು, ಮಾರನೆಯ ದಿನವೇ ಮದುವೆಗೆ ಸಿದ್ಧಳಾಗಬೇಕೆಂದು ಖಂಡಿತವಾಗಿ ಆಜ್ಞಾಪಿಸಿದ. ರಾಜಕುಮಾರ ವೆರೈ ಸ್ಕಿಯ ಮಾತುಗಳನ್ನು ಕೇಳಿದಾಗಲೇ, ಮರಯ್ಯಾ ಕಿರಿಲ್ಲೋವ್ನಾ ತಲ್ಲಣಿಸಿ ಹೋಗಿದ್ದಳು. ಈಗ ತಂದೆಯ ಬಿರುನುಡಿಗಳನ್ನು ಕೇಳಿ, ಕಣ್ಣೀರು ಸುರಿ ಸುತ್ತಾ, ಆತನ ಕಾಲಮೇಲೆ ಬಿದ್ದು ಅಂಗಲಾಚಿ ಬೇಡಿಕೊಂಡಳು:

“ಅಪ್ಪ, ನನ್ನನ್ನು ಕೊಲ್ಲಬೇಡಿ!....ನನ್ನ ಪ್ರೀತಿಯ ತಂದೆ, ನಾನು ಆ ರಾಜಕುಮಾರನನ್ನು ಪ್ರೀತಿಸುವುದಿಲ್ಲ. ನನಗೆ ಆತನ ಪತ್ನಿಯಾಗಲಿಷ್ಟವಿಲ್ಲ.”

"ಏನಮ್ಮ ಇವೆಲ್ಲ, ನಿನ್ನ ರಗಳೆ? ಇದುವರೆಗೂ ಮಾತನಾಡದೆ, ಸಮ್ಮತಿ ಸೂಚಿಸಿ, ಈಗ, ಎಲ್ಲವೂ ತೀರ್ಮಾನವಾದಮೇಲೆ, ನೀನು ಚಂಚಲ ಚಿತ್ತಳಾಗಿ, ಮಾತು ಮುರಿಯಲು ಯತ್ನಿಸುವೆಯಲ್ಲಾ! ಈ ಹುಡುಗಾಟಿಕೆ ಎಲ್ಲ ಸಾಕುಮಾಡಮ್ಮ! ಹೀಗೆಲ್ಲಾ ಆಟಹೂಡಿ ನನ್ನಿಂದ ಏನನ್ನೂ ಪಡೆಯಲಾರೆ."

"ಅಯ್ಯೋ, ನನ್ನ ಕತ್ತು ಕುಯ್ಯಬೇಡಿ, ಅಪ್ಪ. ನನ್ನನ್ನು ನಿಮ್ಮ ಮನೆಯಿಂದ ಹೊರದೂಡಿ, ನಾನು ಪ್ರೀತಿಸದ ಮನುಷ್ಯನೊಡನೆ ವಾಸಿಸುವಂತೆ ಯಾಕೆ ಬಲಾತ್ಕಾರ ಮಾಡುವಿರಿ? ನಾನು ನಿಮಗೆ ಅಷ್ಟೊಂದು ಬೇಸರವನ್ನುಂಟುಮಾಡಿದ್ದೇನೆಯೆ? ನನಗೆ ಇನ್ನೇನೂ ಬೇಕಾಗಿಲ್ಲ—ಹಿಂದಿನಂತೆಯೇ ನಿಮ್ಮೊಡನೆ ಇರುವುದಕ್ಕೆ ಅನುಮತಿ ಕೊಡಿ. ಅಪ್ಪಾ, ನನಗೆ ಚೆನ್ನಾಗಿ ಗೊತ್ತು—ನಾನು ಹೊರಟು ಹೋದರೆ ನಿಮಗೆ ತುಂಬ ದುಃಖವಾಗುತ್ತೆ, ಅಂತ. ಅದರ ಜೊತೆಗೆ, ನಾನು ಆ ರಾಜಕುಮಾರನೊಂದಿಗೆ ಸುಖವಾಗಿಲ್ಲವೆಂದು ನಿಮಗೆ ತಿಳಿದುಬಂದರೆ, ನಿಮ್ಮ ದುಃಖ ಇಮ್ಮಡಿಯಾಗುತ್ತದೆ. ಆದ್ದರಿಂದ ಬಲಾತ್ಕರಿಸ ಬೇಡಿ, ಅಪ್ಪ. ನನಗೆ ಆತನನ್ನು ವಿವಾಹವಾಗಲು ಇಷ್ಟವಿಲ್ಲ...." ಎಂದು ಹಲುಬಿದಳು, ಮಾಷಾ.

ಆಕೆಯ ಮರ್ಮಭೇದಕ ಗೋಳಾಟ ಪೆಟ್ರೋವಿಚ್‌ನ ಎದೆಯನ್ನು ಕರಗಿಸಿತು. ಆದರೂ, ಆ ಸಹಾನುಭೂತಿಯ ಭಾವನೆಯನ್ನು ತುಳಿದು, ಹಿಂದಿನ ಆಕ್ರೋಶವನ್ನೇ ತೋರುತ್ತಾ, ಆಕೆಯನ್ನು ಪಕ್ಕಕ್ಕೆ ತಳ್ಳಿ, ಗಡುಸಾಗಿ ಹೇಳಿದ: "ಸಾಕುಮಾಡಮ್ಮ, ನಿನ್ನ ಅಸಂಬದ್ಧ ಪ್ರಲಾಪವನ್ನು. ಕೇಳಿಸ್ತೇ? ನಿನಗೆ ಯಾವುದು ಸುಖ ಅನ್ನೋದು ನಿನಗಿಂತ ನನಗೆ ಚೆನ್ನಾಗಿ ಗೊತ್ತಿದೆ. ಕಣ್ಣೀರು ಸುರಿಸುವುದರಿಂದ ಏನೂ ಪ್ರಯೋಜನವಾಗದು. ನಿನ್ನ ಮದುವೆ ನಾಳೆಯಿಲ್ಲ ನಾಡದ್ದು ಖಂಡಿತ ಆಗೇ ತೀರುವುದು."

"ನಾ—ಳೆ—ಯಿ—ಲ್ಲ—ನಾಡದ್ದು! ಅಯ್ಯೋ ದೇವರೇ! ಇಲ್ಲ, ಇಲ್ಲ, ಅದು ಸಾಧ್ಯವೇ ಇಲ್ಲ, ಅದು ಆಗಲಾರದು! ಇಲ್ಲಿ ಕೇಳಿ, ಅಪ್ಪ,—ನೀವೇನಾದರೂ ನನ್ನನ್ನು ಪೂರ್ತಿಯಾಗಿ ನಾಶಮಾಡಬೇಕೂಂತ ತೀರ್ಮಾನಿಸಿದ್ದರೆ, ನೀವು ಕನಸಿನಲ್ಲೂ ಕಂಡರಿಯದ ಕಡೆಯಿಂದ ನಾನು ರಕ್ಷಣೆ ಪಡೆಯಬೇಕಾಗುತ್ತೆ. ನನ್ನನ್ನು ಎಂತಹ ಅತಿರೇಕಕ್ಕೆ ಬಲಾತ್ಕಾರದಿಂದ ತಳ್ಳಿದಿರಿ ಎಂಬುದು ನಿಮಗೆ ಆಮೇಲೆ ಗೊತ್ತಾದಾಗ, ನೀವೇ ಭಯಭ್ರಾಂತರಾಗುವಿರಿ."

ಎಂದು ಮಾಷಾ, ತುಸು ಧೈರ್ಯ ಮಾಡಿ ಹೇಳಿದಳು.

"ಓಹೋ, ಏನಮ್ಮ ಇನ್ನೆಲ್ಲ? ಬೆದರಿಕೆ ಹಾಕೋಕೆ ಬಂದ್ಯಾ? ನನಗೆ ಬೆದರಿಕೆ ಹಾಕುವಷ್ಟು ಧೈರ್ಯ ಬಂತೆ ನಿನಗೆ, ನಾಚಿಕೆಗೆಟ್ಟ ಹುಡುಗಿ? ನೀನು ಎಂದೂ ಊಹಿಸದೆ ಇರುವಂತಹ ತೊಂದರೆಗಳನ್ನು ನಿನಗೆ ನಾನು ಮಾಡ ಬಲ್ಲೆನೆಂದು ತಿಳಿದಿಯೆ? ಯಾರದೋ ರಕ್ಷಣೆ ಪಡೆಯುವೆನೆಂದು ಹೇಳಿ ಕೊಂಡು ನನ್ನನ್ನು ಹೆದರಿಸುವುದಕ್ಕೆ ಪ್ರಯತ್ನಿಸುತ್ತೀಯ? ಯಾರಮ್ಮ ಆತ ನಿನಗೆ ರಕ್ಷಣೆ ಈಯುವವ?" ಎಂದ ಪೆಟ್ರೋವಿಷ್, ಕೋಪ–ವ್ಯಂಗ್ಯ ಬೆರತ ಧ್ವನಿಯಲ್ಲಿ.

"ಇನ್ನಾರು, ವ್ಲಾಡಿಮಿರ್ ದುಬ್ರೋವ್‌ಸ್ಕಿ" ಎಂದು ಗಟ್ಟಿ ಮನಸ್ಸು ಮಾಡಿ ಹೇಳಿಯೇಬಿಟ್ಟಳು, ಮಾಷಾ.

ಒಂದು ಕ್ಷಣ, ತನ್ನ ಮಗಳಿಗೆ ಎಲ್ಲೋ ಬುದ್ಧಿ ಭ್ರಮಣೆಯಾಗಿರ ಬೇಕೆಂದು ಪೆಟ್ರೋವಿಷ್ ಯೋಚಿಸಿದ.

"ಹಾಗಾದರೆ ಬಹಳ ಒಳ್ಳೆಯದು. ನೀನು ನಿನ್ನ ರಕ್ಷಕ—ಆತ ಯಾರೇ ಆಗಲಿ—ಬರುವ ತನಕ ಕಾದಿರಬಹುದು. ಆದರೆ ಅಲ್ಲಿಯವರೆಗೆ ನೀನು ಈ ಕೋಣೆಯಲ್ಲೇ ಇರಬೇಕು. ಮದುವೆಯಾಗುವ ಮುನ್ನ ಆಚೆಗೆ ಕಾಲಿಡಕೂಡದು," ಎಂದು, ಪೆಟ್ರೋವಿಷ್ ಕೋಣೆಗೆ ಹೊರಗಿನಿಂದ ಬೀಗ ಹಾಕಿಕೊಂಡು ಹೊರಟುಹೋದ.

ಆ ನಿರ್ಭಾಗ್ಯ ಯುವತಿ ಬಹಳ ಹೊತ್ತಿನವರೆಗೆ ಅತ್ತಳು. ಮುಂದೆ ತನಗೆ ಏನೇನು ಆಗಬಹುದು ಎಂಬುದನ್ನೆಲ್ಲಾ ಊಹಿಸಿಕೊಂಡಳು. ತನ್ನ ಅಭಿಮತವನ್ನು ತಂದೆಯ ಮುಂದೆ ಹೇಳುವ ಕಷ್ಟಸಾಧ್ಯವಾದ ಕೆಲಸವನ್ನಂತೂ ಹೇಗೋ ಮಾಡಿದ್ದಾಯಿತು. ಆದರಿಂದ ಈಗ ಅವಳ ಮನಸ್ಸಿಗೆ ಸ್ವಲ್ಪ ನೆಮ್ಮದಿ ಸಿಕ್ಕಂತಾಯಿತು; ತನ್ನ ಭವಿಷ್ಯದ ಬಗ್ಗೆ ಸ್ಪಷ್ಟವಾದ ರೀತಿಯಲ್ಲಿ ಯೋಚನೆ ಮಾಡುವಂತಾಯಿತು; ಸೂಕ್ತ ಕಾರ್ಯಕ್ರಮವನ್ನು ನಿರ್ದಿಷ್ಟ ವಾಗಿ ರೂಪಿಸಿಕೊಳ್ಳುವಂತಾಯಿತು. ಆ ಮುದಿಗೊಡ್ಡು ರಾಜಪುತ್ರನ ಮಡದಿಯಾಗುವುದಕ್ಕಿಂತ, ದರೋಡೆಕೋರ ದುಬ್ರೋವ್‌ಸ್ಕಿಯೊಡನೆ ದಾಂಪತ್ಯ ಜೀವನ ನಡಸುವುದು ಸ್ವರ್ಗಸುಖವೆನಿಸಿತು ಆಕೆಗೆ. ದುಬ್ರೋ ವ್‌ಸ್ಕಿ ತನಗೆ ಕೊಟ್ಟಿದ್ದ ಉಂಗುರವನ್ನು ನೋಡಿಕೊಂಡಳು. ಕಟ್ಟ ಕಡೆಯ ನಿರ್ಧಾರಕ್ಕೆ ಬರುವ ಮುನ್ನ ಇನ್ನೊಮ್ಮೆ ಆತ ಸಿಕ್ಕಿ, ನಿಧಾನವಾಗಿ ಆತನ ಸಲಹೆ ಪಡೆಯುವ ಅನುಕೂಲವಾದಲ್ಲಿ! ಅಂದು ರಾತ್ರಿಯೇ, ಉದ್ಯಾನ

ವನದ ಅದೇ ಲತಾಮಂಟಪದ ಬಳಿ ಆತ ಸಿಕ್ಕಿದರೂ ಸಿಕ್ಕಬಹುದು ಎಂದು ಆಕೆಯ ಒಳಮನಸ್ಸು ಹೇಳಿತು. ಕತ್ತಲಾಗುತ್ತಲೇ ಬೇಗ ಹೋಗಿ ಆ ಸ್ಥಳ ದಲ್ಲಿ ಆತನಿಗಾಗಿ ಕಾಯಬೇಕೆಂದು ಮನಸ್ಸು ಮಾಡಿದಳು, ಕತ್ತಲಾಯಿತು. ಮಾಷಾ ಹೊರಡಲು ಸಿದ್ಧಳಾದಳು—ಆದರೆ ಬಾಗಿಲಿಗೆ ಹೊರಗಿನಿಂದ ಬೀಗ ಹಾಕಿದ್ದಿತು. ಸೇವಕಿ, ಬಾಗಿಲಿನ ಅತ್ತಕಡೆಯಿಂದಲೇ, ಆಕೆಯನ್ನು ಎಲ್ಲೂ ಹೊರಗೆ ಬಿಡಬಾರದೆಂದು ಯಜಮಾನರು ಕಟ್ಟಪ್ಪಣೆ ಮಾಡಿದ್ದಾರೆಂದು ತಿಳಿಸಿದಳು. ಆಕೆ ತನ್ನ ಕೋಣೆಯಲ್ಲೇ ಕೈದಾಗಿದ್ದಳು! ಉತ್ಸಾಹ ಭಂಗ ವಾಗಿ, ದುಃಖಭರಿತಳಾಗಿ, ಬಟ್ಟೆಯನ್ನೂ ಬದಲಿಸದೆ, ಅಲ್ಲಿಯೇ ಕಿಟಕಿಯ ಬಳಿ, ರಾತ್ರಿಯ ಕಪ್ಪನ್ನೇ ಕಣ್ಣಿಟ್ಟು ನೋಡುತ್ತಾ, ಮಧ್ಯರಾತ್ರಿಯವರೆಗೂ ನಿಶ್ಚೇಷ್ಟಿತಳಾದಂತೆ ಕುಳಿತುಬಿಟ್ಟಳು. ಬೆಳಗಿನ ಜಾವದ ಹೊತ್ತಿಗೆ ಸ್ವಲ್ಪ ಜೊಂಪು ಹತ್ತಿದಂತಾಯಿತು. ಆದರೆ, ಅಪಶಕುನದ ವಿಕಾರ ದೃಶ್ಯಗಳು ಆಕೆಯನ್ನು ಆಗಾಗ್ಗೆ ಬೆಚ್ಚಿಬೀಳಿಸುತ್ತಿದ್ದುವು. ಕೊನೆಗೆ ಉಷಃಕಾಲದ ಸೂರ್ಯನ ಸೌಮ್ಯಕಿರಣಗಳು ಆಕೆಯನ್ನು ಎಚ್ಚರಗೊಳಿಸಿದುವು.

## ೯

ಕಣ್ಣು ತೆರೆಯುತ್ತಿದ್ದಂತೆಯೇ ಮೊದಲು ಆಕೆ ಕಂಡುದು ತಾನು ಎಂತಹ ಭೀಕರ ಪರಿಸ್ಥಿತಿಯಲ್ಲಿ ಸಿಕ್ಕಿಬಿದ್ದಿದ್ದೇನೆ ಎಂಬುದನ್ನು. ಅದರ ಅರಿವು ಅವಳನ್ನು ಭಯವಿಹ್ವಲಳನ್ನಾಗಿ ಮಾಡಿತು. ಕರೆಗಂಟೆಯನ್ನು ಶಬ್ದಮಾಡಿ ಸೇವಕಿಯರನ್ನು ಕರೆದು ವಿಚಾರಿಸಿದಳು. ಹಿಂದಿನ ಸಂಜೆ ಕಿರಿಲ್ಲಾ ಪೆಟ್ರೋವಿಚ್, ರಾಜಕುಮಾರನ ಜಮೀನ್ದಾರೀ ಅರ್ಬಟೋವೋಗೆ ಹೋಗಿದ್ದು, ರಾತ್ರಿ ಬಹಳ ಹೊತ್ತಾಗಿ ಹಿಂದಿರುಗಿದನೆಂದೂ, ಮಾಷಾ ಕೋಣೆಯಿಂದ ಹೊರಗೆ ಹೋಗದಂತೆ ಕಾವಲಿದ್ದು ಯಾರನ್ನೂ ಆಕೆಯೊಂದಿಗೆ ಮಾತನಾಡಲೂ ಬಿಡಬಾರದೆಂದು ಆಜ್ಞಾಪಿಸಿದ್ದನೆಂದೂ ಆ ಸೇವಕಿ ಉತ್ತರಿಸಿದಳು; ಮದುವೆಗೆ ವಿಶೇಷ ಸಿದ್ಧತೆಗಳನ್ನೇನೂ ಮಾಡಿಲ್ಲವೆಂದೂ, ಚರ್ಚಿನ ಪಾದ್ರಿಗೆ ಮಾತ್ರ ಯಾವ ಕಾರ್ಯಗೌರವದಿಂದಾಗಲೀ ಊರುಬಿಟ್ಟು ಹೋಗ ಬಾರದೆಂದು ಹೇಳಲಾಗಿದೆಯೆಂದೂ, ಆ ಸೇವಕಿ ತಿಳಿಸಿ, ಬಾಗಿಲಿಗೆ ಪುನಃ ಬೀಗಹಾಕಿಕೊಂಡು ಹೊರಟುಹೋದಳು.

ಸೇವಕಿಯ ಮಾತುಗಳು ತರುಣಿ ಕೈದಿಯ ಹೃದಯವನ್ನು ಕಲ್ಲಾಗಿಸಿದುವು. ಮನಸ್ಸಿನಲ್ಲಿ ದೊಡ್ಡ ಕ್ಷೋಭೆಯುಂಟಾಯಿತು. ದೇಹದಲ್ಲಿ ರಕ್ತ ವೇಗವಾಗಿ ಸಂಚರಿಸತೊಡಗಿತು. ದುಬ್ರೋವ್‌ಸ್ಕಿಗೆ ಮತ್ತೆ ಈ ಸಮಾಚಾರವನ್ನೆಲ್ಲಾ ಸಾದ್ಯಂತವಾಗಿ ತಿಳಿಸಬೇಕೆಂದು ತೀರ್ಮಾನಿಸಿದಳು. ಆದರೆ ಉಂಗುರವನ್ನು ಓಕ್ ಮರದ ಪೊಟರೆಯಲ್ಲಿ ಹಾಕುವುದು ಹೇಗೆ? ಎಂದು ಚಿಂತಿಸುತ್ತಾ ಕುಳಿತಳು. ಆ ಹೊತ್ತಿಗೆ ಎಲ್ಲಿಂದಲೋ ಒಂದು ಸಣ್ಣ ಕಲ್ಲು ಕಿಟಕಿಯ ಚೌಕಟ್ಟಿಗೆ ಬಡಿದು ಅವಳ ಮನವನ್ನು ಕದಲಿಸಿತು. ಮರಯ್ಯಾ ಕಿರಿಲ್ಲೋವ್ನಾ ಹೊರಗೆ ನೋಡಿದಳು. ಬಾಲಕ ಸಾಷಾ ಯಾರಿಗೂ ಕಾಣದಂತೆ ನಿಂತುಕೊಂಡು ಆಕೆಯನ್ನು ಸಂಜ್ಞೆಮಾಡಿ ಕರೆದ. ಅವನನ್ನು ಕಂಡು, ಅವನು ತನ್ನನ್ನು ಎಷ್ಟೊಂದು ಪ್ರೀತಿಸುತ್ತಾನೆಂದು ತಿಳಿದು ಆಕೆಗೆ ಬಹು ಸಂತೋಷವಾಯಿತು. ಕಿಟಕಿಯನ್ನು ಪೂರ್ತಿಯಾಗಿ ತೆರೆದಳು.

"ನಿನಗೆ ತುಂಬ ಒಳ್ಳೆಯದಾಗಲಿ ಸಾಷಾ. ಏನಪ್ಪ, ನನ್ನ ಜೊತೆ ಮಾತನಾಡಬೇಕೆ?"

"ಹೌದು, ಅಕ್ಕ. ನಿನಗೆ ಏನಾದರೂ ಬೇಕಾಗಿದೆಯೇಂತ ಕೇಳೋಣ ಅಂತ ಬಂದೆ. ಅಪ್ಪನಿಗೆ ತುಂಬ ಕೋಪ ಬಂದಿದೆ. ನೀನು ಹೇಳಿದ್ದನ್ನು ಯಾರೂ ಮಾಡಕೂಡದು ಅಂತ ಹೇಳಿಬಿಟ್ಟಿದ್ದಾನೆ. ಆದರೂ ನೀನು ಏನು ಮಾಡೂಂತ ಅಂದರೂ, ನಾನು ಮಾಡಲು ಸಿದ್ಧ."

"ತುಂಬ ಸಂತೋಷವಪ್ಪ, ಮುದ್ದು ಸಾಷಾ. ಇಲ್ಲಿ ಕೇಳು. ಆ ಲತಾಮಂಟಪದ ಬಳಿ, ಒಂದು ಪೊಟರೆ ಇರುವ ಓಕ್ ಮರ ನಿನಗೆ ಗೊತ್ತೆ?"

"ಓಹೋ, ಚೆನ್ನಾಗಿ ಗೊತ್ತು, ಅಕ್ಕ."

"ಸರಿ, ಹಾಗಾದರೆ. ಇಲ್ನೋಡಪ್ಪ, ನೀನು ನನ್ನನ್ನು ನಿಜವಾಗಿಯೂ ಪ್ರೀತಿಸಿದರೆ, ಒಂದು ಉಪಕಾರ ಮಾಡಪ್ಪ—ಈ ಉಂಗುರ ತಗೊಂಡು ಹೋಗಿ, ಆ ಓಕ್ ಮರದ ಪೊಟರೆಯಲ್ಲಿ ಹಾಕಿಬಿಡು.—ಯಾರಿಗೂ ಕಾಣಿಸದ ಹಾಗೆ ಮಾಡಬೇಕು, ತಿಳೀತಾ?"

ಹೀಗೆಂದು ಹೇಳಿ ಆಕೆ ಉಂಗುರವನ್ನು ಹೊರಕ್ಕೆ ಎಸೆದು ಕಿಟಕಿಯನ್ನು ಹಾಕಿಕೊಂಡಳು.

ಆ ಬಾಲಕ ಉಂಗುರವನ್ನು ತೆಗೆದುಕೊಂಡು ಓಡಿದ. ಎರಡು–ಮೂರು ನಿಮಿಷಗಳಲ್ಲೇ ಆ ಪ್ರೇಮಿಗಳ ಮರದ ಮುಂದೆ ಏದುಸಿರು ಬಿಡುತ್ತಾ ಬಂದು ನಿಂತ. ಉಂಗುರವನ್ನು ಪೊಟರೆಯೊಳಗೆ ಹಾಕುವ ಮುನ್ನ

ಒಮ್ಮೆ ಸುತ್ತಲೂ ನೋಡಿದ. ಆಮೇಲೆ ಉಂಗುರವನ್ನು ಪೊಟರೆಯಲ್ಲಿ ಹಾಕಿ, ಮರಯ್ಯಾ ಕಿರಿಲ್ಲೋವ್ನಾಗೆ ಕಾರ್ಯ ಸಿದ್ಧಿಸಿದುದನ್ನು ಬೇಗ ಹೋಗಿ ತಿಳಿಸಬೇಕೆಂದು ಇನ್ನೇನು ಹಿಂದಿರುಗಬೇಕು, ಅಷ್ಟರಲ್ಲೇ, ಹರಕು ಬಟ್ಟೆಯ, ಕೆಂಚುಗೂದಲಿನ, ಮೆಳ್ಳೆಗಣ್ಣಿನ ಪೋರನೊಬ್ಬ ಲತಾಮಂಟಪದ ಹಿಂದಿನಿಂದ ಓಡಿಬಂದು, ಓಕ್‌ಮರದ ಬಳಿಹೋಗಿ, ಪೊಟರೆಯೊಳಗೆ ಕೈಹಾಕಿದುದನ್ನು ಸಾಷಾ ಕಂಡ. ಕೂಡಲೇ ಅಳಲಿನಂತೆ ವೇಗವಾಗಿ ಆ ತುಂಟ ಹುಡುಗನ ಹತ್ತಿರಕ್ಕೆ ಒಂದೇ ನೆಗೆತಹಾರಿ, ಎರಡು ಕೈಗಳಿಂದಲೂ ಅವನನ್ನು ತಬ್ಬಿಕೊಂಡು ಬಂಧಿಸಿದ.

"ಏಯ್, ಏನೋ, ಏನುಮಾಡ್ತಾ ಇದ್ದೀಯೋ ಅಲ್ಲಿ?" ಎಂದು ರೋಷದಿಂದ ಆ ಹುಡುಗನನ್ನು ಪ್ರಶ್ನಿಸಿದ.

"ನಿನಗೇನೋ ಅದನ್ನೆಲ್ಲ ಕಟ್ಟಿಕೊಂಡು?" ಎಂದು ಆ ಹುಡುಗ, ಸಾಷಾನ ಬಿಗಿಹಿಡಿತದಿಂದ ಬಿಡಿಸಿಕೊಳ್ಳಲು ಹೆಣಗಾಡುತ್ತ ಪ್ರತ್ಯುತ್ತರವಿತ್ತ.

"ಏಯ್, ಮೆಳ್ಳೆಗಣ್ಣಿನ ಕೆಂಚುಕೋತಿ, ಆ ಉಂಗುರಾನ ಅಲ್ಲೇ ಹಾಕ್ಬಿಡು. ಇಲ್ಲದಿದ್ದರೆ ಯಾವತ್ತಿಗೂ ಮರೆಯದ ಪಾಠಕಲಿಸ್ತೀನಿ!"

ಇದಕ್ಕೆ ಉತ್ತರವಾಗಿ, ಆ ಪೋಕರಿ ಹುಡುಗ ಸಾಷಾಗೆ ಮುಖದ ಮೇಲೆ ಬಲವಾದ ಒಂದು ಪೆಟ್ಟುಕೊಟ್ಟ. ಆದರೂ ಸಾಷಾ, ಬಿಗಿಹಿಡಿತವನ್ನು ಸಡಿಲಿಸದೆ, "ಕಳ್ಳ! ಕಳ್ಳನನ್ನು ಹಿಡಿಯಬನ್ನಿ! ಸಹಾಯಮಾಡಿ!" ಎಂದು ಗಟ್ಟಿಯಾಗಿ ಕೂಗಿದ.

ಆ ಹುಡುಗ ತಪ್ಪಿಸಿಕೊಂಡು ಹೋಗಲು ಶಕ್ತಿಮೀರಿ ಯತ್ನಿಸಿದ. ಅವನು ಸಾಷಾಗಿಂತ ಎರಡುವರ್ಷ ದೊಡ್ಡವನಾಗಿ, ಹೆಚ್ಚು ಬಲಶಾಲಿಯಾಗಿ ಕಂಡರೂ ಅವನಷ್ಟು ಚಟುವಟಿಕೆಯಿಂದ ಕೂಡಿರಲಿಲ್ಲ. ಇಬ್ಬರೂ ಸ್ವಲ್ಪ ಹೊತ್ತು ಹೆಣಗಾಡಿದ ಮೇಲೆ, ಆ ಕೆಂಗೂದಲಿನ ತುಂಟನ ಕೈ ಮೇಲಾಯಿತು. ಸಾಷಾನನ್ನು ನೆಲಕ್ಕೆ ಕೆಡವಿ, ಕತ್ತು ಅದುಮಿ ಹಿಡಿದು, ಮೇಲೆ ಕುಳಿತ.

ಅಷ್ಟು ಹೊತ್ತಿಗೆ ಸರಿಯಾಗಿ ತೋಟದ ಮಾಲಿ ಸ್ಟೇಪನ್ ಅಲ್ಲಿಗೆ ಬಂದು ತನ್ನ ಬಲಿಷ್ಟ ಬಾಹುವಿನಿಂದ, ಆ ದುಷ್ಟ ಹುಡುಗನ ಕೆಂಪಾದ ಗುಂಗುರು ಕೂದಲನ್ನು ಹಿಡಿದುಕೊಂಡು ಅವನನ್ನು ನೆಲದಿಂದ ಅನೇಕ ಅಡಿಗಳ ಮೇಲಕ್ಕೆ ಅನಾಮತ್ತು ಎತ್ತಿ ಹಿಡಿದು, ಬಯ್ದು ಹೇಳಿದ:

"ಏಯ್, ಕೆಂಚ ಕೂದಲಿನ ಪೋಕರಿ! ನಮ್ಮ ಚಿಕ್ಕ ಯಜಮಾ

ನರ ಮೇಲೆ ಕೈಮಾಡಲು ನಿನಗೆಷ್ಟು ಧೈರ್ಯ?...."

ಆ ಹೊತ್ತಿಗೆ ಸಾಷಾ ಚೇತರಿಸಿಕೊಂಡು ಎದ್ದು ನಿಂತ.

"ನೀನು ನ್ಯಾಯದಿಂದ ಕುಸ್ತಿ ಮಾಡಲಿಲ್ಲ. ಮೋಸಮಾಡಿದೆ. ಇಲ್ಲದಿದ್ದರೆ ನನ್ನನ್ನು ಉರುಳಿಸಲು ನಿನಗೆ ಆಗ್ತಾನೇ ಇರಲಿಲ್ಲ. ಸರಿ. ಎಲ್ಲಿ ಆ ಉಂಗುರ ಕೊಟ್ಟು ಸದ್ದಿಲ್ಲದೆ ಹೊರಡು ಇಲ್ಲಿಂದ!" ಎಂದ ಸಾಷಾ.

"ಅದೆಲ್ಲಾ ಆಗದ ಮಾತು" ಎಂದು ಉತ್ತರಿಸುತ್ತಾ ಒಮ್ಮೆಗೇ ಪಕ್ಕಕ್ಕೆ ಹೊರಳಿ, ಸ್ಟೀಪನ್‌ನ ಮುಷ್ಟಿಯಿಂದ ತನ್ನ ಬಿರುಗೂದಲನ್ನು ಬಿಡಿಸಿ ಕೊಂಡು ಓಡಲುಪಕ್ರಮಿಸಿದ. ಸಾಷಾ ಅವನ ಹಿಂದೆ ಓಡಿಹೋಗಿ, ಅವ ನನ್ನು ಒಂದು ಬಾರಿ ಜೋರಾಗಿ ತಳ್ಳಿ ಬೋರಲಾಗಿ ಬೀಳುವಂತೆ ಮಾಡಿದ. ಮಾಲಿಯೂ ಹಿಂದಿನಿಂದಲೇ ಓಡಿಬಂದು, ಆ ಹುಡುಗನನ್ನು ಮತ್ತೊಮ್ಮೆ ಹಿಡಿದು ತನ್ನ ಸೊಂಟಪಟ್ಟಿಯಿಂದ ಕಟ್ಟಿಹಾಕಿದ.

"ಈಗಲಾದರೂ ಉಂಗುರವನ್ನು ಕೊಟ್ಟುಬಿಡು!" ಸಾಷಾ ಕೇಳಿದ.

"ತಾಳಿ ಯಜಮಾನರೇ ಕೊಂಚ. ಇವನನ್ನು ಪೋಲೀಸರ ಹತ್ತಿರ ಕರಕೊಂಡು ಹೋಗಿ ಛಡಿ ಏಟು ಹೊಡಿಸೋಣ," ಎಂದು ಸ್ಟೀಪನ್, ತನ್ನ ಕೈದಿಯನ್ನು ಮನೆ ಕಡೆಗೆ ದರದರನೆ ಎಳೆದೊಯ್ದ. ಸಾಷಾನೂ, ಜಗಳದಲ್ಲಿ ಹರಿದುಹೋಗಿ, ಹುಲ್ಲಿನ ಹಸಿರು ಬಣ್ಣ ಮೆತ್ತಿಕೊಂಡಿದ್ದ ತನ್ನ ಅಂಗಿ—ಚಲ್ಲಣಗಳನ್ನು ನೋಡಿಕೊಳ್ಳುತ್ತಾ ಅಳುಮೋರೆ ಹಾಕಿಕೊಂಡು, ಅವ ರೊಂದಿಗೆ ಹೊರಟ. ಅದೇ ಹೊತ್ತಿಗೆ ಪೆಟ್ರೋವಿಚ್ ಕುದುರೆಯ ಲಾಯವನ್ನು ಪರಿಶೀಲಿಸಲೆಂದು ಅತ್ತಕಡೆಯೇ ಬಂದು, ಆ ಮೂವರನ್ನೂ ಸಂಧಿಸಿದ.

"ಏನಯ್ಯಾ ಇದು ?" ಎಂದು ಅವನು ಸ್ಟೀಪನ್‌ನನ್ನು ಕೇಳಿದ.

ಸ್ಟೀಪನ್ ಘಟನೆಯ ಪುಟ್ಟ ವಿವರಣೆಯಿತ್ತ. ಕಿರಿಲ್ಲಾ ಪೆಟ್ರೋ ವಿಚ್ ಅವನ ನಿರೂಪಣೆಯನ್ನು ಗಮನವಿಟ್ಟು ಕೇಳಿ, ಸಾಷಾನ ಕಡೆ ತಿರುಗಿ, "ಏನೋ ಪೋಕರಿ, ಈ ಪೋಲೀ ಹುಡುಗನ ಜೊತೆಗೆ ನೀನು ಹೇಗೆ ಗಂಟು ಬಿದ್ದೆಯೋ ?" ಎಂದು ಕೇಳಿದ.

"ಅವನು ಆ ಮರದ ಪೊಟರೆಯಿಂದ ಉಂಗುರವನ್ನು ಕದ್ದು ಬಿಟ್ಟಿ ದ್ದಾನೆ, ಅಪ್ಪ. ಅದನ್ನು ವಾಪಸು ಕೊಡಿಸಪ್ಪ!"

"ಯಾವ ಉಂಗುರ? ಯಾವ ಮರದ ಪೊಟರೆ?"

"ಆ ಉಂಗುರ....ಮರಯ್ಯಾ ಕಿರಿಲ್ಲೋವ್ನಾ.... ಇಲ್ಲ, ಇಲ್ಲ....ಅದೇ ಆ ಉಂಗುರ...."

ಸಾಷಾಗೆ ಏನು ಹೇಳುವುದಕ್ಕೂ ತೋಚದೆ, ಗಲಿಬಿಲಿಯಾಗಿ ಮೂಕನಂತೆ ನಿಂತುಬಿಟ್ಟ. ಕಿರಿಲ್ಲಾ ಪೆಟ್ರೋವಿಷ್ ಮೋರೆ ಸಿಂಡರಿಸಿಕೊಂಡು, ತಲೆ ತೂಗುತ್ತಾ ಹೇಳಿದ:

"ಓಹೋ, ಮರಯ್ಯಾ ಕಿರಿಲ್ಲೋವ್ನಾಳೂ ಸೇರಿದ್ದಾಳೋ ಇದರಲ್ಲಿ! ಈಗ ಎಲ್ಲ ಸಮಾಚಾರವನ್ನೂ ಪೂರ್ತಿಯಾಗಿ ಹೇಳಿದರೆ ಸರಿ. ಇಲ್ಲದಿದ್ದರೆ ಚೆನ್ನಾಗಿ ಹೊಡೆತ ಬಿಗಿದು, ಹೇಳಹೆಸರಿಲ್ಲದ ಹಾಗೆ ಮಾಡಿಬಿಡುತ್ತೇನೆ—ನಿನ್ನ ತಾಯಿಗೂ ಗೊತ್ತಾಗಬಾರದು ಇಂತಹ ಮಗ ಒಬ್ಬ ಇದ್ದ ಅಂತ."

"ಇಲ್ಲ, ಅಪ್ಪ. ಇಲ್ಲ, ಅಪ್ಪ. ನಾನು ಆಣೆಯಿಟ್ಟು ಹೇಳ್ತೀನಿ.... ಮರಯ್ಯಾ ಕಿರಿಲ್ಲೋವ್ನಾ ನನಗೆ ಏನು ಮಾಡೂಂತ್ಲೂ ಹೇಳಲಿಲ್ಲ, ಅಪ್ಪ!"

"ಇರಲಿ, ಇರಲಿ. ಸ್ಟೆಪನ್, ಹೋಗು, ಒಳ್ಳೆ ಮರದ ಒಂದು ರೆಂಬೆಯನ್ನು ಕತ್ತರಿಸಿ ನಯವಾಗಿ ಹೆರೆದು ತಗೊಂಡು ಬಾ—"

"ಅಯ್ಯೋ, ಬೇಡ ಅಪ್ಪ, ಬೇಡ. ತಾಳು, ನಾನು ಎಲ್ಲ ಹೇಳಿಬಿಡ್ತೇನೆ! ನಾನು ಅಂಗಳದಲ್ಲಿ ಆಟವಾಡ್ತಾ ಇದ್ದೆ. ಅಕ್ಕ, ಮರಯ್ಯಾ, ಕಿಟಕಿ ತೆರೆದಳು. ನಾನು ಅದರ ಬಳಿ ಓಡಿಹೋದೆ. ಆಗ ಅವಳ ಉಂಗುರ ಕೆಳಗೆ ಬಿದ್ದು ಹೋಯ್ತು. ನಾನು ಅದನ್ನು ತಗೊಂಡು ಆ ಮರದ ಪೊಟರೆಯಲ್ಲಿ ಬಚ್ಚಿಡ್ತಾ ಇದ್ದೆ....ಮತ್ತೆ....ಮತ್ತೆ....ಆ ಕೆಂಚುಕೂದಲಿನ ಭಡವಾ ಅದನ್ನು ಕದಿಯೋಕೆ ನೋಡಿದ."

"ಓಹೋ, ಉಂಗುರ ಜಾರಿ ಅವಳ ಕೈಯಿಂದ ಕೆಳಗೆ ಬಿದ್ದುಬಿಡ್ತು, ನೀನು ಅದನ್ನು ಬಚ್ಚಿಡ್ತಾ ಇದ್ದೆಯೋ? ಸ್ಟೆಪನ್, ಎಲ್ಲಿ, ಬೆತ್ತ ತಾ."

"ಬೇಡ, ಅಪ್ಪ, ಬೇಡ. ಒಂದು ನಿಮಿಷ ತಾಳು. ಎಲ್ಲ ಹೇಳಿಬಿಡ್ತೀನಿ! ಅಕ್ಕ ಮರಯ್ಯಾ, ಒಂದು ಉಂಗುರ ಕೊಟ್ಟು ಅದನ್ನು ಓಕ್ ಮರದ ಪೊಟರೆಯಲ್ಲಿ ಹಾಕು ಅಂತ ಹೇಳಿದಳು. ನಾನು ಹಾಗೇ ಮಾಡಿದೆ. ಅಷ್ಟರಲ್ಲೇ, ಆ ಕೆಟ್ಟ ಪೋಲಿಯುವ...."

ಕಿರಿಲ್ಲಾ ಪೆಟ್ರೋವಿಷ್ ಆ ತುಂಟ ಹುಡುಗನ ಕಡೆ ತಿರುಗಿ ಗದರಿಸುತ್ತಾ ಕೇಳಿದ: "ಯಾರ ಮನೇ ಹುಡುಗನೋ ನೀನು?"

"ನಾನು ದುಬ್ರೊವ್‌ಸ್ಕಿಯವರ ಮನೆಗೆಲಸದವರಲ್ಲೊಬ್ಬ," ಎಂದ ಆ ಕೆಂಪು ಕೂದಲಿನ ಹುಡುಗ.

ಕಿರಿಲ್ಲಾ ಪೆಟ್ರೋವಿಷ್‌ನ ಮುಖ ಕಪ್ಪಿಟ್ಟಿತು.

"ಹಾಗೋ! ಹಾಗಾದರೆ ನೀನು ನನ್ನನ್ನು ಒಡೆಯ ಅಂತ ಒಪ್ಪಿ

ಕೊಟ್ಕೋದಿಲ್ಲ ಅಂತಾಯಿತು. ಬಹಳ ಒಳ್ಳೆಯದು. ಏನು ಮಾಡುತ್ತಿದ್ದೆ ನೀನು ನನ್ನ ತೋಟದಲ್ಲಿ?"

"ಲಂಟಾನಾ ಹಣ್ಣುಗಳನ್ನು ಕೀಳುತ್ತಿದ್ದೆ" ಎಂದು ಆ ಹುಡುಗ ಸ್ವಲ್ಪವೂ ಅಳುಕದೆ ಉತ್ತರವಿತ್ತ.

"ಆಹಾ. ಯಜಮಾನನಂತೆ ಸೇವಕ! ಅದಕ್ಕೇ ಹೇಳೋದಿಕ್ಕೆ: ಮಂದಿಯನ್ನು ನೋಡಿ ಮಂತ್ರ ಹೇಳೋನ ಲಕ್ಷಣ ಗೊತ್ತು ಮಾಡು ಅಂತ! ಅದು ಸರಿ, ಲಂಟಾನ ಹಣ್ಣುಗಳು ಓಕ್ ಮರದಲ್ಲಿ ಬಿಡುತ್ತವೇನಪ್ಪ, ನನ್ನ ಜಮೀನಿನಲ್ಲಿ?"

"ಉಂಗುರವನ್ನು ಹಿಂದಕ್ಕೆ ಕೊಡುವಂತೆ ಹೇಳಪ್ಪ ಅವನಿಗೆ," ಎಂದು ಗೋಗರೆದ ಸಾಷಾ.

"ಬಾಯಿ ಮುಚ್ಚು ಅಲೆಕ್ಸಾಂಡರ್! ನಿನ್ನನ್ನೂ ವಿಚಾರಿಸಿಕೋತೀನಿ ಅನ್ನೋದನ್ನ ಮರೀಬೇಡ. ಹೋಗು, ನಿನ್ನ ಕೋಣೆಗೆ," ಎಂದು ಸಾಷಾನಿಗೆ ಆಜ್ಞೆಮಾಡಿ, ಪ್ರೋಕರಿ ಹುಡುಗನನ್ನುದ್ದೇಶಿಸಿ ಹೇಳಿದ: "ಮತ್ತೆ ನೀನು, ಮೆಳ್ಳಗಣ್ಣನವನಂತೆ, ನೀನು ಸೂಟಿಯಾದ ಹುಡುಗನಂತೆ ಕಾಣಬರುತ್ತಿ! ಉಂಗುರವನ್ನು ಕೊಟ್ಟುಬಿಡು ಹೊರಡು!"

ಹುಡುಗ ಹಿಡಿ ಬಿಚ್ಚಿ ತೋರಿಸಿದ. ಉಂಗುರ ಮಂಗಮಾಯವಾಗಿತ್ತು.

"ನೋಡು ಹುಡುಗ, ಉಂಗುರ ಯಾಕೆ ತಗೊಂಡೆ, ಎಲ್ಲಿ ಹಾಕಿದೆ ಅಂತ ಎಲ್ಲಾ ಒಪ್ಪಿಸಿದರೆ, ಛಡಿ ಏಟು ತಪ್ಪುತ್ತೆ. ಅಷ್ಟೇ ಅಲ್ಲ, ಇದು ಕೊಪೆಕ್ (ನಾಣ್ಯ)ಗಳನ್ನೂ ಕೊಡ್ತೀನಿ. ಏನಾದರೂ ತಿನಸು ತಗೋಬಹುದು, ಇಲ್ಲದಿದ್ದರೆ ನಿನಗೆ ಸಾಯುವ ತನಕ ನೆನಪಿರೋ ಹಾಗೆ ಶಾಸ್ತಿ ಮಾಡ್ತೀನಿ. ಏನು ಹೇಳ್ತೀಯಾ?"

ಹುಡುಗ ಏನೂ ಹೇಳಲಿಲ್ಲ. ತೀರಾ ಹಳ್ಳಿಗಮಾರನ ಹಾಗೆ ಚಾತುರ್ಯದಿಂದ ನಟಿಸುತ್ತಾ, ತಲೆ ತಗ್ಗಿಸಿಕೊಂಡು ನಿಂತುಬಿಟ್ಟ.

"ಸರಿ, ಹಾಗಾದರೆ. ಇವನನ್ನ ಎಳಕೊಂಡು ಹೋಗಿ, ಕೂಡಿ ಬೀಗ ಹಾಕಿ, ತಪ್ಪಿಸಿಕೊಂಡು ಹೋಗದ ಹಾಗೆ ನೋಡಿಕೊಳ್ಳುವಂತೆ ಹೇಳು. ಇಲ್ಲದಿದ್ದರೆ ಎಲ್ಲರನ್ನೂ ಸಜೀವವಾಗಿಯೇ ಚರ್ಮ ಸುಲಿಸಿಬಿಡುತ್ತೇನೆ," ಎಂದ ಪೆಟ್ರೋವಿಚ್, ಸ್ಟೀಪನ್ನನತ್ತ ತಿರುಗಿ.

ಸ್ಟೀಪನ್, ಹುಡುಗನನ್ನು, ಪಾರಿವಾಳಗಳು ಗೂಡು ಕಟ್ಟಿದ್ದ ಮೇಲುಪ್ಪರಿಗೆಗೆ ಕೊಂಡುಹೋಗಿ, ಅಲ್ಲಿ ಕುಕ್ಕುಟ ಪಕ್ಷಿಗಳ ಪಾಲಕಿ, ವೃದ್ಧೆ, ಅಗಾ

ಫ್ಯಾಳ ಕಾವಲಿನಲ್ಲಿ ಬಿಡಲು, ಎಳೆದುಕೊಂಡು ಹೊರಟ.

ಪೆಟ್ರೋವಿಚ್, ಹುಡುಗನನ್ನೇ ದುರದುರನೆ ನೋಡುತ್ತಾ, ಸ್ಟೇಪನ್‌ಗೆ ಹೇಳಿದ: "ಆದಾದ ಮೇಲೆ ನೇರವಾಗಿ ನಗರಕ್ಕೆ ಹೋಗಿ ಫೌಜುದಾರನನ್ನು ಕರಕೊಂಡು ಬಾ. ಎಷ್ಟು ಬೇಗ ಸಾಧ್ಯವೋ, ಅಷ್ಟು ಬೇಗ."

ಪೆಟ್ರೋವಿಚ್‌ಗೆ ಕೋಪದಿಂದ ಮೈ-ಬಿಸಿಯೇರಿತು. ತನ್ನ ಕೋಣೆಗೆ ಹಿಂದಿರುಗಿ, "ಮೊಳಗಿರಿ ವಿಜಯ ದುಂದುಭಿಗಳೇ!" ಎಂದು ಸಿಳ್ಳು ಹಾಕುತ್ತಾ ಶತಪಥ ತಿರುಗತೊಡಗಿದ. "ಇದರಲ್ಲಿ ಏನೂ ಸಂದೇಹವೇ ಇಲ್ಲ," ಎಂದು ಯೋಚಿಸಿ ಅವುಡುಗಚ್ಚಿದ. "ಆ ನೀಚ ದುಬ್ರೋವ್‌ಸ್ಕಿಯೊಂದಿಗೆ ಇವಳು ಸಂಪರ್ಕ ಇಟ್ಟುಕೊಂಡಿದ್ದಾಳೆ ಅನ್ನೋದೇನೋ ಸ್ಪಷ್ಟವಾಯಿತು. ಆದರೆ, ತನ್ನ ರಕ್ಷಣೆಗೆ ಬರಬೇಕೆಂದು ಇವಳು ಅವನಿಗೆ ನಿಜಕ್ಕೂ ಕರೆ ಇತ್ತಿರಬಹುದೆ? ಏನಾದರೂ ಆಗಲಿ, ಅಂತೂ ಕೊನೆಗೆ ಅವನ ಪತ್ತೆ ಸಿಕ್ಕ ಹಾಗೆ ತೋರ್‍ತಾ ಇದೆ. ಈ ಸಾರಿ ಅವನು ನನ್ನ ಕೈಗೆ ಸಿಕ್ಕಿಬಿದ್ದರೆ, ಬಚಾವಾಗಿ ಹೋಗಲಾರ! ಈಗ ಒದಗಿರೋ ಪ್ರಸಂಗವನ್ನೇ ಚೆನ್ನಾಗಿ ಉಪಯೋಗಿಸಿಕೊಂಡು ಅವನನ್ನು ಹಿಡಿದುಹಾಕಿಬಿಡಬೇಕು....ಆಹ್ಹಾ! ಕಡಿವಾಣದ ಗಂಟೆಗಳ ಶಬ್ದ! ದೇವರ ದಯದಿಂದ ಫೌಜುದಾರ ಬಂದೇಬಿಟ್ಟ! ಏಯ್, ಯಾರಲ್ಲಿ? ನಾವು ಈಗ ಹಿಡಿದೆವಲ್ಲ, ಆ ಹುಡುಗನನ್ನು ಇಲ್ಲಿಗೆ ಕರಕೊಂಡು ಬಾ!"

ಗಾಡಿಯೊಂದು ಅಂಗಳಕ್ಕೆ ಬಂತು. ನಮ್ಮ ಗೆಳೆಯ ಫೌಜುದಾರ ಕೋಣೆಯೊಳಕ್ಕೆ ಬಂದ. ಅವನ ಮೈ-ಕೈಯೆಲ್ಲ ಧೂಳಿನಿಂದ ತುಂಬಿತ್ತು.

"ಅದ್ಭುತ ಸಮಾಚಾರ!" ಕಿರಿಲಾ ಪೆಟ್ರೋವಿಚ್ ಕೂಗಿ ಹೇಳಿದ. "ದುಬ್ರೋವ್‌ಸ್ಕಿಯನ್ನು ಹಿಡಿದುಹಾಕಿಬಿಟ್ಟಿದ್ದೇನೆ."

"ಹೌದೆ, ಮಹಾಪ್ರಭು! ದೇವರಿಗೆ ಅನಂತ ನಮಸ್ಕಾರಗಳು!" ಎಂದ ಫೌಜುದಾರ, ಮುಖವನ್ನು ಊರಗಲ ಹಿಗ್ಗಿಸಿಕೊಂಡು. "ಎಲ್ಲಿ, ಎಲ್ಲಿದ್ದಾನೆ, ಅವನು?"

"ದುಬ್ರೋವ್‌ಸ್ಕಿಯನ್ನಲ್ಲದಿದ್ದರೂ, ಅವನ ಕಡೆಯವನೊಬ್ಬನನ್ನು ಹಿಡಿದುಹಾಕಿದ್ದೇನೆ. ಇನ್ನೊಂದು ನಿಮಿಷದಲ್ಲಿ ಅವನನ್ನು ಇಲ್ಲಿಗೇ ಕರೆದು ತರುತ್ತಾರೆ. ತನ್ನ ದಳನಾಯಕನನ್ನು ಹಿಡಿಯಲು ಅವನೇ ಸಹಾಯ ಮಾಡ್ತಾನೆ. ಇಗೋ ಬಂದೇ ಬಂದ!"

ಯಾರೋ ಒಬ್ಬ ಭಯಂಕರ ದರೋಡೆಕೋರನನ್ನು ನೋಡಬಹು

ದೆಂದು ನಿರೀಕ್ಷಿಸಿದ್ದ ಫೌಜುದಾರ, ತನ್ನ ಮುಂದೆ ಹದಿಮೂರು ವಯಸ್ಸಿನ ರೋಗಗ್ರಸ್ತನಂತೆ ಕಾಣುತ್ತಿದ್ದ ಹುಡುಗನೊಬ್ಬ ನಿಂತುದನ್ನು ಕಂಡು ಆಶ್ಚರ್ಯಚಕಿತನಾದ. ಪ್ರಶ್ನಾರ್ಥಕ ದೃಷ್ಟಿಯಿಂದ ಪೆಟ್ರೋವಿಚ್‌ನ ಕಡೆಗೆ ನೋಡಿದ. ಪೆಟ್ರೋವಿಚ್, ಬೆಳಗ್ಗೆ ಜರುಗಿದ ಘಟನೆಯನ್ನು ಉತ್ಸಾಹದಿಂದ ವಿವರಿಸಿದ. ಮರಿಯ್ಯ ಕಿರಿಲ್ಲೋವ್ನಾಳ ಹೆಸರನ್ನು ಮಾತ್ರ ಎಲ್ಲೂ ತರಲಿಲ್ಲ.

ಫೌಜುದಾರ ಮೈಬಿಲ್ಲ ಕಿವಿಯಾಗಿಸಿಕೊಂಡು, ಆಗಾಗ್ಗೆ ಆ ತುಂಟ ಹುಡುಗನತ್ತ ನೋಡುತ್ತಾ, ಕಥೆಯನ್ನು ಕೇಳಿದ. ಆ ಹುಡುಗ ಮಾತ್ರ ತನ್ನ ಸುತ್ತಮುತ್ತ ಏನಾಗುತ್ತಿದೆ ಎಂಬುದರ ಪರಿವೆಯೇ ಇಲ್ಲದವನಂತೆ, ಮೊದಲಿನಂತೆಯೇ, ಶುದ್ಧ ಹಳ್ಳಿಯ ಮೂಳನಂತೆ ನಟಿಸುತ್ತಾ ಇದ್ದ.

"ನಿಮ್ಮೊಂದಿಗೆ ಖಾಸಗಿಯಾಗಿ ಮಾತನಾಡಬೇಕಾಗಿದೆ, ಖಾವಂದರೆ. ದಯವಿಟ್ಟು ಇತ್ತ ದಯಮಾಡಿಸುವಿರಾ?" ಎಂದ, ಕಥೆ ಕೇಳಿದ ಫೌಜುದಾರ.

ಪೆಟ್ರೋವಿಚ್ ಅವನನ್ನು ಪಕ್ಕದ ಕೋಣೆಯೊಳಕ್ಕೆ ಕರೆದುಕೊಂಡು ಹೋಗಿ, ಚಿಲಕ ಹಾಕಿಕೊಂಡ. ಅರ್ಧಗಂಟೆಯ ಅನಂತರ ಇಬ್ಬರೂ ಕೊಠಡಿಯಿಂದ ಹೊರಬಿದ್ದು, ಹುಡುಗ–ಕೈದಿ ತನ್ನ ಅದೃಷ್ಟ–ತೀರ್ಪಿಗಾಗಿ ಕಾದು ನಿಂತಿದ್ದ ಕೋಣೆಗೆ ಬಂದರು.

"ಏಯ್, ಮೂರ್ಖ ಹುಡುಗ, ನಮ್ಮ ಮಹಾಪ್ರಭುಗಳು ನಿನ್ನನ್ನು ನಗರದ ಬಂದೀಖಾನೆಗೆ ಕಳುಹಿಸಿ, ಛಡಿ ಏಟು ಹೊಡಿಸಿ, ಆಮೇಲೆ ಮನೆಯಿಂದ ಹೊರದೂಡುವಂತೆ ಮಾಡಬೇಕೆಂದು ಇಷ್ಟಪಟ್ಟಿದ್ದರು. ಆದರೆ, ನಾನೇ ನಿನ್ನ ಪರವಾಗಿ ಅವರನ್ನು ಪ್ರಾರ್ಥಿಸಿ, ನಿನಗೆ ಕ್ಷಮೆ ದೊರಕಿಸಿ ಕೊಟ್ಟಿದ್ದೇನೆ," ಎಂದು ಫೌಜುದಾರ ಆ ಹುಡುಗನಿಗೆ ಹೇಳಿ, ಸೇವಕರ ಕಡೆ ತಿರುಗಿ, "ಎಲ್ಲಿ, ಹಗ್ಗವನ್ನು ಬಿಚ್ಚಿ ಅವನನ್ನು ಬಿಟ್ಟುಬಿಡಿ" ಎಂದ.

ಅಂತೆಯೇ ಹುಡುಗನ ಬಂಧವಿಮೋಚನೆಯಾಯಿತು.

"ಮಹಾಪ್ರಭುಗೆ ಗೌರವಸಲ್ಲಿಸು!" ಎಂದು ಆಜ್ಞಾಪಿಸಿದ ಫೌಜುದಾರ.

ಹುಡುಗ ಕಿರಿಲ್ಲಾ ಪೆಟ್ರೋವಿಚ್‌ನ ಬಳಿಹೋಗಿ, ಆತನ ಹಸ್ತವನ್ನು ಗೌರವಪೂರ್ವಕವಾಗಿ ಚುಂಬಿಸಿದ.

"ಇನ್ನು ನೀನು ಮನೆಗೆ ಹೋಗಬಹುದು. ಇನ್ನುಮೇಲೆ 'ಓಕ್' ಮರದ ಪೊಟರೆಗಳಿಂದ 'ಲಂಟಾನಾ' ಹಣ್ಣುಗಳನ್ನು ಕದಿಯಬೇಡ" ಎಂದು ಪೆಟ್ರೋವಿಚ್ ಹುಡುಗನಿಗೆ ಹೇಳಿದ.

ಹುಡುಗ ಸಂತೋಷದಿಂದ ಕುಣಿದಾಡುತ್ತಾ ಅಂಗಳ ದಾಟಿ, ಒಂದು ಬಾರಿಯೂ ಹಿಂದಿರುಗಿ ನೋಡದೆ ಹೊಲಗಳ ಮೂಲಕ ಓಡಿಹೋದ. ಹಳ್ಳಿ ಸೇರಿ, ಬೀದಿಯ ಕೊನೆಯಲ್ಲಿದ್ದ, ನಶಿಸಿಹೋಗಿದ್ದ ಒಂದು ಗುಡಿಸಲಿನ ಮುಂದೆ ನಿಂತು, ಕಿಟಕಿಯ ಚೌಕಟ್ಟನ್ನು ಬಡಿದು ಶಬ್ದ ಮಾಡಿದ. ಕಿಟಕಿ ತೆರೆದು, ವೃದ್ಧೆಯೊಬ್ಬಳು ಕಾಣಿಸಿಕೊಂಡಳು.

"ರೊಟ್ಟಿ ಕೊಡು ಅಜ್ಜಿ. ಇವತ್ತು, ಬೆಳಗಿನಿಂದ ನಾನು ಏನೂ ತಿಂದಿಲ್ಲ. ಹಸಿವಿನಿಂದ ಸಾಯ್ತಾ ಇದ್ದೀನಿ," ಎಂದ ಹುಡುಗ.

"ಓ, ನೀನೇ, ಮೈತ್ಯಾ! ಎಲ್ಲಿ ಹೋಗಿದ್ಯೋ ಇಷ್ಟು ಹೊತ್ತಿನ ತನಕ, ತುಂಟ ಹುಡುಗ?" ಎಂದಳು ಆ ಮುದುಕಿ.

"ಅದನ್ನೆಲ್ಲಾ ನಾನು ಆಮೇಲೆ ಹೇಳ್ತೀನಿ, ಅಜ್ಜಿ.—ನಿನಗೆ ಪುಣ್ಯ ಪಡೆಯಬೇಕೂಂತ ಇಷ್ಟವಿದ್ದರೆ, ಮೊದಲು ನನಗೆ ರೊಟ್ಟಿ ಕೊಡು."

"ಹಾಗಾದರೆ ಒಳಗೆ ಬಾ."

"ನನಗೆ ಸಮಯವಿಲ್ಲ ಅಜ್ಜಿ. ನಾನು ಇನ್ನೂ ಎಲ್ಲೋ ಹೋಗಬೇಕು. ರೊಟ್ಟಿ ಕೊಡು. ಯೇಸುಸ್ವಾಮಿ ನಿನಗೆ ಒಳ್ಳೇದು ಮಾಡ್ತಾನೆ—ನನಗೆ ಬೇಗ ರೊಟ್ಟಿ ಕೊಡು."

"ಏನು ತರಲೆ ಹುಡುಗನಪ್ಪ, ನೀನು" ಎಂದು ಗೊಣಗುಟ್ಟಿದಳು ಅಜ್ಜಿ. "ಹುಂ. ತಗೋ, ಈ ರೊಟ್ಟಿಯ ಚೂರನ್ನು," ಎಂದು ಒಂದು ಸೀಕಲು ರೊಟ್ಟಿ ಚೂರನ್ನು ಕಿಟಕಿಯ ಮೂಲಕ ಹೊರಗೆ ಹಿಡಿದಳು.

ಹುಡುಗ ಗಬಕ್ಕನೆ ಅದನ್ನು ಕಸಿದುಕೊಂಡು, ಚೂರುಚೂರಾಗಿ ಕಚ್ಚಿ ಅಗಿಯುತ್ತಾ ಮುಂದೆ ಹೊರಟ.

ಮಬ್ಬು ಕವಿಯಲು ಪ್ರಾರಂಭಿಸಿತ್ತು. ಹಗೇವು, ತರಕಾರಿ ತೋಟ ದಾಟಿಕೊಂಡು, ಮೈತ್ಯ, ಮರಗಳ ತೋಪಿನತ್ತ ಹೊರಟ. ಆ ತೋಪಿನ ಆರಂಭದಲ್ಲಿ, ಕಾವಲಿರುವಂತೆ ಉದ್ದವಾಗಿ ಬೆಳೆದು ನಿಂತಿದ್ದ, ಎರಡು ಬರ್ಚ್ ಮರಗಳ ಬಳಿ ಬಂದಾಗ, ಹುಡುಗ, ಸುತ್ತಲೂ ನೋಡಿ, ಸಣ್ಣ ಕೀರಲು ಧ್ವನಿಯಲ್ಲಿ ಸಿಳ್ಳುಹಾಕಿ, ಕಿವಿಯಾಲಿಸಿ ನಿಂತ. ಪ್ರತ್ಯುತ್ತರವಾಗಿ, ಮೆಲುವಾದ, ದೀರ್ಘ ಸಿಳ್ಳು ಕೇಳಿ ಬಂತು. ತೋಪಿನಿಂದ ಯಾವುದೋ ವ್ಯಕ್ತಿ ಹೊರಬಂದು ಹುಡುಗನ ಜೊತೆ ಸೇರಿಕೊಂಡಿತು.

## ೧೦

ಕಿರಿಲ್ಲಾ ಪೆಟ್ರೋವಿಷ್ ತನ್ನ ಮೆಚ್ಚಿನ ರಾಗವನ್ನು ಎಂದಿಗಿಂತ ಗಟ್ಟಿಯಾಗಿ ಸಿಳ್ಳುಹಾಕಿ ಹಾಡುತ್ತಾ ಹಜಾರದಲ್ಲಿ ಅತ್ತಿಂದಿತ್ತ ತಿರುಗುತ್ತಿದ್ದ. ಮನೆಯೆಲ್ಲ ಸಂಭ್ರಮ–ಸಡಗರಗಳಿಂದ ತುಂಬಿತ್ತು. ಸೇವಕರು ಅಲ್ಲಿಂದಿಲ್ಲಿಗೆ ಆತುರಾತುರವಾಗಿ ಹೋಗಿ ಬರುತ್ತಿದ್ದರು. ಸೇವಕಿಯರು ಗುಜುಗುಜು ಮಾತಾಡಿಕೊಳ್ಳುತ್ತಾ ಕಾರ್ಯಾಸಕ್ತರಾಗಿದ್ದರು. ಗಾಡಿಖಾನೆಯಲ್ಲಿ ಸಾರಥಿಗಳು ಕುದುರೆಗಳನ್ನು ಸಾರೋಟಿಗೆ ಕಟ್ಟಲು ಸಿದ್ಧಪಡಿಸುತ್ತಿದ್ದರು. ಅಂಗಳದ ತುಂಬ ಹೆಂಗಸರು–ಮಕ್ಕಳಾದಿಯಾಗಿ ಜನ ನೆರೆದಿದ್ದರು. ಮನೆಯೊಳಗೆ, ಅಂತಃಪುರದಲ್ಲಿ ಹೆಂಗಸೊಬ್ಬಳು ಕನ್ನಡಿಯ ಮುಂದೆ ನಿಂತಿದ್ದಳು. ಸುತ್ತ ದಾದಿಯರು ಮುತ್ತಿಕೊಂಡು ಆಕೆಯನ್ನು ಸಿಂಗರಿಸುತ್ತಿದ್ದರು. ಆಕೆಯೇ ಮದವಣಗಿತ್ತಿ ಮರಯ್ಯಾ ಕಿರಿಲ್ಲೋವ್ನಾ. ಬಾಡಿ ಬಸವಳಿದ ಮುಖದಿಂದ, ಯಾವುದರಲ್ಲೂ ಆಸಕ್ತಿ ಇಲ್ಲದವಳಂತೆ ಅಲುಗಾಡದೆ ನಿಂತಿದ್ದಳು. ದಾದಿಯರು ಹೊಸ ಹೊಸ ದುಕೂಲಗಳನ್ನು ತೊಡಿಸಿ, ಒಡವೆಗಳಿಂದ ಅಲಂಕರಿಸುತ್ತಿದ್ದರು. ವಜ್ರ–ವೈಢೂರ್ಯಗಳ ಭಾರವನ್ನು ತಡೆಯಲಾರಳೋ ಎಂಬಂತೆ ಆಕೆ ಮ್ಲಾನವದನಳಾಗಿ ತಲೆ ತಗ್ಗಿಸಿಕೊಂಡು ನಿಂತಿದ್ದಳು. ಒಡವೆ ತೊಡಿಸುವಾಗ ಸೇವಕಿಯ ಅಜಾಗರೂಕತೆಯಿಂದಾಗಿ ಪಿನ್ನಿನ ತುದಿ ಚುಚ್ಚಿದಾಗಲೂ, ನೋವಿನಿಂದ ಬೆಚ್ಚಿಬಿದ್ದಂತೆ ಮೈ ಪುಲಕಗೊಳಿಸುತ್ತಿದ್ದಳೇ ವಿನಾ, ಏನೊಂದೂ ಮಾತನಾಡದೆ, ಕನ್ನಡಿಯತ್ತ ಮೂಕ ನೋಟ ನೋಡುತ್ತಾ ನಿಂತು ಬಿಟ್ಟಿದ್ದಳು.

"ಇನ್ನೂ ಮುಗೀಲಿಲ್ಲವೇ? ಬೇಗ ಬೇಗ ಮಾಡಿ," ಎಂದು ಕಿರಿಲ್ಲಾ ಪೆಟ್ರೋವಿಷ್, ಕೋಣೆಯ ಹೊರಗೆ ಬಾಗಿಲ ಬಳಿ ನಿಂತು ಕೇಳಿದ.

"ಆಯಿತು, ಆಯಿತು! ಇನ್ನು ಒಂದೇ ಒಂದು ನಿಮಿಷ," ಎಂದು ಯಜಮಾನಿ–ದಾದಿ ಉತ್ತರಿಸಿದಳು. "ಮರಯ್ಯಾ ಕಿರಿಲ್ಲೋವ್ನಾ, ಏನನ್ನು ಎಲ್ಲ ಮುಗೀತು. ಕನ್ನಡಿಯಲ್ಲಿ ನೋಡಿಕೋ, ಎಲ್ಲ ತೃಪ್ತಿಕರವಾಗಿದೆಯೇನಮ್ಮ?"

ಮರಯ್ಯಾ ಕಿರಿಲ್ಲೋವ್ನಾ, ಒಂದು ಮಾತೂ ಆಡದೆ ಹೊರಡಲಣಿಯಾದಳು. ಕೋಣೆಯ ಬಾಗಿಲು ತೆರೆಯಲ್ಪಟ್ಟಿತು.

"ಮದುವಣಗಿತ್ತಿ ಸಿದ್ಧವಾಗಿದ್ದಾಳೆ. ಇನ್ನು ಎಲ್ಲರೂ ಗಾಡಿ ಹತ್ತಬಹುದು," ಎಂದು ಯಜಮಾನ–ಸ್ತ್ರೀ ಪ್ರಕಟಿಸಿದಳು.

"ದೈವೇಚ್ಛೆ ಇದ್ದಂತಾಗುತ್ತೆ," ಎನ್ನುತ್ತಾ ಕಿರಿಲ್ಲಾ ಪೆಟ್ರೋವಿಷ್ ಮೇಜಿನ ಮೇಲಿದ್ದ ದೇವರ ವಿಗ್ರಹವನ್ನು ಕೈಗೆ ತೆಗೆದುಕೊಂಡು, "ಇಲ್ಲಿ ಬಾಮ್ಮಾ ಮಾಷಾ. ಆಶೀರ್ವಾದ ಮಾಡುತ್ತೇನೆ...." ಎಂದು ಅಂತಃಕರಣ ಕಲಕುವಂತೆ ಸ್ವರಕಂಪನ ಮಾಡುತ್ತಾ ಆಕೆಯನ್ನು ಸಮೀಪಕ್ಕೆ ಕರೆದ.

ಆ ದುರ್ದೈವಿ ಯುವತಿ ಆತನ ಪಾದಗಳ ಮೇಲೆ ಬಿದ್ದು, ಬಿಕ್ಕುತ್ತಾ, ಮನಕರಗುವಂತೆ ರೋದಿಸತೊಡಗಿದಳು.

"ಅಪ್ಪಾ....ಅಪ್ಪಾ...." ಶಕ್ತಿ ಉಡುಗಿಹೋಯಿತು. ಮಾತೇ ಹೊರಡದಾಯಿತು. ಅಶ್ರುಪ್ರವಾಹ ಒಂದೇ ಸಮನೆ ಹರಿಯಿತು.

ಕಿರಿಲ್ಲಾ ಪೆಟ್ರೋವಿಷ್, ಆಶೀರ್ವಾದ ಮಾಡುವ ಸಾಂಪ್ರದಾಯಿಕ ಕಾರ್ಯವನ್ನು ತ್ವರೆಯಿಂದ ಮಾಡಿ ಮುಗಿಸಿದ. ಆತನ ಪಾದಗಳ ಮೇಲೆ ಕುಸಿದು ಬಿದ್ದಿದ್ದ ಮಾಷಾಳನ್ನು ಎತ್ತಿಕೊಂಡು ಹೋಗಿ ಗಾಡಿಯೊಳಗೆ ಕೂರಿಸಬೇಕಾಯಿತು. ಮದುವೆಮಾಡಿಕೊಡುವ ಪ್ರೌಢಸ್ತ್ರೀಯೊಬ್ಬಳು ಮತ್ತು ದಾದಿಯೊಬ್ಬಳು ಆಕೆಯ ಇಕ್ಕೆಲಗಳಲ್ಲಿ ಕುಳಿತು ಕೂಡಲೇ ಚರ್ಚಿಗೆ ಹೊರಟರು. ಅಲ್ಲಿ ಆಗಲೇ ಮದುಮಗ ಅವರಿಗಾಗಿ ಕಾದು ನಿಂತಿದ್ದ. ಇವರು ಬಂದುದನ್ನು ಕಂಡು ಆತ ಮದುಮಗಳನ್ನು ಸ್ವಾಗತಿಸಲು ಮುಂದೆ ಬಂದ. ಆಕೆಯ ನಿರ್ಜೀವ ನೋಟ ಮತ್ತು ವಿಕಾರ ಮುಖಭಾವವನ್ನು ಕಂಡು ಆತ ಸ್ತಂಭೀಭೂತನಾದ. ಇಬ್ಬರೂ ಒಟ್ಟಿಗೆ, ಜನರೇ ಇಲ್ಲದೆ ಹಾಳು ಸುರಿಯುತ್ತಿದ್ದ ಚರ್ಚಿನೊಳಕ್ಕೆ ಹೋದರು. ಹಿಂದಿನಿಂದ ಬಾಗಿಲು ಹಾಕಲಾಯಿತು. ವೇದಿಕೆಯ ಹಿಂಬದಿಯಿಂದ ಪಾದ್ರಿ ಹೊರಬಂದು, ಕೂಡಲೇ ವಿಧ್ಯುಕ್ತವಾಗಿ ವಿವಾಹ ಕಾರ್ಯವನ್ನು ಪ್ರಾರಂಭಿಸಿದ. ಮರಯ್ಯಾ ಕಿರಿಲ್ಲೋವ್ನಾ ಏನೊಂದನ್ನೂ ನೋಡಲಿಲ್ಲ. ಏನೊಂದನ್ನೂ ಕೇಳಿಸಿಕೊಳ್ಳಲಿಲ್ಲ. ಆಕೆಯ ಮನಸ್ಸೆಲ್ಲಾ ಒಂದೇ ಒಂದು ವಿಷಯದ ಕಡೆಗೆ ಕೇಂದ್ರೀಕೃತವಾಗಿದ್ದಿತು. ಅಂದು ಬೆಳಗಿನಿಂದಲೂ ದುಬ್ರೋವ್‌ಸ್ಕಿಯ ಆಗಮನವನ್ನೇ ಆಕೆ ಬಹು ಕಾತರದಿಂದ ನಿರೀಕ್ಷಿಸುತ್ತಾ ಕಾದು ಕುಳಿತಿದ್ದಳು. ಆತ ಬಂದೇ ಬರುವನೆಂಬ ಆತ್ಮವಿಶ್ವಾಸ ಆಕೆಯಿಂದ ಒಂದು ಘಳಿಗೆಯೂ ಮಾಯವಾಗಿರಲಿಲ್ಲ. ಆದರೆ ಈಗ....ಪಾದ್ರಿ, ಪದ್ಧತಿಯ ಪ್ರಕಾರ ಪ್ರಶ್ನೆಗಳನ್ನು ಹಾಕತೊಡಗಿದಾಗ, ಉತ್ತರ ಹೇಳಲೇಬೇಕು, ಒಪ್ಪಿಗೆಯೀಯಲೇಬೇಕು. ಆಕೆ

ಥರಥರನೆ ನಡುಗಿದಳು. ಹೀಗಿದ್ದರೂ ಧೈರ್ಯ ತಂದುಕೊಂಡಳು. ಮತ್ತೂ ಆಸೆ ಇಟ್ಟುಕೊಂಡೇ ಇದ್ದಳು. ಬೇಕೆಂದೇ ಉತ್ತರ ತಡ ಮಾಡಿದಳು. ಆದರೆ ಪಾದ್ರಿ ಅವಳ ಉತ್ತರಕ್ಕಾಗಿ ಕಾಯಲಿಲ್ಲ. ಶಾಸ್ತ್ರೋಕ್ತವಾಗಿ ಮಂತ್ರೋಚ್ಚಾರಣೆ ಮಾಡಿಯೇ ಬಿಟ್ಟ.

ಮದುವೆಯ ಶಾಸ್ತ್ರವೆಲ್ಲಾ ಮುಗಿಯಿತು. ಅನುರಾಗವೇನೂ ಇರದ ಪತಿಯ, ಕಾವಿಲ್ಲದ ಚುಂಬನವನ್ನು ಮರಯ್ಯಾ ಕಿರಿಲ್ಲೋವ್ನಾ ನಿರುತ್ಸಾಹದಿಂದ ಸ್ವೀಕರಿಸಿದಳು. ಸುತ್ತುಗಟ್ಟಿ ನಿಂತಿದ್ದ ಜನ ತನ್ನನ್ನು ಅಭಿನಂದಿಸುತ್ತಿದ್ದುದನ್ನು ಕೇಳಿದಳು. ಆದರೂ ಆಕೆಗೆ ನಂಬಿಕೆಯೇ ಇಲ್ಲ—ತಾನು ಆಜೀವಪರ್ಯಂತ ಈ ಬಂಧನಕ್ಕೆ ಸಿಕ್ಕಿಬಿದ್ದಂತಾಗಿ ಹೋಯಿತೆ? ದುಬ್ರೋವ್‌ಸ್ಕಿ ನಿಜಕ್ಕೂ ತನ್ನ ರಕ್ಷಣೆಗೆ ಬಾರದೆ ಹೋದನೆ? ರಾಜಕುಮಾರ ಪ್ರೀತಿಯಿಂದ ಆಕೆಯನ್ನು ಮಾತನಾಡಿಸಿದ. ಆದರೆ ಅವನು ಏನು ಹೇಳುತ್ತಿದ್ದನೆಂಬುದೇ ಅತಿ ಸಂತಪ್ತಳಾದ ಆಕೆಗೆ ತಿಳಿಯಲಿಲ್ಲ. ಇಬ್ಬರೂ ಚರ್ಚಿನಿಂದ ಹೊರಬಂದರು. ಅಲ್ಲಿ, ಪ್ರಾಂಗಣದ ಬಳಿ, ಪೊಕ್ರೋವ್‌ಸ್ಕಾಯಿ ಹಳ್ಳಿಯ ರೈತರು ಗುಂಪು ಗುಂಪಾಗಿ ನಿಂತಿದ್ದರು. ಅವರ ಮಧ್ಯೆ ಏನಾದರೂ ದುಬ್ರೋವ್‌ಸ್ಕಿ ಇರಬಹುದೆ?—ಆಕೆಯ ಕಣ್ಣುಗಳು ಭಯ, ಉದ್ವೇಗಗಳಿಂದ ಗುಂಪಿನತ್ತ ಹೊರಳಿ, ಹುಡುಕಾಡಿದುವು; ಮರು ನಿಮಿಷವೇ ಆಶಾಭಂಗವಾಗಿ ಪುನಃ ಮೊದಲಿನಂತೆಯೇ ಅರ್ಥಶೂನ್ಯವಾದುವು.

ನವದಂಪತಿಗಳು ಗಾಡಿಯೊಳಗೆ ತಮ್ಮ ಸ್ಥಾನಗಳನ್ನಲಂಕರಿಸಿದರು. ದಂಪತಿಗಳಿಗೆ ಸ್ವಾಗತ ನೀಡುವ ಏರ್ಪಾಟುಮಾಡಲು, ಕಿರಿಲ್ಲಾ ಪೆಟ್ರೋವಿಚ್ ಮುಂಚಿತವಾಗಿಯೇ ಹೋಗಿದ್ದ. ಅರ್ಬಟೋವ್ಗೋ ಜಮೀನ್ದಾರಿಯ ಕಡೆಗೆ ಗಾಡಿ ನಡೆಯಿತು. ಸುಂದರ, ತರುಣ ಪತ್ನಿಯ ಏಕಾಂತ ದೊರೆತದ್ದು ರಾಜಕುಮಾರನಿಗೆ ಸ್ವರ್ಗ ಸಿಕ್ಕಂತಾಯಿತು. ಆಕೆಯ ಉತ್ಸಾಹರಹಿತ ವರ್ತನೆ ಅವನ ಸಂತೋಷವನ್ನೇನೂ ಕಡಿಮೆ ಮಾಡಲಿಲ್ಲ. ಆದರೂ, ಅವನು ಆಕೆಯನ್ನು ಪೀಡಿಸಲಿಚ್ಛಿಸಲಿಲ್ಲ. ಅತಿ ಸಂತೋಷದ ಉನ್ಮಾದದಲ್ಲಿದ್ದಾಗ, ನಲ್ಲನೊಬ್ಬ ಸಾಧಾರಣವಾಗಿ ಮಾಡುವ ಪ್ರಣಯ ಚೇಷ್ಟೆಗಳಿಂದಾಗಲೀ ಅಥವಾ ಕಾಮೋದ್ರೇಕಿತ ಮಧುರೋಕ್ತಿಗಳಿಂದಾಗಲೀ, ಅವನು ಆಕೆಯನ್ನು ಹೆಣಗಿಸಲಿಲ್ಲ. ಕೃತ್ರಿಮವಿಲ್ಲದ ಪ್ರೇಮ ಪೂರಿತ ಮಾತುಗಳನ್ನೇನೋ ಆಡಿದ. ಆದರೆ ಅವಕ್ಕೆ ಆಕೆ ಉತ್ತರ ಕೊಡಲೇ ಬೇಕೆಂದೇನೂ ಆಗ್ರಹಿಸಲಿಲ್ಲ.

ಹೀಗೇ ಸುಮಾರು ಐದು ಮೈಲಿ ಪ್ರಯಾಣ ಮಾಡಿದರು. ಕುದುರೆಗಳು ಬಂಡಿಯನ್ನು ಹಕ್ಕತಿಟ್ಟುಗಳಿಂದ ತುಂಬಿದ್ದ ಹಳ್ಳಿಗಾಡಿನ ದಾರಿಯಲ್ಲಿ ವೇಗವಾಗಿ ಕೊಂಡೊಯ್ಯುತ್ತಿದ್ದುವು. ಗಾಡಿಗೆ ಇಂಗ್ಲೀಷ್ ಸ್ಪ್ರಿಂಗ್‌ಗಳನ್ನು ಹಾಕಿದ್ದುದರಿಂದ ಕುಲುಕಾಟ ಅಷ್ಟಿರಲಿಲ್ಲ. ಕೂಡಲೇ ಎಲ್ಲಿಂದಲೋ ಖುರಪುಟಧ್ವನಿ ಕೇಳಿಬಂದು ಹಿಂದಿನಿಂದ ಯಾರೋ ಅಟ್ಟಿಸಿಕೊಂಡು ಬರುತ್ತಿರುವರೆಂಬ ಕೂಗಾಟಕ್ಕಾರಂಭವಾಯಿತು. ಗಾಡಿ ನಿಂತಿತು. ಶಸ್ತ್ರಧಾರಿ ತಂಡವೊಂದು ಗಾಡಿಯನ್ನು ಸುತ್ತುವರೆಯಿತು. ಮುಖವಾಡ ಧರಿಸಿದ್ದ ಮನುಷ್ಯನೊಬ್ಬ ನೂತನ ರಾಜಕುಮಾರಿ ಕುಳಿತಿದ್ದ ಕಡೆಯ ಬಾಗಿಲನ್ನು ತೆರೆದು ಹೇಳಿದ: "ನೀವು ಈಗ ಸ್ವತಂತ್ರರು. ದಯಮಾಡಿ ಬನ್ನಿ."

"ಏನಿದು? ಯಾರು ನೀನು?" ರಾಜಕುಮಾರ ಕೋಪಾವಿಷ್ಟನಾಗಿ ಕೇಳಿದ.

"ಅವರು ದುಬ್ರೋವ್‌ಸ್ಕಿ" ಎಂದು ರಾಜಕುಮಾರಿ ಉಚ್ಚರಿಸಿದಳು.

ರಾಜಕುಮಾರ ಧೃತಿಗೆಡದೆ ಅಂಗಿಯ ಪಕ್ಕದ ಜೇಬಿನಿಂದ ಕೈಪಿಸ್ತೂಲೊಂದನ್ನು ಹೊರತೆಗೆದು, ಮುಖವಾಡ ಧರಿಸಿದ್ದ ದರೋಡೆಕೋರನತ್ತ ಗುಂಡು ಹಾರಿಸಿದ. ರಾಜಕುಮಾರಿ, ಭೀತಿಯಿಂದ ಮುಖವನ್ನು ಬೊಗಸೆಯಲ್ಲಿ ಹುದುಗಿಸಿಕೊಂಡು, ಚೀಟಾರನೆ ಕಿರಿಚಿದಳು. ದುಬ್ರೋವ್‌ಸ್ಕಿಯ ಭುಜಕ್ಕೆ ಗುಂಡು ತಾಕಿ ಗಾಯವಾಗಿ ರಕ್ತ ಸೋರತೊಡಗಿತು. ರಾಜಕುಮಾರ ಪುನಃ ಗುಂಡು ಹಾರಿಸಲು ಒಂದು ಕ್ಷಣವೂ ತಡಮಾಡದೆ ಇನ್ನೊಂದು ಪಿಸ್ತೂಲನ್ನು ಹೊರತೆಗೆದ. ಆದರೆ ಗುಂಡು ಹಾರಿಸುವ ಮುನ್ನವೇ, ಆತ ಕುಳಿತಿದ್ದ ಕಡೆಯ ಗಾಡಿಯ ಬಾಗಿಲು ತೆರೆಯಿತು. ದೃಢ ಬಾಹುಗಳೆರಡು ಆತನನ್ನು ಹೊರಗೆಳೆದುಕೊಂಡು ಪಿಸ್ತೂಲನ್ನು ಕಸಿದುಕೊಂಡುವು. ಆತನ ಕುತ್ತಿಗೆಯ ಬಳಿ ಕತ್ತಿಯ ಅಲುಗು ಶಿರಚ್ಛೇದನಕ್ಕೆ ಸಿದ್ಧವಾಗಿ ನಿಂತಿದ್ದಿತು.

"ಅವನನ್ನು ಮುಟ್ಟಬೇಡಿ!" ದುಬ್ರೋವ್‌ಸ್ಕಿ ಆಜ್ಞಾಪಿಸಿದ. ಆತನ ಉಗ್ರ ಅನುಯಾಯಿಗಳು ಹಿಂದೆ ಸರಿದರು.

"ಈಗ ನೀವು ಸರ್ವಸ್ವತಂತ್ರರು" ಎಂದು ಮತ್ತೊಮ್ಮೆ ದುಬ್ರೋವ್‌ಸ್ಕಿ ರಾಹುಗ್ರಸ್ತಳಂತಿದ್ದ ರಾಜಕುಮಾರಿಯತ್ತ ತಿರುಗಿ ಹೇಳಿದ.

"ಇಲ್ಲ. ನೀವು ತುಂಬ ತಡಮಾಡಿದಿರಿ. ನನ್ನ ಮದುವೆ ಆಗಲೇ

ಆಗಿಹೋಯಿತು. ನಾನೀಗ ರಾಜಕುಮಾರ ವೆರೈಸ್ಕಿಯವರ 'ಧರ್ಮಪತ್ನಿ" ಎಂದಳು ಮಾಷಾ.

"ಏನು! ಇಲ್ಲ, ಇಲ್ಲ. ನೀವು ಆತನ 'ಪತ್ನಿ'ಆಗಿಲ್ಲ. ನೀವು ಆತ ನನ್ನು ಮದುವೆಯಾಗಬೇಕೆಂದು ಬಲಾತ್ಕರಿಸುತ್ತಿದ್ದರು, ಅಷ್ಟೆ. ನೀವೇನೂ ಒಪ್ಪಿಗೆ ಕೊಟ್ಟಿಲ್ಲವಲ್ಲ...." ಎಂದು ದುಬ್ರೋವ್‌ಸ್ಕಿ ಆಶಾವಿಹೀನನಾದಂತೆ ನುಡಿದ.

"ಇಲ್ಲ, ನಾನು ಒಪ್ಪಿಗೆ ಕೊಟ್ಟುಬಿಟ್ಟೆ. ದಾಂಪತ್ಯ ದೀಕ್ಷೆಯನ್ನು ಸ್ವೀಕರಿಸಿಬಿಟ್ಟೆ. ರಾಜಕುಮಾರ ಈಗ ನನ್ನ ಪತಿ. ನಿಮ್ಮ ಅನುಯಾಯಿ ಗಳಿಗೆ, ಅವರನ್ನು ಬಿಟ್ಟುಬಿಡ ಹೇಳಿ. ಪತಿಗೃಹಕ್ಕೆ ತೆರಳಲು ನನ್ನನ್ನು ಅವರೊಂದಿಗೆ ಬಿಟ್ಟುಬಿಡಿ. ನಾನೇನೂ ನಿಮಗೂ ವಂಚನೆ ಮಾಡಿಲ್ಲ. ಕೊನೆಯ ಘಳಿಗೆಯವರೆಗೂ ನಿಮಗಾಗಿ ಕಾದೆ–ಇದು ಸತ್ಯ ಅಂತ ಪ್ರಮಾಣ ಮಾಡಿ ಹೇಳ್ತೀನೆ. ಆದರೇನು, ಎಲ್ಲ ಆಗಿಹೋಯಿತು ಈಗ ಬಹು ತಡವಾಯಿತು. ನಮ್ಮಿಬ್ಬರನ್ನೂ ಹೋಗಗೊಡಿ," ಎಂದು ಗಟ್ಟಿ ಮನಸ್ಸು ಮಾಡಿ ಮಾಷಾ ಹೇಳಿದಳು.

ಗುಂಡಿನ ಗಾಯದ ನೋವು ಮತ್ತು ಹೃದಯದಲ್ಲುಂಟಾದ ತೀವ್ರ ಉದ್ವೇಗ–ಇವು ದುಬ್ರೋವ್‌ಸ್ಕಿಯನ್ನು ತುಂಬ ನಿಶ್ಶಕ್ತನನ್ನಾಗಿ ಮಾಡಿ ದ್ದುವು. ಮಾಷಾ ಏನು ಹೇಳಿದಳೆಂಬುದೇ ಅವನಿಗೆ ತಿಳಿಯಲಾಗಲಿಲ್ಲ. ಸ್ವಲ್ಪಹೊತ್ತಿನ ಮೇಲೆ, ಪ್ರಜ್ಞಾಹೀನನಾಗಿ ಅವನು ಗಾಡಿಯ ಗಾಲಿಗಳ ಬಳಿ ಬಿದ್ದುಬಿಟ್ಟ. ಅವನ ಅನುಯಾಯಿಗಳು ಸುತ್ತುವರಿದು ನಿಂತರು. ಅವರಿಗೆ ಏನುಮಾಡಬೇಕೆಂದು ಕೆಲವೇ ಮಾತುಗಳಲ್ಲಿ ಆಜ್ಞಾಪಿಸುವಷ್ಟು ಶಕ್ತಿಮಾತ್ರ ಅವನಲ್ಲಿತ್ತು. ಅವರು ತಮ್ಮ ನಾಯಕನನ್ನು ಕುದುರೆಯ ಮೇಲೆ ಕುಳ್ಳಿರಿಸಿ ದರು. ಅತ್ತ–ಇತ್ತ ಇಬ್ಬರು ಜೆಂಬಲಿಗರಾಗಿ ನಿಂತರು. ಇನ್ನೊಬ್ಬ, ಕುದು ರೆಯ ಲಗಾಮನ್ನು ಹಿಡಿದ. ಉಳಿದವರೆಲ್ಲ ಇಕ್ಕೆಲಗಳಲ್ಲೂ ನಿಧಾನವಾಗಿ ಹೊರಟರು. ರಸ್ತೆಯ ಮಧ್ಯದಲ್ಲಿ ಗಾಡಿಯೊಂದೇ ಉಳಿಯಿತು. ಸೇವಕರ ನ್ನೆಲ್ಲಾ ಕಟ್ಟಿಹಾಕಿದ್ದರು. ಕುದುರೆಗಳನ್ನು ಬಿಚ್ಚಿಬಿಟ್ಟಿದ್ದರು. ಆದರೂ, ಏನನ್ನೂ ಅವರು ದರೋಡೆ ಮಾಡಿರಲಿಲ್ಲ. ತಮ್ಮ ನಾಯಕ ಮಣಿಯ ರಕ್ತ ಸುರಿದಿದ್ದರೂ, ಪ್ರತೀಕಾರ ರೂಪವಾಗಿಯಾವರೂ ಶತ್ರುವಿನ ಒಂದು ತೊಟ್ಟು ರಕ್ತವನ್ನೂ ಸುರಿಸದೆ, ಅವರೆಲ್ಲರೂ ಹೊರಟುಹೋದರು.

ದಟ್ಟವಾದ ಕಾಡಿನಲ್ಲಿ ಒತ್ತಾಗಿ ಬೆಳೆದಿದ್ದ ಮರಗಳ ಮಧ್ಯೆ ಒಂದು ನೀಳವಾದ ವನಮಾರ್ಗ ಸೀಳಿಕೊಂಡು ಹೋಗಿತ್ತು. ಮಾರ್ಗಮಧ್ಯದಲ್ಲಿ ಒಂದು ಚಿಕ್ಕ ಮಣ್ಣಿನ ಮನೆ ಇತ್ತು. ಅದರ ಸುತ್ತಮುತ್ತ ಅನೇಕ ಡೇರಾಗಳು ಮತ್ತು ಮಣ್ಣಿನ ಮನೆಗಳಿದ್ದುವು. ಇವುಗಳನ್ನೆಲ್ಲಾ ಆವರಿಸಿಕೊಂಡು ಕೋಟೆಯ ಗೋಡೆಯೊಂದು ನಿಂತಿದ್ದಿತು. ಕೋಟೆಯ ಸುತ್ತ ಒಂದು ದೊಡ್ಡ ಕಂದಕ ಅಗೆಯಲ್ಪಟ್ಟಿದ್ದಿತು. ಭದ್ರವಾದ ಕೋಟೆಯಿಂದ ರಕ್ಷಿಸಲ್ಪಟ್ಟ ದುರ್ಗದಂತೆ ತೋರುತ್ತಿತ್ತು, ಅದು.

ಗುಡಿಸಲುಗಳ ಮುಂಭಾಗದ ಅಂಗಳದಲ್ಲಿ ಒಂದು ದೊಡ್ಡ ಕಡಾಯಿಯ ಸುತ್ತ ಅನೇಕ ಮಂದಿ ಗುಂಪು ಗುಂಪಾಗಿ ಕುಳಿತು ಊಟ ಮಾಡುತ್ತಿದ್ದರು. ತಲೆಗೆ ಶಿರಸ್ತ್ರಾಣ ಧರಿಸದೆ, ಪಟ್ಟೆಪಟ್ಟೆಯ ಉಡುಪು ತೊಟ್ಟು, ಆಯುಧ ಹಿಡಿದಿದ್ದ ಆ ಜನರನ್ನು ನೋಡಿದ ಯಾರಾದರೂ ಅವರೆಲ್ಲ ಕಳ್ಳರ ಗುಂಪಿಗೆ ಸೇರಿದವರೆಂದು ಗುರ್ತು ಹಿಡಿಯಬಹುದಾಗಿತ್ತು. ಕೋಟೆಯ ಗೋಡೆಯ ಮೇಲೆ ಒಂದು ಫಿರಂಗಿಯಿದ್ದಿತು. ಅದರ ಪಕ್ಕದಲ್ಲಿ ಕಾವಲುಗಾರನೊಬ್ಬ ಕಾಲುಮೇಲೆ ಕಾಲು ಹಾಕಿಕೊಂಡು ಜೀರ್ಣವಾಗಿದ್ದ ತನ್ನ ಅರಿವೆಯೊಂದಕ್ಕೆ ತೇಪೆ ಹಾಕುತ್ತಾ ಕುಳಿತಿದ್ದ. ಸೂಜಿ ಉಪಯೋಗಿಸುತ್ತಿದ್ದ ರೀತಿಯನ್ನು ನೋಡಿದರೆ, ಆತ ಒಬ್ಬ ನುರಿತ ದರ್ಜಿ ಎಂದು ಹೇಳಬಹುದಿತ್ತು. ಆಗಾಗ್ಗೆ ಕತ್ತೆತ್ತಿ ಸುತ್ತಲೂ ಎಚ್ಚರಿಕೆಯ ದೃಷ್ಟಿ ಬೀರುತ್ತಿದ್ದ.

ಮದ್ಯಪಾತ್ರೆ ಅನೇಕ ಬಾರಿ ಕೈಯಿಂದ ಕೈಗೆ ದಾಟಿ ಹೋಗಿದ್ದರೂ, ಗುಂಪಿನಲ್ಲಿ ಏನೋ ಒಂದು ವಿಚಿತ್ರ ಮೌನ ನೆಲಸಿದ್ದಿತು. ಭೋಜನಾನಂತರ ಪ್ರಾರ್ಥನೆ ಸಲ್ಲಿಸಿ, ಕಳ್ಳರ ಗುಂಪು ಚೆದರಿತು. ಕೆಲವರು ತಮ್ಮ ಶಿಬಿರಗಳಿಗೆ ಹೋದರು. ಮತ್ತೆ ಕೆಲವರು ಕಾಡಿನಲ್ಲಿ ನುಸುಳಿಕೊಂಡು ಮಾಯವಾದರು. ಇನ್ನು ಕೆಲವರು, ಊಟದ ಮತ್ತನ್ನು ಹೋಗಲಾಡಿಸಿಕೊಳ್ಳಲು ಆ ಸ್ಥಳದಲ್ಲೇ, ರಷ್ಯನ್ ಮಾದರಿಯಲ್ಲಿ, ಅಂಗತ್ತನಾಗಿ ಬಿದ್ದುಕೊಂಡು ನಿದ್ರಾಸಕ್ತರಾದರು.

ಪಹರೆಯವನು ಅಷ್ಟು ಹೊತ್ತಿಗೆ ಹೊಲಿಗೆ ಕೆಲಸ ಮುಗಿಸಿದ. ಬಟ್ಟೆಯನ್ನು ಜಾಡಿಸಿಕೊಡವಿ, ತಾನು ಹಾಕಿದ ತೇಪೆಯನ್ನು ತಾನೇ ಮೆಚ್ಚುವವ

ನಂತೆ ಎತ್ತಿ ಹಿಡಿದು ನೋಡಿದ. ಆಮೇಲೆ ಸೂಜಿಯನ್ನು ಅಂಗಿಯ ತೋಳಿಗೆ ಸಿಕ್ಕಿಸಿಕೊಂಡು, ಫಿರಂಗಿಯ ಬಳಿ ಹೋಗುತ್ತಾ, ಗಟ್ಟಿಯಾಗಿ ಶೋಕಪೂರಿತವಾದ ಹಳೆಯ ಹಾಡಿನ ಚರಣವೊಂದನ್ನು ಹಾಡತೊಡಗಿದ:

ಸರಸರದ ಪಿಸುಸೊಲ್ಲ ಸಾಕುಮಾಡೆಲೆ ಪ್ರೀತೆ,
ಹಸಿರು ಉಡುಗೆಯ ವಿಪಿನ ಮಾತೆ;
ತಡೆಯಾಗದಿರು ತಾಯೆ, ನಿನ್ನ
ಈ ಕೆಚ್ಚೆದೆಯ ಕುವರನ ಮನನಕೆ.

ಕೂಡಲೇ, ಬಳಿಯಲ್ಲಿದ್ದ ಸೋಗೆ ಹೊದಿಸಿದ್ದ ಗುಡಿಸಲಿನ ಬಾಗಿಲು ತೆರೆಯಿತು. ಬಿಳಿಟೋಪಿ ಧರಿಸಿದ, ಶುಭ್ರವಾದ ನಿರಾಡಂಬರ ಉಡಿಗೆ ಉಟ್ಟಿದ್ದ ವೃದ್ಧ ಸ್ತ್ರೀಯೊಬ್ಬಳು ಹೊಸಲಿನ ಬಳಿ ಕಾಣಿಸಿಕೊಂಡಳು.

"ಏಯ್, ಸ್ಟೆಪ್ಕಾ, ನಿನ್ನ ಬಾಯಿಗೆ ಒಂದು ಘಳಿಗೇನೂ ಬಿಡುವು ಕೊಡೋಕಾಗೋದಿಲ್ವಾ? ಒಡೆಯರು ವಿಶ್ರಾಂತಿ ತಗೋತಿದಾರೆ, ನೀನು ಅರಚಿಕೊಳ್ಳೋಕೆ ಶುರುಮಾಡಿಬಿಟ್ಟೆಯಲ್ಲ. ನಿನಗೇನು ಅಂತಃಕರಣ ಅನ್ನೋದು ಇಲ್ವೇ ಇಲ್ಲವೇ? ಅಷ್ಟಾದರೂ ಜ್ಞಾನ ಬೇಡವೇ?" ಎಂದು ಆಕೆ ಕಟುವಾಗಿ ಹೇಳಿದಳು.

"ತಪ್ಪಾಯ್ತು, ಕ್ಷಮಿಸು ತಾಯಿ, ಯೆಗೋರೋವ್ನಾ. ನಿನ್ನ ಮಾತು ನಿಜ. ನಾನು ಹಾಡೋದನ್ನ ನಿಲ್ಲಿಸಿಬಿಡ್ತೇನೆ. ನಮ್ಮ ಒಡೆಯ ವಿಶ್ರಾಂತಿ ತಗೊಂಡು ಬೇಗ ಗುಣಮುಖರಾಗಲಿ," ಎಂದ ಸ್ಟೆಪ್ಕಾ.

ಆ ವೃದ್ಧ ಸ್ತ್ರೀ ಪುನಃ ಗುಡಿಸಲಿನೊಳಕ್ಕೆ ಹೊರಟುಹೋದಳು. ಸ್ಟೆಪ್ಕಾ ಕೋಟೆಯ ಗೋಡೆಯಮೇಲೆ ಪಹರೆ ಪ್ರಾರಂಭಿಸಿದ.

ವೃದ್ಧ ಸ್ತ್ರೀ ಹೊರಬಂದ ಆ ಗುಡಿಸಲಿನೊಳಗೆ, ಅಡ್ಡ ಗೋಡೆಯ ಅತ್ತ, ಗಾಯಗೊಂಡಿದ್ದ ದುಬ್ರೋವ್‌ಸ್ಕಿ ಶಿಬಿರದ ರುಗ್ಣಶಯ್ಯೆಯಲ್ಲಿ ಪವಡಿಸಿದ್ದ. ಪಕ್ಕದಲ್ಲಿದ್ದ ಮೇಜಿನ ಮೇಲೆ ಆತನ ಪಿಸ್ತೂಲುಗಳಿದ್ದುವು. ಹಾಸಿಗೆಯ ನೆತ್ತಿಯ ಮೇಲೆ ಆತನ ಖಡ್ಗ ತೂಗಾಡುತ್ತಿತ್ತು. ಕೊಠಡಿಯ ಗೋಡೆಗಳ ಮೇಲೆ ಮತ್ತು ನೆಲದ ತುಂಬ ಅತ್ಯುತ್ತಮವಾದ, ಬೆಲೆ ಬಾಳುವ ರತ್ನಕಂಬಳಿಗಳನ್ನು ಹಾಸಲಾಗಿತ್ತು. ಮೂಲೆಯಲ್ಲಿ, ಮೇಜಿನ ಮೇಲೆ, ಸುಂದರ ಸ್ತ್ರೀ ಉಪಯೋಗಿಸುವಂತಹ ಬೆಳ್ಳಿಯ ಶೃಂಗಾರ ವಸ್ತುಗಳೂ, ಒಂದು ದೊಡ್ಡ ಕನ್ನಡಿಯೂ ಇದ್ದುವು. ದುಬ್ರೋವ್‌ಸ್ಕಿಯ ಕೈಲಿ ತೆರೆದ ಪುಸ್ತಕವಿದ್ದಿತು,

ಆದರೆ ಕಣ್ಣುಗಳು ಮುಚ್ಚಿದ್ದುವು. ಅಡ್ಡಗೋಡೆಯ ಈ ಬದಿಯಿಂದ ಆತನತ್ತ ಇಣುಕಿ ನೋಡುತ್ತಿದ್ದ ವೃದ್ಧ ಸ್ತ್ರೀಗೆ, ಆತ ನಿದ್ರಿಸುತ್ತಿದ್ದಾನೆಯೋ ಅಥವಾ ವಿಚಾರ ಮಗ್ನನಾಗಿದ್ದಾನೆಯೋ ಎಂಬುದನ್ನು ಕಂಡುಹಿಡಿಯುವುದೇ ಕಷ್ಟವಾಗಿತ್ತು.

ಒಮ್ಮೆಗೇ ದುಬ್ರೋವ್‌ಸ್ಕಿ ಬೆಚ್ಚಿಬಿದ್ದು ಎದ್ದು ಕುಳಿತ—ಹೊರಗಡೆ ಅಪಾಯದ ಭಯಸೂಚನೆ ಕೇಳಿಬಂದಿತ್ತು. ಸ್ಟೆಪ್ಕಾ ಏದುತ್ತಾ ಓಡಿ ಬಂದು ಕಿಟಕಿಯೊಳಗೆ ಮುಖ ನೀಡಿ, ಕೂಗಿ ಹೇಳಿದ :

“ವ್ಲಾಡಿಮಿರ್ ದುಬ್ರೋವ್‌ಸ್ಕಿ—ಒಡೆಯರೇ! ಅದು ನಮಗಾಗಿ ಇತ್ತ ಮುಂಜಾಗ್ರತೆಯ ಸೂಚನೆ! ಶತ್ರುಗಳು ಸಮೀಪಿಸುತ್ತಿರುವರೆಂದು ತೋರುತ್ತೆ!”

ದುಬ್ರೋವ್‌ಸ್ಕಿ ಕೂಡಲೇ ಹಾಸಿಗೆಯಿಂದ ಕೆಳಕ್ಕೆ ನೆಗೆದು, ಆಯುಧಗಳನ್ನು ಧರಿಸಿ, ಗುಡಿಸಲಿನಿಂದ ಹೊರಬಂದ. ಅವನ ಹಿಂಬಾಲಕರೆಲ್ಲಾ ಆಗಲೇ ಅಂಗಳದಲ್ಲಿ ಸೇರಿದು ತಮ್ಮತಮ್ಮಲ್ಲೇ ಮಾತಾಡಿಕೊಳ್ಳುತ್ತಿದ್ದರು. ದುಬ್ರೋವ್‌ಸ್ಕಿಯನ್ನು ಕಂಡ ಕೂಡಲೇ ಮಾತು ನಿಲ್ಲಿಸಿದರು. ಗಂಭೀರ ಮೌನ ಆವರಿಸಿತು.

“ಪ್ರತಿಯೊಬ್ಬರೂ ಬಂದಿದ್ದಾರೆ ತಾನೆ?” ದುಬ್ರೋವ್‌ಸ್ಕಿ ಕೇಳಿದ.

“ಗಸ್ತು ತಿರುಗುವವರನ್ನು ಬಿಟ್ಟು ಉಳಿದ ಎಲ್ಲರೂ ಬಂದಿದ್ದಾರೆ” ಎಂದು ಉತ್ತರ ಬಂದಿತು.

“ಸರಿ. ಎಲ್ಲರೂ ನಿಮ್ಮ ನಿಮ್ಮ ಕರ್ತವ್ಯ—ಸ್ಥಾನಗಳಿಗೆ ಹೋಗಿ” ಎಂದು ದುಬ್ರೋವ್‌ಸ್ಕಿ ಆಜ್ಞೆಯಿತ್ತ. ಅಂತೆಯೇ ಆ ಕಳ್ಳರ ಗುಂಪಿನ ಪ್ರತಿಯೊಬ್ಬ ಸದಸ್ಯನೂ ತನಗೆ ಗೊತ್ತು ಮಾಡಿದ್ದ ನಿರ್ದಿಷ್ಟ ಸ್ಥಾನಕ್ಕೆ ತೆರಳಿದ.

ಅಷ್ಟು ಹೊತ್ತಿಗೆ ಸರಿಯಾಗಿ ಮೂರು ಮಂದಿ ಗಸ್ತಿನವರು ಓಡಿ ಬಂದರು. ದುಬ್ರೋವ್‌ಸ್ಕಿ ಮುಂದೆ ಹೋಗಿ ಅವರನ್ನು ಸಂಧಿಸಿದ.

“ಏನು ಸಮಾಚಾರ?”

“ಸಶಸ್ತ್ರ ಸೈನಿಕರು ಕಾಡಿನ ತುಂಬ ತುಂಬಿದ್ದಾರೆ. ನಾವು ಸುತ್ತುವರೆಯಲ್ಪಟ್ಟದ್ದೇವೆ.”

ದುಬ್ರೋವ್‌ಸ್ಕಿ ಹೆಬ್ಬಾಗಿಲುಗಳನ್ನು ಮುಚ್ಚ ಹೇಳಿ, ತನ್ನ ಚಿಕ್ಕದಾದ

ಶಸ್ತ್ರಾಗಾರವನ್ನು ಸ್ವತಃ ಪರೀಕ್ಷಿಸಲು ಹೊರಟ. ಅರಣ್ಯದಿಂದ ಬರುತ್ತಿದ್ದ ಶಬ್ದ ಹತ್ತಿರವಾಗತೊಡಗಿತು. ಕಳ್ಳರ ಗುಂಪಿನವರು ನಿಶ್ಶಬ್ದವಾಗಿ ಕಾದು ನಿಂತರು. ಕೂಡಲೇ ಮೂರು-ನಾಲ್ಕು ಮಂದಿ ಸೈನಿಕರು ಕಾಣಿಸಿಕೊಂಡು, ತಕ್ಷಣವೇ ಹಿಂದಿರುಗಿ, ಗುಂಡು ಹಾರಿಸಿ, ತಮ್ಮ ಜತೆಗಾರರಿಗೆ ಸೂಚನೆಯನ್ನಿತ್ತರು.

"ಯುದ್ಧಕ್ಕೆ ಸಜ್ಜುಗೊಳ್ಳಿ" ದುಬ್ರೋವ್‌ಸ್ಕಿ ಆಣತಿಯಿತ್ತ.

ಕಳ್ಳರ ಗುಂಪು ಅಡಗಿಕೊಂಡಿದ್ದ ಅರಣ್ಯ ಪ್ರದೇಶದಿಂದ ಸರಸರಶಬ್ದ ಕೇಳಿಬಂತು. ಪುನಃ ನೀರವತೆ.

ಈಗ ಹತ್ತಿರಬರುತ್ತಿದ್ದ ಸೈನಿಕದಳದ ಶಬ್ದ ಕೇಳಬಹುದಿತ್ತು. ಅವರ ಶಸ್ತ್ರಾಸ್ತ್ರಗಳು ಮರಗಳ ಮಧ್ಯೆ ಹೊಳೆಯುತ್ತಿದ್ದುವು. ಸುಮಾರು ನೂರೈವತ್ತು ಸೈನಿಕರು ಕಾಡಿನಿಂದ ಹೊರಬಂದು ರಣಘೋಷ ಮಾಡುತ್ತಾ ಕೋಟೆಗೆ ಲಗ್ಗೆಹಾಕಲು ಧಾವಿಸಿದರು. ದುಬ್ರೋವ್‌ಸ್ಕಿ, ಉರಿಯುತ್ತಿದ್ದ ಬತ್ತಿಯನ್ನು ತಾಕಿಸಿ ಫಿರಂಗಿಯ ಮದ್ದು ಹತ್ತಿಸಿದ. ಗುಂಡು ಭೀಕರ ಶಬ್ದ ಮಾಡುತ್ತಾ ಹಾರಿತು. ದುಬ್ರೋವ್‌ಸ್ಕಿಯ ಯತ್ನ ಸಫಲವಾಯಿತು—ಒಬ್ಬ ಸೈನಿಕ ಸತ್ತುಬಿದ್ದ. ಇನ್ನಿಬ್ಬರಿಗೆ ಗಾಯವಾಯಿತು. ಉಳಿದ ಸೈನಿಕರಲ್ಲಿ ಗಲಿಬಿಲಿ ಎದ್ದಿತು. ಆದರೆ ಅವರ ದಳಪತಿ ಕೂಡಲೇ ಮುನ್ನುಗ್ಗಿದ. ಉಳಿದವರೂ ಆತನನ್ನನುಸರಿಸಿ, ಕಂದಕವನ್ನು ದಾಟತೊಡಗಿದರು. ಕಳ್ಳರ ಗುಂಪಿನವರು, ಪಿಸ್ತೂಲು ಮತ್ತು ಬಂದೂಕಗಳಿಂದ ಸೈನಿಕರ ಮೇಲೆ ಒಂದೇ ಸಮನೆ ಗುಂಡಿನ ಮಳೆಗರೆದರು. ಮಚ್ಚು, ಕೊಡಲಿಗಳನ್ನು ಕೈಲಿ ಹಿಡಿದುಕೊಂಡು, ಕೋಟೆಯ ಗೋಡೆಯನ್ನು ಏರುತ್ತಿದ್ದ ಸೈನಿಕರಿಗೆ ಪೆಟ್ಟು ಕೊಡುತ್ತಾ, ಅವರು ದುರ್ಗವನ್ನು ರಕ್ಷಿಸುತ್ತಿದ್ದರು. ಸುಮಾರು ಇಪ್ಪತ್ತಕ್ಕೂ ಮಿಕ್ಕು ಸೈನಿಕರು ಗಾಯಗೊಂಡು ಕಂದಕದಲ್ಲಿ ನರಳುತ್ತಾ ಬಿದ್ದಿದ್ದರೂ, ಉಳಿದವರು ಅಂಜದೆ ದುರ್ಗದ ಗೋಡೆಯನ್ನು ಹತ್ತೇಬಿಟ್ಟರು. ಈಗ ಉಭಯತ್ರರೂ ಸಂಧಿಸಿ ಹೋರತೊಡಗಿದರು. ಅನೇಕ ಮಂದಿ ಸೈನಿಕರು ಆಗಲೇ ಕೋಟೆಯ ಗೋಡೆಯನ್ನು ಹತ್ತಿ ಬಂದುಬಿಟ್ಟಿದ್ದರು. ಅವರದೇ ಕೈ ಮೇಲಾದಂತೆ ತೋರುತ್ತಿತ್ತು. ಕಳ್ಳರ ಗುಂಪಿನವರು ಹಿಂದೆ ಹಿಂದೆ ಸರಿಯುತ್ತಿದ್ದರು. ಅವರು ಇನ್ನೇನು ಶರಣಾಗತರಾಗುವವರಿದ್ದರು. ಆಗ ದುಬ್ರೋವ್‌ಸ್ಕಿ ಮುಂದೆ ಬಂದು, ಸೈನಿಕರ ದಳಪತಿಯ ಎದೆಗೆ ಗುರಿ

ಇಟ್ಟು ಗುಂಡು ಹಾರಿಸಿದ; ದಳಪತಿ ಅಂಗಾತನಾಗಿ ನೆಲಕ್ಕುರುಳಿದ. ಕೂಡಲೇ ಕೆಲವು ಸೈನಿಕರು ಅವನನ್ನು ತಮ್ಮ ಮಧ್ಯೆ ಮರೆಯಾಗಿ ಇರಿಸಿಕೊಂಡು ಕಾಡಿನೊಳಕ್ಕೆ ಹೊತ್ತುಕೊಂಡು ಹೋದರು. ನಾಯಕನನ್ನು ಕಳೆದುಕೊಂಡ ಸೈನಿಕರು ಕಂಗೆಟ್ಟರು. ಹೀಗೆ ಕಂಗಾಲಾಗಿ ದಿಕ್ಕುಗೆಟ್ಟ ಸೈನಿಕರ ದುರವಸ್ಥೆಯನ್ನು ಉಪಯೋಗಿಸಿಕೊಂಡು ಕಳ್ಳರ ಗುಂಪಿನ ಕಡೆಯವರು ಸೈನಿಕರ ಮೇಲೆ ಒಮ್ಮೆಲೇ ಎರಗಿ, ಅವರನ್ನು ಕಂದಕದವರೆಗೂ ತಳ್ಳಿಬಿಟ್ಟರು. ಮುತ್ತಿಗೆ ಹಾಕಬಂದವರು, ವಿಧಿಯಿಲ್ಲದೆ, ಓಡಿಹೋಗಬೇಕಾಯಿತು. ಹಿಂದಿನಿಂದ ಕಳ್ಳರ ಗುಂಪಿನವರು ಕೇಕೆ ಹಾಕುತ್ತಾ, ಗೇಲಿ ಮಾಡುತ್ತಾ, ಅವರನ್ನು ಸ್ವಲ್ಪ ದೂರದ ವರೆಗೂ ಅಟ್ಟಿಸಿಕೊಂಡು ಹೋದರು. ಈಗ ಸಂಪೂರ್ಣ ವಿಜಯ ಲಭಿಸಿತೆಂದು ದೃಢವಾಯಿತು. ಶತ್ರುಗಳೆಲ್ಲ ಕಂಗೆಟ್ಟು ದಿಕ್ಕಾಪಾಲಾಗಿ ಓಡಿಹೋದರೆಂದು ಖಚಿತವಾದ ಮೇಲೆ, ದುಬ್ರೋವ್‌ಸ್ಕಿ ತನ್ನ ಸಂಗಡದವರನ್ನು ಒಂದಕ್ಕೆ ಕರೆಸಿಕೊಂಡು ಕೋಟೆಯ ಬಾಗಿಲಿಗೆ ಬೀಗ ಹಾಕಿಸಿದ. ಹಾಗೆಯೇ, ಗಾಯಗೊಂಡವರಿಗೆ ಔಷಧೋಪಚಾರ ಮಾಡಬೇಕೆಂದೂ, ಪಹರೆ ಕೆಲಸ ಇಮ್ಮಡಿ ಜಾಗರೂಕತೆಯಿಂದ ನಡೆಯಬೇಕೆಂದೂ, ಯಾರೊಬ್ಬರೂ ಆ ಪ್ರದೇಶದಿಂದ ಹೊರಹೋಗಬಾರದೆಂದೂ ಆಜ್ಞಾಪಿಸಿದ.

ದುಬ್ರೋವ್‌ಸ್ಕಿಯ ಸಾಹಸಕೃತ್ಯಗಳ ಬಗ್ಗೆ ಸರಕಾರೀ ಅಧಿಕಾರಿಗಳಿಗೆ ಹಿಂದೆಲ್ಲ ಎಷ್ಟೋ ಬಾರಿ ವರದಿ ಹೋಗಿದ್ದರೂ, ಅವರು ಅಷ್ಟಾಗಿ ಗಮನವಿತ್ತಿರಲಿಲ್ಲ. ಆದರೆ ಅವನ ಈ ಕೊನೆಯ ಸಾಹಸಕೃತ್ಯ ಅವರ ಗಮನವನ್ನು ಸೆಳೆದು, ಶ್ರದ್ಧೆ ವಹಿಸಿ ಅವನ ವಿರುದ್ಧ ಕಾರ್ಯಕ್ರಮ ಕೈಗೊಳ್ಳುವಂತೆ ಮಾಡಿತು. ಅವನ ಚರಿತ್ರೆ ಮತ್ತು ವಾಸಸ್ಥಾನಗಳ ಬಗ್ಗೆ ಕೂಲಂಕಷವಾಗಿ ಸುದ್ದಿ ಸಂಗ್ರಹಿಸಿದ ಬಳಿಕ, ಶಸ್ತ್ರ ಸಜ್ಜಿತ ಪಡೆಯೊಂದು, ಅವನನ್ನು ಜೀವಂತವಾಗಿಯಾಗಲೀ ಅಥವಾ ಅವನ ಶವವನ್ನಾಗಲೀ ತಂದೇ ತೀರಬೇಕೆಂಬ ಕಟ್ಟಾಜ್ಞೆಯೊಂದಿಗೆ, ಕಳುಹಲ್ಪಟ್ಟಿತು. ಆ ಪಡೆ ಅವನಿದ್ದ ಪ್ರದೇಶವನ್ನು ಆಕ್ರಮಿಸಿ, ಗುಂಪಿನ ಕೆಲವು ಸದಸ್ಯರನ್ನು ಬಂಧಿಸಿತು. ಅವರನ್ನು ವಿಚಾರಿಸಲಾಗಿ, ದುಬ್ರೋವ್‌ಸ್ಕಿ ಅವರ ಮಧ್ಯೆ ವಾಸಿಸುತ್ತಿರಲಿಲ್ಲವೆಂದು ತಿಳಿದುಬಂತು.

ಸೈನಿಕರೊಂದಿಗೆ ಹೋರಾಡಿದ ಮೂರನೆಯ ದಿನವೋ ಅಥವಾ ಎರಡನೆಯ ದಿನವೋ, ದುಬ್ರೋವ್‌ಸ್ಕಿ ತನ್ನ ಅಧೀನದಲ್ಲಿದ್ದವರನ್ನೆಲ್ಲ ಸಭೆ

ಸೇರಿಸಿದ. ತಾನು ಅವರನ್ನೆಲ್ಲಾ ಕೊನೆಯದಾಗಿ ಬೀಳ್ಕೊಡುವುವಾಗಿ ಹೇಳಿ ಅವರೆಲ್ಲಾ ಆ ತರಹೆಯ ಜೀವನ ಮಾರ್ಗವನ್ನು ತ್ಯಜಿಸುವುದು ಒಳಿತೆಂದು ಹಿತೋಪದೇಶ ಮಾಡಿದ.

" ನನ್ನ ನಾಯಕತ್ವದಲ್ಲಿ ನೀವೆಲ್ಲ ಬಹಳವಾಗಿ ಸಂಪಾದನೆ ಮಾಡಿದ್ದೀರಿ. ನಿಮ್ಮಲ್ಲಿ ಪ್ರತಿಯೊಬ್ಬರಲ್ಲಿಯೂ ಸಂಚಾರಪರವಾನಗೆಗಳಿವೆ. ದೂರದ ಯಾವುದಾದರೂ ಪ್ರಾಂತಕ್ಕೆ ಹೋಗಿ, ನಿಮ್ಮ ಜೀವಿತದ ಉಳಿದ ಭಾಗವನ್ನು, ಗೌರವಯುತವಾಗಿ, ಕೆಲಸಮಾಡುತ್ತಾ ಕಳೆಯಿರಿ. ಆರ್ಥಿಕ ಧನವಿರುವ ನೀವೆಲ್ಲಾ ಸುಖ – ಸಂತೋಷಗಳಿಂದ ಜೀವನ ಮಾಡಬಲ್ಲಿರಿ. ಇದೇ ನನ್ನ ಇಚ್ಛೆ. ಆದರೂ ನನಗೆ ಪ್ರಬಲವಾದ ಸಂಶಯವಿದ್ದೇ ಇದೆ. ನೀವೆಲ್ಲ ನುರಿತ ಖದೀಮರಾಗಿದೀರಿ. ಈ ದೌರ್ಜನ್ಯಕಾರ – ಜೀವನ ನಿಮಗೆ ತುಂಬ ಹಿಡಿಸಿಬಿಟ್ಟಿದೆ. ನಾನು ಉಪದೇಶ ಮಾಡಿದರೂ, ಬಹುಶಃ ಈ ವೃತ್ತಿಯನ್ನು ಬಿಡಲು ನಿಮಗೆ ಮನಸ್ಸು ಬರುವುದಿಲ್ಲವೆಂದೇ ನನಗನಿಸುತ್ತದೆ."—ಹೀಗೆಂದು ಹೇಳಿ, ಅವನು ತನ್ನ ಜೊತೆಗೆ ಕೇವಲ ಒಬ್ಬ ಸಂಗಡಿಗನನ್ನು ಮಾತ್ರ ಕರೆದುಕೊಂಡು ಹೊರಟುಹೋದ. ಆತ ಎಲ್ಲಿ ಹೋದ ಎಂಬುದನ್ನು ಯಾರಿಗೂ ತಿಳಿಯಲಿಲ್ಲ. ಈ ವಿಷಯ ಸುಳ್ಳೆಂದು ಕೆಲವರು ಮೊದಮೊದಲು ಶಂಕಿಸಿದರು. ಆ ಕಳ್ಳರು ತಮ್ಮ ನಾಯಕನಲ್ಲಿ ಎಷ್ಟೊಂದು ಭಯ–ಭಕ್ತಿ ಇಟ್ಟದ್ದರೆಂಬುದು ಎಲ್ಲರಿಗೂ ತಿಳಿದ ವಿಷಯವಾಗಿತ್ತು. ಅವರು ಆತನನ್ನು ತಮ್ಮ ಮಧ್ಯೆಯೇ ಗುಟ್ಟಾಗಿಟ್ಟುಕೊಂಡು ರಕ್ಷಿಸುತ್ತಿರುವರೆಂಬೇ ಎಲ್ಲರೂ ಭಾವಿಸಿದರು. ಆದರೆ ಕೊನೆಗೆ, ಕಳ್ಳರ ಗುಂಪಿನವರಿತ್ತ ವಿವರಣೆ ಸತ್ಯವೆಂದು ಸಾಧಿತವಾಯಿತು—ಅಂದಿನಿಂದ ಭಯೋತ್ಪಾದಕ ದೌರ್ಜನ್ಯ ಕೃತ್ಯಗಳು ಎಲ್ಲೂ ಜರುಗಲಿಲ್ಲ. ಬೆಂಕಿ ಪ್ರಕರಣ, ಕಳ್ಳತನಗಳ ಸುದ್ದಿಯೂ ಕೇಳಿಬರಲಿಲ್ಲ. ಸಂಚಾರ ಮಾರ್ಗಗಳು ದರೋಡೆಕಾರರ ಹಾವಳಿಯಿಂದ ಮುಕ್ತವಾದುವು. ಪ್ರಯಾಣವನ್ನು ನಿರ್ಭೀತಿಯಿಂದ ಮಾಡುವಂತಾಯಿತು.

ದುಬ್ರೋವ್‌ಸ್ಕಿ ಆ ದೇಶವನ್ನೇ ಬಿಟ್ಟು ವಿದೇಶಕ್ಕೆ ಹೊರಟುಹೋದನೆಂದು, ಕೊನೆಗೆ ಬೇರೆ ಯಾವುದೋ ಮೂಲದಿಂದ ಕಂಡು ಹಿಡಿಯಲ್ಪಟ್ಟಿತು.

---

# ಈ ಪುಸ್ತಕವನ್ನು ಕುರಿತು

---

ವಿಶ್ವವಿಖ್ಯಾತ ರಷ್ಯನ್ ಕವಿ-ಕಥೆಗಾರ ಅಲೆಗ್ಸಾಂಡರ್ ಪುಷ್ಕಿನ್‌ರ ಉತ್ತಮ ಕಿರುಗಾದಂಬರಿ **'ದುಬ್ರೋವ್‌ಸ್ಕಿ'**

ತಂದೆಯ ಸಾವಿಗೆ ಕಾರಣನಾದ ಶ್ರೀಮಂತ ಭೂಮಾಲಿಕನ ಮೇಲೆ ಸೇಡುತೀರಿಸಿಕೊಳ್ಳಲು ಪ್ರತಿಜ್ಞಾ ಬದ್ಧನಾಗಿ ಕಾಡು ಸೇರುವ ಯುವಕ ದುಬ್ರೋವ್‌ಸ್ಕಿ, ಆ ಶ್ರೀಮಂತನ ಮಗಳಲ್ಲೇ ಅನುರಕ್ತನಾಗುವುದು ಕಥೆ. ಆ ಕಥೆಗೆ ಹಿನ್ನೆಲೆಯಾಗಿ ಬಂದಿರುವುದು ಆಗಿನ ಗ್ರಾಮಾಂತರ ಜೀವನದ ಚಿತ್ರಣ. ಇಲ್ಲಿ ಬರುವ ಭೂಮಾಲಿಕ, ಆತನ ಸೇವೆಗೆ ಸದಾ ಸಿದ್ಧರಾಗಿರುವ ನ್ಯಾಯಾಧೀಶ, ಫೌಜುದಾರ, ಹೊರಟುಹೋಗುವ ಸ್ವಾತಂತ್ರ್ಯವಿಲ್ಲದೆ ಒಡೆಯನಿಗೆ ಗುಲಾಮರಾಗಿಯೇ ಬದುಕುವ ರೈತರು-ಅವರೆಲ್ಲ ಬದುಕನ್ನು ಪ್ರತಿಬಿಂಬಿಸುವ ಶಿಲ್ಪಕೃತಿಗಳು. ಮರಿಯಾ ಕಿರಿಲೋವ್ನಾ, ಸೌಂದರ್ಯದ, ಪ್ರೇಮದ, ಸಾತ್ವಿಕತೆಯ ಪ್ರತಿಮೂರ್ತಿಯಾದ ಹೆಣ್ಣುಜೀವ........

ಈ ಕೃತಿ, ಹತ್ತೊಂಬತ್ತನೆಯ ಶತಮಾನದ ರಷ್ಯದ ಕಲಾತ್ಮಕ ಪ್ರತ್ಯುತ್ಪಾದನೆ. ಇದು ಬರಡು ಗದ್ಯವಲ್ಲ, ಸುಂದರ ಕಾವ್ಯದಂತಿರುವ ಹೃದಯಸ್ಪರ್ಶಿಯಾದ ಕಾದಂಬರಿ.

—ಮುನ್ನುಡಿಯಿಂದ.

---

ಒಂದು ರೂಪಾಯಿ